ಮೈಸೂರುವಿಶ್ವವಿದ್ಯಾನಿಲಯಕರ್ಣಾಟಕಗ್ರಂಥಾವಳಿ—೧.

# ಆಂಗ್ಲೇಯರಾಜ್ಯಭಾರಚರಿತ್ರೆ

ಸಿ. ಕೆ. ವೆಂಕಟರಾಮಯ್ಯ, ಬಿ. ಎ.
ಅವರಿಂದ ವಿರಚಿತವಾದುದು.




ಮೈಸೂರು
... ಬ್ರ್ಯಾಂಚ್ ಪ್ರೆಸ್ಸಿನಲ್ಲಿ ಮುದ್ರಿತವಾಯಿತು.
೧೯೨೦

ಮೈಸೂರುವಿಶ್ವವಿದ್ಯಾನಿಲಯಕರ್ಣಾಟಕಗ್ರಂಥಾವಳಿ—೧.

# ಆಂಗ್ಲೇಯರಾಜ್ಯಭಾರಚರಿತ್ರೆ

ಸಿ. ಕೆ. ವೆಂಕಟರಾಮೈಯ್ಯ, ಬಿ. ಎ.
ಅವರಿಂದ ವಿರಚಿತವಾದುದು.






ಮೈಸೂರು
ಗೌರ್ನ್‌ಮೆಂಟ್ ಬ್ರ್ಯಾಂಚ್ ಪ್ರೆಸ್ಸಿನಲ್ಲಿ ಮುದ್ರಿತವಾಯಿತು
೧೯೨೦

## ಪೀಠಿಕೆ.

ಇಂಗ್ಲೆಂಡು ದೇಶದ ರಾಜ್ಯಭಾರಕ್ರಮವು ಅತ್ಯಂತ ಶ್ರೇಷ್ಠವಾದುದಾಗಿರುತ್ತದೆ. ಇದರಲ್ಲಿ, ಪ್ರಜಾಪ್ರಭುತ್ವ, ನಿರಂಕುಶಪ್ರಭುತ್ವ ಮುಂತಾದ ರಾಜ್ಯಭಾರ ಕ್ರಮಗಳಲ್ಲಿಯ ಸಾರಭೂತವಾದ ಮತ್ತು ಸುಖದಾಯಕವಾದ ತತ್ವಗಳೆಲ್ಲಾ ಅಡಗಿರುತ್ತವೆ. ಇಂತಹ ಶ್ರೇಷ್ಠತರವಾದ ರಾಜ್ಯಭಾರಕ್ರಮದ ಚರಿತ್ರೆಯನ್ನು ಪ್ರತಿಯೊಬ್ಬರೂ ತಿಳಿದುಕೊಳ್ಳುವುದು ಆವಶ್ಯಕ. ಆದುದರಿಂದ, ಈ ವಿಚಾರದಲ್ಲಿ ಕರ್ಣಾಟಭಾಷಾಸೇವೆಯನ್ನು ಮಾಡಬೇಕೆಂಬ ಕುತೂಹಲದಿಂದ ಈಪುಸ್ತಕವನ್ನು ಬರೆದಿರುತ್ತೇನೆ.

ಈ ಪುಸ್ತಕವನ್ನು ಮಿ॥ ರ್‍ಯಾನ್ಸಮ್ ಅವರು ಇಂಗ್ಲಿಷ್ ಭಾಷೆಯಲ್ಲಿ ಬರೆದಿರುವ "ರೈಜ಼್ ಆಫ್ ಕಾನ್‌ಸ್ಟಿಟ್ಯೂಷನಲ್ ಗವರ್ನ್ಮೆಂಟ್ ಇನ್ ಇಂಗ್ಲೆಂಡ್" ಎಂಬ ಪುಸ್ತಕದ ಆಧಾರದ ಮೇಲೆ ಬರೆದಿರುತ್ತೇನೆ. ಆದರೂ ಬಹಳ ವಿಸ್ತಾರವಾಗಿರುವ ವಿಷಯಗಳನ್ನು ಸಂಕ್ಷೇಪ ಮಾಡಿರುವುದಲ್ಲದೆ ತೀರ ಸಂಕ್ಷೇಪವಾಗಿದ್ದ ಕಡೆಗಳಲ್ಲಿ ಸ್ಟಬ್ಸ್ (Stubbs), ಫ್ರೀಮ್ಯಾನ್ (Freeman), ಮುಂತಾದ ಪ್ರಸಿದ್ಧ ಚರಿತ್ರಲೇಖಕರ ಗ್ರಂಥಗಳ ಸಹಾಯದಿಂದ ಪುಷ್ಟೀಕರಿಸಿರುತ್ತೇನೆ. ನನಗೆ ದೊರೆತ ಪ್ರೊಫೆಸರ್ ರ್‍ಯಾನ್ಸಮ್ ಅವರ ಗ್ರಂಥದಲ್ಲಿ ೧೮೮೩ನೆಯ ಇಸವಿಯವರೆಗೆ ನಡೆದ ಸಂಗತಿಗಳು ಮಾತ್ರವೇ ಇದ್ದುದರಿಂದ ಉಳಿದ ವಿಚಾರಗಳನ್ನು ಇತರ ಗ್ರಂಥಗಳಿಂದ ಸಂಗ್ರಹಿಸಿ ಸೇರಿಸಿರುವುದು ಮಾತ್ರವಲ್ಲದೆ ಈಚೀಚೆಗೆ ರಾಜ್ಯಭಾರಕ್ರಮದಲ್ಲಿ ನಡೆದಿರುವ ಬದಲಾವಣೆಗಳ ವಿಷಯವನ್ನೂ ಸಹ ಸೇರಿಸಿರುತ್ತೇನೆ.

ಕನ್ನಡಿಗರಿಗೆ ಈ ಪುಸ್ತಕದಿಂದ ಸ್ವಲ್ಪಮಟ್ಟಿಗಾದರೂ ಪ್ರಯೋಜನವಾದರೆ ನನ್ನ ಶ್ರಮವು ಸಾರ್ಥಕವಾಯಿತೆಂದು ಭಾವಿಸುವೆನು.

ಬೆಂಗಳೂರು,
ಸೆಪ್ಟೆಂಬರ್ ೧೯೧೯.

ಇತಿ
ಸಿ. ಕೆ. ವೆಂಕಟರಾಮಯ್ಯ.




# ವಿ ಷ ಯಾ ನು ಕ್ರ ಮ ಣಿ ಕೆ.

---



---




# ಆಂಗ್ಲೇಯ ರಾಜ್ಯಭಾರ ಚರಿತ್ರೆ.

## ಮೊದಲನೆಯ ಪ್ರಕರಣ.

ಈ ಪ್ರಪಂಚದಲ್ಲಿ ಅನೇಕ ದೇಶಗಳಿರುತ್ತವೆ. ಒಂದೊಂದು ದೇಶದಲ್ಲಿಯೂ ಅಲ್ಲಿಯ ಜನರ ನಡೆನುಡಿಗಳಿಗನುಸಾರವಾದ ರಾಜ್ಯಭಾರಕ್ರಮವಿರುತ್ತದೆ. ಇಂತಹ ರಾಜ್ಯಭಾರಕ್ರಮಗಳಲ್ಲೆಲ್ಲಾ ಇಂಗ್ಲೆಂಡುದೇಶದ ರಾಜ್ಯಭಾರಕ್ರಮವೇ ಅತ್ಯುತ್ತಮವಾದುದು. ಇದು ಯಾವೊಂದು ಕಾಲದಲ್ಲಾಗಲೀ, ಇಲ್ಲವೆ ಯಾವೊಬ್ಬ ಮನುಷ್ಯನಿಂದಾಗಲೀ ಸ್ಥಾಪಿತವಾಗಲಿಲ್ಲ. ಈ ರಾಜ್ಯಭಾರಕ್ರಮವು ಬಹುಕಾಲದಿಂದಲೂ ಕಾಲಾನುಗುಣವಾಗಿ ಪರಿವರ್ತಿಸುತ್ತಾ ಬಂದು, ಈಗ ಉತ್ತಮಸ್ಥಿತಿಯನ್ನು ಹೊಂದಿರುತ್ತದೆ. ಆದರೂ ರಾಜ್ಯಭಾರಕ್ಕೆ ಅಸ್ಥಿಪಂಜರದಂತಿರುವ ಮುಖ್ಯವಿಷಯಗಳು ಮಾತ್ರ ಮಾರ್ಪಟ್ಟಿಲ್ಲ. ಆಂಗ್ಲೇಯರು ಸ್ವಾತಂತ್ರ್ಯಪ್ರಿಯರು; ಸಾಂಕುಶಪ್ರಭುತ್ವದಲ್ಲಿ ಅಭಿರುಚಿಯನ್ನಿಟ್ಟು ಅದನ್ನೇ ಅವಲಂಬಿಸತಕ್ಕವರು; ನ್ಯಾಯಸ್ಥಾನಗಳ ಮೇಲ್ವಿಚಾರಣೆಯನ್ನು ತಮ್ಮ ಕೈಯಲ್ಲಿಯೇ ಇಟ್ಟುಕೊಂಡು, ತಮಗೆ ಬೇಕಾದ ನ್ಯಾಯನಿಬಂಧನೆಗಳನ್ನು ತಾವೇ ಮಾಡಿಕೊಳ್ಳತಕ್ಕವರು; ಕಂದಾಯವನ್ನು ವಿಧಿಸುವ ಅಧಿಕಾರವು ತಮ್ಮ ಕೈಬಿಟ್ಟು ಹೋಗಕೂಡದೆಂಬುದೇ ಅವರ ಕೋರಿಕೆ. ಆಂಗ್ಲೇಯರು ಈ ಅಧಿಕಾರಗಳನ್ನೆಲ್ಲಾ ತಮ್ಮ ವಶದಲ್ಲಿಯೇ ಇಟ್ಟುಕೊಂಡು, ತಮ್ಮಮೇಲೆ ಹೊತ್ತಿರುವ ಕಾರ್ಯಭಾರವನ್ನರಿತು ಅದಕ್ಕನುಸಾರವಾಗಿ ವರ್ತಿಸುತ್ತಿದಾರೆ. ಕಾಲಾನುಗುಣವಾಗಿ ಒಂದೊಂದುವೇಳೆ ಈ ಸ್ವಾತಂತ್ರ್ಯವು ಅವರ ಕೈಬಿಟ್ಟು ಹೋಗಿದ್ದರೂ, ಅವರು ಅದಕ್ಕಾಗಿ ಹೋರಾಡಿ, ಮತ್ತೆ ಮತ್ತೆ ಅದನ್ನು ತಮ್ಮ ವಶಪಡಿಸಿಕೊಂಡು ಬಂದಿರುತ್ತಾರೆ.

ಮೊದಲು ಎಲ್ಬ್ ನದೀತೀರದಲ್ಲಿ ವಾಸಮಾಡುತ್ತಿದ್ದ ತಮ್ಮ ಮೂಲಪುರುಷರಂತೆಯೇ ಈಗಿನ ಇಂಗ್ಲೀಷರು ಸ್ವಾತಂತ್ರ್ಯಪ್ರಿಯರಾಗಿ ಸಾಂಕುಶಪ್ರಭುತ್ವವನ್ನವಲಂಬಿಸಿರುತ್ತಾರೆ. ಈ ಮೂಲಪುರುಷರ ವಿಷಯವಾಗಿ ಟ್ಯಾಸಿಟಸ್ (Tacitus) ಎಂಬ ರೋಮನ್ ಇತಿಹಾಸಲೇಖಕನು ಚರಿತ್ರೆಯೊಂದನ್ನು ಬರೆದಿರುತ್ತಾನೆ. ಆತನು ಅವರ ರಾಜ್ಯಭಾರಕ್ರಮವನ್ನು ಕುರಿತು

ಹೀಗೆ ವರ್ಣಿಸಿರುತ್ತಾನೆ:— ಕ್ರಿಸ್ತಶಕ ಒಂದನೆಯ ಶತಮಾನದಲ್ಲಿ ಈ ಮೂಲ ಪುರುಷರು ಜರ್ಮನಿಯಲ್ಲಿರುವ ಎಲ್ಬ್‌ನದೀತೀರದಲ್ಲಿ ವಾಸಮಾಡುತ್ತಿದ್ದರು. ಆಗಾಗ ತಮ್ಮಮೇಲೆ ಬೀಳುತ್ತಿದ್ದ ರೋಮನ್‌ಜನರನ್ನು ಬಡಿದಟ್ಟಿ, ತಮ್ಮ ಸ್ವಾತಂತ್ರ್ಯವನ್ನು ಕಾಪಾಡಿಕೊಂಡು, ಬೇಟೆಯಿಂದಲೂ, ಪಶುಪಾಲನ ದಿಂದಲೂ, ಅವರು ಜೀವನಮಾಡುತ್ತಿದ್ದರು. ಅವರು ತಮ್ಮಲ್ಲಿ ಹಿರಿಯರಾಗಿದ್ದವರನ್ನು ಸಭೆಸೇರಿಸಿ ಆ ಸಭೆಯವರ ಅನುಮತಿಯ ಮೇರೆಗೆ ತಮ್ಮ ಕೆಲಸ ಗಳನ್ನು ನೆರವೇರಿಸುತ್ತಿದ್ದರು. ಈ ಸಭೆಯು ಒಂದು ದೊಡ್ಡ ಮರದ ಕೆಳಗೆ ಇಲ್ಲವೇ ಸಮೀಪದಲ್ಲಿದ್ದ ಒಂದು ಗುಡ್ಡದಮೇಲೆ ಸೇರುತ್ತಿತ್ತು. ಸದಸ್ಯ ರೆಲ್ಲರೂ ಆಯುಧಪಾಣಿಗಳಾಗಿ ಬಂದುಕುಳಿತುಕೊಂಡು ತಮ್ಮಲ್ಲಿ ವಾಚಾಳ ರಾಗಿದ್ದವರ ಭಾಷಣಗಳನ್ನು ಆಲಿಸಿ ಕೇಳುತ್ತಿದ್ದರು. ಅವರಭಾಷಣಗಳಲ್ಲಿದ್ದ ಸ್ವಾರಸ್ಯವಾದ ವಿಷಯವನ್ನು ತಾವು ಅಭಿನಂದಿಸುತ್ತಿದ್ದುದನ್ನು ತಮ್ಮ ಆಯುಧ ಚಾಲನದಿಂದ ಹುಟ್ಟಿದ ಶಬ್ದದಿಂದ ಸೂಚಿಸುತ್ತಿದ್ದರು. ಈ ಸಣ ಸಭೆಯೇ ಕಾರ್ಯಗಳನ್ನೆಲ್ಲಾ ನಡೆಯಿಸುತ್ತಿತ್ತು. ಯುದ್ಧವನ್ನಾರಂಭಿಸುವುದೂ, ಸಮಾಧಾನ ಮಾಡಿಕೊಳ್ಳುವುದೂ, ಅಧಿಕಾರಿಗಳನ್ನು ಆರಿಸುವುದೂ ಈ ಸಭೆಯ ಕೆಲಸಗಳೇ ಆಗಿದ್ದುವು. ಸಭೆಯು ಆಗಾಗಮಾತ್ರವೇ ನೆರೆಯುತ್ತಿದ್ದುದರಿಂದ ಸಭೆಯು ಇಲ್ಲದ ವೇಳೆಯಲ್ಲಿ ಆಡಳಿತಗಳನ್ನು ನೆರವೇರಿಸುವುದಕ್ಕಾಗಿ ಯುದ್ಧ ಕಾಲದಲ್ಲಿ ಡ್ಯೂಸಸ್ (Duces) ಎಂಬ ಅಧಿಕಾರಿಗಳೂ, ಸಮಾಧಾನವು ನೆಲೆ ಗೊಂಡಿದ್ದ ಕಾಲದಲ್ಲಿ ಈಲ್ಡರ್‌ಮೆನ್ (Ealdermen) ಎಂಬ ಅಧಿಕಾರಿಗಳೂ ನಿಯಮಿತರಾಗುತ್ತಿದ್ದರು. ಈ ಈಲ್ಡರ್‌ಮೆನ್ ಎಂಬ ಪ್ರಮುಖರಿಗೆ ವಿಶೇಷ ಅಧಿಕಾರವಿರುತ್ತಿತ್ತು. ಸಭೆಯು ಸೇರದೇ ಇದ್ದವೇಳೆಯಲ್ಲಿ ಈ ಪ್ರಮುಖ ರಲ್ಲಿ ಒಬ್ಬೊಬ್ಬನೂ ಒಂದೊಂದು ಭಾಗದ ಆಡಳಿತಗಳನ್ನು ನಡೆಯಿಸುತ್ತಿದ್ದನು. ಆದರೆ ಸಭೆಯು ನಡೆಯುತ್ತಿದ್ದ ವೇಳೆಯಲ್ಲಿ ಮಾತ್ರ ಈ ಅಧಿಕಾರಿ ಗಳೆಲ್ಲರೂ ಒಟ್ಟುಗೂಡಿ ಒಂದು ಉಪಸಭೆಯನ್ನೇರ್ಪಡಿಸಿಕೊಂಡು ತಾವು ಆಡಳಿತಗಳನ್ನು ನಡೆಯಿಸುವುದರಲ್ಲಿ, ದೊಡ್ಡ ಸಭೆಯವರು ಅನುಮತಿಸ ಬೇಕಾಗಿದ್ದ ವಿಷಯುಗಳನ್ನು ನಿರ್ಧರಮಾಡಿಕೊಳ್ಳುತ್ತಿದ್ದರು. ರಾಜಕೀಯ ಕಾರ್ಯಗಳನ್ನು ನಡೆಯಿಸುವುದರಲ್ಲಿ ಸಮರ್ಥರಾಗಿದ್ದವರಿಗೆ ಮಾತ್ರವೇ ಈ ಮುಖ್ಯಸ್ಥರ ಪದವಿಯು ದೊರೆಯುತ್ತಿತ್ತು. ಸೈನ್ಯಾಧಿಪತಿಗಳಾಗಲು ಅರ್ಹ ತೆಯು ಇದ್ದವರಿಗೆ ಡ್ಯೂಸಸ್ ಎಂಬ ಅಧಿಕಾರಗಳಾಗುತ್ತಿದ್ದುವು. ಸಮಾಧಾನ ಕಾಲದಲ್ಲಿ ಈಲ್ಡರ್‌ಮೆನ್ ಎಂಬ ಅಧಿಕಾರಿಗಳು ಆಡಳಿತಗಳನ್ನು ನಡೆಯಿಸುತ್ತಿದ್ದಂತೆ, ಯುದ್ಧಕಾಲದಲ್ಲಿ ಡ್ಯೂಸಸ್ ಎಂಬ ಅಧಿಕಾರಿಗಳು ಸರ್ವಾಧಿಕಾರವನ್ನು ವಹಿಸುತ್ತಿದ್ದರು. ಪ್ರಾಪ್ತವಯಸ್ಕನಾಗಿದ್ದ ಪ್ರತಿಯೊಬ್ಬನಿಗೂ ಯುದ್ಧ

ಮಾಡುವುದಕ್ಕೆ ಬರುತ್ತಿತ್ತು. ಆದುದರಿಂದ, ಎಲ್ಲರೂ ಯುದ್ಧಕ್ಕೆ ಹೊರಡುತ್ತಿದ್ದರು. ಮೇಲೆಹೇಳಿದಂತೆ ಸಭೆಯು ಅಧಿಕಾರಿಗಳನ್ನು ಆರಿಸುತ್ತಿದ್ದುದೂ, ಆಡಳಿತಗಳನ್ನು ನೆರವೇರಿಸುತ್ತಿದ್ದುದೂ ಮಾತ್ರವೇ ಅಲ್ಲದೆ, ಅಪರಾಧಿಗಳನ್ನು ಶಿಕ್ಷಿಸುತ್ತಲೂ, ವಿವಾದಗಳನ್ನು ತೀರ್ಮಾನಮಾಡುತ್ತಲೂ ಇತ್ತು. ಹಿಂದಿನ ಕಾಲದಲ್ಲಿ ಜರ್ಮನ್‌ಜನಾಂಗವು ಈಗಿನಂತೆ ಒಕ್ಕಟ್ಟಾಗಿರದೆ ಸಣ್ಣ ಸಣ್ಣ ಗುಂಪುಗಳಾಗಿ ವಿಭಾಗವಾಗಿದ್ದುದರಿಂದ ಒಂದೊಂದು ಗುಂಪಿನಲ್ಲಿಯೂ, ಮೇಲೆ ಹೇಳಿದಂತಹ ಒಂದೊಂದುಸಭೆಯು ಇರುತ್ತಿತ್ತು. ಒಂದೊಂದು ಗುಂಪಿನವರೂ, ಒಂದೊಂದು ಸಣ್ಣರಾಷ್ಟ್ರವನ್ನು ಕಟ್ಟಿಕೊಂಡು ತಮ್ಮ ರಾಜ್ಯದ ಆಡಳಿತಗಳನ್ನು ನಡೆಯಿಸುತ್ತಿದ್ದರು. ಕೆಲವು ಗುಂಪುಗಳಲ್ಲಿ ದೊರೆಗಳಿದ್ದರು. ಆದರೆ ಹಿಂದೆ ಬ್ರಿಟನ್ನಿಗೆ ಬಂದುನೆಲೆಸಿದ್ದ ಈಗಿನ ಇಂಗ್ಲಿಷರ ಮೂಲಪುರುಷರಲ್ಲಿ ದೊರೆಯು ಇರಲಿಲ್ಲ. ಅವರ ಸಭೆಯೇ ಎಲ್ಲಾ ಆಡತಳಿಗಳನ್ನೂ ನಡೆಯಿಸುತ್ತಿತ್ತು.

ರೋಮನ್‌ಜನರು ಬ್ರಿಟಿಷ್ ದ್ವೀಪಗಳಿಂದ ಹೊರಟುಹೋದ ಬಳಿಕ ಬ್ರಿಟನರಿಗೆ (Britons) ಪಿಕ್ಟರು (Picts) ಮತ್ತು ಸ್ಕಾಟರು ಎಂಬ ಕಾಡುಜನರ ಹಾವಳಿಯು ಬಲವಾಯಿತು. ಬ್ರಿಟನರು ಇದನ್ನು ತಾಳಲಾರದೆ, ಜರ್ಮನಿಯಲ್ಲಿದ್ದ ಮೂಲಪುರುಷರನ್ನು ತಮ್ಮಲ್ಲಿಗೆ ಬಂದು, ಕಾಡುಜನರ ಹಾವಳಿಯಿಂದ ತಮ್ಮನ್ನು ಉದಾರಮಾಡಬೇಕು ಎಂದು ಕೇಳಿಕೊಂಡರು. ಆ ಮೂಲಪುರುಷರು ಜರ್ಮನಿಯನ್ನು ಬಿಟ್ಟು ಬ್ರಿಟನ್ನಿಗೆ ತಂಡತಂಡವಾಗಿ ಬಂದಿಳಿದು, ಕಾಡುಜನರ ಹಾವಳಿಯನ್ನಡಗಿಸಿ ಬ್ರಿಟನ್ನಿನಲ್ಲಿಯೇ ನೆಲೆಸಿದರು. ಅಲ್ಲದೆ ಫಲವತ್ತಾದ ಭೂಪ್ರದೇಶಗಳನ್ನು ಬ್ರಿಟನರಿಂದ ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡರು. ಬ್ರಿಟನರು ಬಂಜರು ಭೂಮಿಯನ್ನು ಸಾಗುವಳಿ ಮಾಡಿಕೊಂಡಿರಬೇಕಾಯಿತು. ಮೂಲಪುರುಷರಲ್ಲಿ ಒಂದೊಂದು ಗುಂಪಿನವರೂ ಒಂದೊಂದು ಪ್ರಾಂತದಲ್ಲಿ ನಿಂತರು. ಹೀಗೆ ಅವರ ವಶಕ್ಕೆ ಬಂದ ಪ್ರಾಂತಗಳಿಗೆ ವೆಸೆಕ್ಸ್, ಸಸೆಕ್ಸ್, ವಿಲ್ಟ್‌ಷೈರ್, ನಾರ್‌ಫಕ್ ಮೊಂತಾದ ಹೆಸರುಗಳು ಬಂದುವು. ಈ ಪ್ರಾಂತಗಳನ್ನು, ನೂರು ಸಂಸಾರಗಳನ್ನೊಳಕೊಂಡ, ಅಥವಾ ನೂರುಜನ ಯೋಧರನ್ನೊದಗಿಸುವ ಪ್ರದೇಶಗಳಾಗಿ ವಿಭಾಗಿಸಿ, ಇಂತಹ ಪ್ರದೇಶಗಳಿಗೆ ಹಂಡ್ರೆಡ್‌ಗಳೆಂದು ಹೆಸರಿಟ್ಟರು.

ಈ ಮೂಲಪುರುಷರು ಬ್ರಿಟಿಷ್‌ದ್ವೀಪಗಳಿಗೆ ಬಂದೊಡನೆಯೇ ಅವರ ರಾಜ್ಯಭಾರಕ್ರಮವು ಸ್ವಲ್ಪ ಬದಲಾಯಿಸಿ, ಅವರಲ್ಲಿ ದೊರೆತನಕ್ಕಾರಂಭವಾಯಿತು. ತಮ್ಮ ಕೈಕೆಳಗಿನ ಜನರನ್ನು ಬಹುದೂರದಿಂದ ಕರೆತಂದು, ಕಾಡು

ಜನರನ್ನು ನಿಗ್ರಹಿಸುವುದರಲ್ಲಿ ಬಹಳ ಕಷ್ಟಪಟ್ಟಿದ್ದ ಈಲ್ಡರ್‌ಮೆನ್‌ಗಳಲ್ಲಿ ಪ್ರಮುಖರಾಗಿದ್ದವರು ದೊರೆಗಳಾದರು. ಇಂತಹ ಪ್ರಮುಖನೂ, ಅವನ ಕೈ ಕೆಳಗಿನಜನರೂ, ಆಕ್ರಮಿಸಿಕೊಂಡಿದ್ದ ಒಂದೊಂದು ಪ್ರದೇಶವೂ ಒಂದೊಂದು ರಾಜ್ಯವಾಯಿತು. ಹೀಗೆ ಅನೇಕ ರಾಜ್ಯಗಳೇರ್ಪಟ್ಟುವು. ಕಾಲಕ್ರಮದಲ್ಲಿ ಅವುಗಳಿಗೆ ಪರಸ್ಪರವಾಗಿ ಹೋರಾಟವು ಆರಂಭವಾಯಿತು. ಸಣ್ಣ ಸಣ್ಣ ರಾಜ್ಯಗಳು ದೊಡ್ಡದೊಡ್ಡ ರಾಜ್ಯಗಳಿಗೆ ವಶವಾಗುತ್ತಾ ಬಂದು, ಕೊನೆಗೆ ಹೆಪ್ಟಾರ್ಕಿ (ಸಪ್ತರಾಜ್ಯ) ಎಂಬ ಅಭಿಧಾನದಿಂದ ಏಳು ದೊಡ್ಡರಾಜ್ಯಗಳೇರ್ಪಟ್ಟುವು. ವಿಜಿತವಾದ ಸಣ್ಣ ಸಣ್ಣ ರಾಜ್ಯಗಳಿಗೆ ಷೈರುಗಳೆಂಬ ಹೆಸರು ಬಂತು. ಷೈರುಗಳು ಈಲ್ಡರ್‌ಮೆನ್ ಎಂಬ ಪ್ರಮುಖರ ಅಧಿಕಾರಕ್ಕೆ ಒಳಪಟ್ಟುವು. ಆದರೂ, ನಿರಂಕುಶಪ್ರವರ್ತನೆಗೆ ಅವಕಾಶವಿಲ್ಲದಂತೆ ಷೈರ್‌ಮೂಟ್ ಎಂಬ ಸಭೆಯು ಏರ್ಪಟ್ಟು ಷೈರಿಗೆ ಸಂಬಂಧಪಟ್ಟ ಕೆಲಸಗಳನ್ನು ನಡೆಯಿಸುವುದರಲ್ಲಿ ಈಲ್ಡರ್‌ಮ್ಯಾನ್ ಎಂಬ ಮುಖ್ಯಸ್ಥನಿಗೆ ಈ ಸಭೆಯು ಸಹಾಯಮಾಡುವಂತಾಯಿತು. ಷೈರಿನ ಕೆಲಸಗಳು ಷೈರ್‌ಮೂಟ್‌ಸಭೆಯಿಂದ ನಡೆಯುತ್ತಿದ್ದಂತೆಯೇ ಅನೇಕ ಷೈರುಗಳಿಂದ ಕೂಡಿದ ಒಟ್ಟುರಾಜ್ಯದ ಆಡಳಿತಗಳು ವಿಟನಾಜಿಮೋಟ್ ಎಂಬ ಸಭೆಯಿಂದ ನೆರವೇರುತ್ತಿದ್ದುವು. ಒಂದೊಂದು ರಾಜ್ಯಕ್ಕೂ ಒಂದೊಂದು ವಿಟನಾಜಿಮೋಟ್ ಸಭೆಯು ಇತ್ತು. ಷೈರ್‌ಮೂಟ್ ಸಭೆಯಲ್ಲಿ ದೊರೆಯ ಹಿತಚಿಂತಕನಾದ ಷೆರೀಫ್ (sheriff) ಎಂಬ ಅಧಿಕಾರಿಯು ಸದಸ್ಯನಾಗಿದ್ದುಕೊಂಡು ದೊರೆಗೆ ಅನುಕೂಲವಾಗುವಂತೆ ಕಾರ್ಯಗಳನ್ನು ನಡೆಯಿಸಲು ಯತ್ನಿಸುತ್ತಿದ್ದನು. ಒಂದೊಂದು ಷೈರಿನಲ್ಲಿಯೂ ಅನೇಕ ಹಂಡ್ರೆಡ್‌ಗಳಿದ್ದುವು. ಒಂದೊಂದು ಹಂಡ್ರೆಡ್ಡಿನಲ್ಲಿಯೂ, ಹಂಡ್ರೆಡ್‌ಮ್ಯಾನ್ ಎಂಬ ಅಧಿಕಾರಿಯೂ, ಹಂಡ್ರೆಡ್‌ಮೂಟ್ ಎಂಬ ಸಭೆಯೂ ಇದ್ದುಕೊಂಡು ಅಲ್ಲಿಯ ಕಾರ್ಯಗಳನ್ನು ನಡೆಯಿಸಬೇಕಾಗಿತ್ತು. ಹೀಗೆಯೇ, ಒಂದೊಂದು ಪಟ್ಟಣದಲ್ಲಿಯೂ ರೀವ್ ಎಂಬ ಅಧಿಕಾರಿಯೂ, ಮತ್ತು ಟೌನ್‌ಮೂಟ್ ಎಂಬ ಸಭೆಯೂ ಇದ್ದುಕೊಂಡು ಅಲ್ಲಿಯ ಕಾರ್ಯಗಳನ್ನು ಜರುಗಿಸುವ ಪದ್ಧತಿಯು ಇತ್ತು. ಹೀಗೆ ಒಂದೊಂದು ರಾಜ್ಯದಲ್ಲಿಯೂ ಅನುವಾದ ಆಡಳಿತದ ಕ್ರಮವೂ, ಐಕಮತ್ಯವೂ ಇದ್ದು ಅಲ್ಲಿಯ ಕೆಲಸಗಳು ಸಮರ್ಪಕವಾಗಿ ನಡೆಯುತ್ತಿದ್ದುವು. ಆದರೆ ರಾಜ್ಯಗಳಿಗೆ ಮಾತ್ರ ಪರಸ್ಪರವಾಗಿ ಐಕಮತ್ಯವಿಲ್ಲದೆ ಹೊಡೆದಾಟವು ನಡೆಯುತ್ತಿತ್ತು. ಜನರೆಲ್ಲರೂ ಕ್ರೈಸ್ತಮತವನ್ನವಲಂಬಿಸಿದ ಬಳಿಕ ಈ ನ್ಯೂನತೆಯು ಸ್ವಲ್ಪ ಮಟ್ಟಿಗೆ ಪರಿಹಾರವಾಗಿ, ಚರ್ಚ್ ಕೌನ್ಸಿಲ್‌ಗಳೆಂಬ ಸಭೆಗಳು ಏರ್ಪಟ್ಟು, ಆ ಸಭೆಗಳಿಗೆ ಎಲ್ಲಾ ರಾಜ್ಯಗಳಿಂದಲೂ ಆರಿಸಿದ ಪಾದ್ರಿಗಳೂ ಬರುವಂತಾಯಿತು. ಪಾದ್ರಿಗಳೆಲ್ಲರೂ ಒಟ್ಟಿಗೆ ಸೇರಿ ಕ್ರೈಸ್ತಮತಕ್ಕೆ ಸೇರಿದ್ದ ಇಂಗ್ಲೆಂಡಿನ ದೊರೆ

ಗಳಲ್ಲೆಲ್ಲಾ ಹೆಚ್ಚು ಬಲಶಾಲಿಯಾಗಿದ್ದವನಿಗೆ, 'ಬ್ರೆಟ್‌ವಾಲ್ಡ' ಅಥವಾ ಅತ್ಯಂತ ಬಲಿಷ್ಠನಾದದೊರೆ ಎಂದು ಹೆಸರುಕೊಡುತ್ತಿದ್ದರು. ಆಗಿನ ಕಾಲದಲ್ಲಿರಾಜ್ಯಗಳಿಗೆ ಪರಸ್ಪರವಾಗಿ ನಡೆಯುತ್ತಿದ್ದ ಯುದ್ಧಗಳ ದೆಸೆಯಿಂದ ಇಂದು ಬಲಿಷ್ಠನಾಗಿದ್ದು ಬ್ರೆಟ್‌ವಾಲ್ಡ ಎಂಬ ಹೆಸರನ್ನು ಪಡೆದಿದ್ದವನು ನಾಳೆ ಮೂಲೆಗೆಕುಳಿತುಕೊಳ್ಳುತ್ತಿದ್ದನು; ಬಳಿಕ ಬ್ರೆಟ್‌ವಾಲ್ಡ ಎಂಬ ಹೆಸರು ಹೊಸದಾಗಿ ಬಲಿಷ್ಠನಾದ ಮತ್ತೊಬ್ಬನಿಗೆ ಬರುತ್ತಿತ್ತು. ಅಂತು, ತಾತ್ಕಾಲಿಕವಾಗಿ ಕ್ರೈಸ್ತಮತಾವಲಂಬಿಗಳಾದ ದೊರೆಗಳಲ್ಲೆಲ್ಲಾ ಯಾವನು ಅತ್ಯಂತಪ್ರಾಬಲ್ಯವನ್ನು ಹೊಂದಿರುತ್ತಿದ್ದನೋ, ಅವನಿಗೆ ಮಾತ್ರವೇ ಈ ಬಿರುದು ಸಲ್ಲುತ್ತಿತ್ತು.

ರಾಜ್ಯದ ಆಡಳಿತಗಳಿಗೆ ಕೇಂದ್ರಸ್ಥಾನವಾಗಿದ್ದುದು ವಿಟನಾಜಿಮೋಟ್ ಸಭೆ. ಈ ಸಭೆಯ ಅಧಿಕಾರಗಳು ಬಹಳ ಹೆಚ್ಚಾಗಿದ್ದುವು. ಆದರೂ ಸದಸ್ಯರು ಮಾತ್ರ ಸ್ವಲ್ಪಜನರೇ ಇದ್ದರು. ಸಾಮಾನ್ಯವಾಗಿ ಸದಸ್ಯರ ಸಂಖ್ಯೆಯು ಮೂವತ್ತು ಅಥವಾ ನಾಲ್ವತ್ತಕ್ಕೆ ಮೀರುತ್ತಿರಲಿಲ್ಲ. ಆದರೆ ರಾಜ್ಯವು ಬಹಳ ದೊಡ್ಡದಾಗಿದ್ದಾಗ ಮಾತ್ರ ಸದಸ್ಯರ ಸಂಖ್ಯೆಯು ನೂರರವರೆಗೂ ಹೋಗುತ್ತಿತ್ತು. ಈ ಸಭೆಯಲ್ಲಿರುತ್ತಿದ್ದ ಸದಸ್ಯರ ಕ್ರಮ ಹೇಗಿತ್ತೆಂದರೆ :—

(೧) ದೊರೆ (ಕೆಲವು ಮುಖ್ಯವಾದ ಸಂದರ್ಭಗಳಲ್ಲಿ ರಾಣಿಯೂ ರಾಜಸಂಸಾರಕ್ಕೆ ಸೇರಿದ ಇತರರೂ ಸಭೆಗೆ ಬರುವ ವಾಡಿಕೆಯಿತ್ತು.) (೨) ಷೈರುಗಳಲ್ಲಿ ಆಧಿಪತ್ಯ ಮಾಡುತ್ತಿದ್ದ ಈಲ್ಡರ್‌ಮೆನ್‌ಗಳೆಂಬ ಪ್ರಮುಖರು (೩) ಬಿಷಪ್ಪು (Bishops) ಗಳೆಂಬ ಮತಾಧಿಕಾರಿಗಳು. (೪) ರಾಜಸೇವಕರು. ಆಂಗ್ಲೇಯರ ಮೂಲಪುರುಷರು ಜರ್ಮನಿಯಲ್ಲಿದ್ದಾಗ ಈಲ್ಡರ್‌ಮೆನ್ ಎಂಬ ಪ್ರಮುಖರ ಕೈಕೆಳಗೆ ಅನೇಕ ಸೇವಕರಿದ್ದರು. ಪ್ರಮುಖರು ಅವರನ್ನು ತಮ್ಮ ಸಮಾನರಂತೆ ಗಣ್ಯವಾಗಿ ಭಾವಿಸುತ್ತಿದ್ದರು. ಪ್ರಮುಖರು ಇಂಗ್ಲೆಂಡಿಗೆ ಬಂದು ದೊರೆಗಳಾದಾಗ ಇವರೆಲ್ಲರೂ ದೊಡ್ಡ ಪದವಿಗೆ ಬಂದರು; ಕೊನೆಗೆ ಇವರೆಲ್ಲರೂ ವಿಟನಾಜಿಮೋಟ್ ಸಭೆಯಲ್ಲಿ ಕುಳ್ಳಿರುವಂತಾಯಿತು.

ವಿಟನಾಜಿಮೋಟ್‌ಸಭೆಯ ಅಧಿಕಾರವು ಬಹಳ ಹೆಚ್ಚಾಗಿತ್ತು :— (೧) ಈಸಭೆಯವರೇ ದೊರೆಯನ್ನು ಆರಿಸುತ್ತಿದ್ದರು. ಹೀಗೆ ಮಾಡುವುದರಲ್ಲಿ ಅವರು ಕೆಲವು ನಿಬಂಧನೆಗಳನ್ನನುಸರಿಸಿ ನಡೆಯಬೇಕಾಗಿತ್ತು. ಹೊಸದಾಗಿ ಪಟ್ಟಕ್ಕೆ ಬರುವಾತನು ರಾಜಮನೆತನದವನಾಗಿರಬೇಕಾಗಿತ್ತು. ವಯೋದೋಷದಿಂದ ರಾಜ್ಯವನ್ನಾಳುವುದಕ್ಕೆ ತಕ್ಕ ಸಾಮರ್ಥ್ಯವಿಲ್ಲದೇ ಇರುವಾಗಲೂ, ನಡ

ತೆಯು ಸಮರ್ಪಕವಾಗಿಲ್ಲದಿರುವಾಗಲೂ ಹೊರತು, ಉಳಿದ ವೇಳೆಯಲ್ಲೆಲ್ಲಾ ಹಿಂದಿನ ರಾಜನಿಗೆ ಅತಿಸಮೀಪವರ್ತಿಯಾದ ರಕ್ತಸಂಬಂಧಿಯನ್ನೇ ದೊರೆಯಾಗಿ ಆರಿಸಬೇಕಾಗಿತ್ತು. ಸಭೆಯವರು ಆರಿಸಿದಾತನು ದೊರೆಯಾಗಿರಲು ಜನಗಳೂ ಒಪ್ಪಿದ ಬಳಿಕ ಕಿರೀಟಧಾರಣಾಮಹೋತ್ಸವವು ನಡೆದು, ಚುನಾವಣೆಯ ಉದ್ದೇಶವು ಪೂರ್ತಿಯಾಗುತ್ತಿತ್ತು. (೨) ದೊರೆಯನ್ನು ಆರಿಸುವುದಕ್ಕೆ ಸಭೆಗೆ ಅಧಿಕಾರವಿದ್ದಂತೆಯೇ, ದೊರೆಯನ್ನು ಸಿಂಹಾಸನದಿಂದ ತಳ್ಳುವುದಕ್ಕೂ ಅದಕ್ಕೆ ಅಧಿಕಾರವಿತ್ತು. ಈ ಅಧಿಕಾರದ ಸಹಾಯದಿಂದ ನಾರ್ತಂಬರ್ಲೆಂಡಿನಲ್ಲಿ ಆಲ್‌ಕ್ರೆಡ್ ದೊರೆಯೂ ವೆಸೆಕ್ಸಿನಲ್ಲಿ ಸಿಜ್‌ಬರ್ಟ್ ದೊರೆಯೂ ಸಿಂಹಾಸನಚ್ಯುತರಾದರು. (೩) ಸದಸ್ಯರು ದೊರೆಯ ಸಮ್ಮತಿಯನ್ನು ಪಡೆದು ನಿಬಂಧನೆಗಳನ್ನು ರಚಿಸುತ್ತಿದ್ದರು. ಆಗಿನ ಕಾಲದಲ್ಲಿ ನಿಬಂಧನೆಗಳು ಅಷ್ಟೊಂದು ಹೆಚ್ಚಾಗಿರಲಿಲ್ಲ. (೪) ವಿಟನಾಜಿಮೋಟ್ ಸಭೆಯು ಕ್ರಿಮಿನಲ್ ಮತ್ತು ಸಿವಿಲ್ ವಿಚಾರಗಳನ್ನು ವ್ಯವಸ್ಥೆ ಮಾಡುವ ನ್ಯಾಯಸ್ಥಾನವಾಗಿತ್ತು. ಎಂದರೆ ಈ ಸಭೆಯವರು ಅಪರಾಧಿಗಳನ್ನು ವಿಚಾರಣೆಮಾಡಿ ಶಿಕ್ಷಿಸುತ್ತಿದ್ದರು; ಸ್ವತ್ತುಗಳ ವಿಷಯದಲ್ಲಿ ಹುಟ್ಟುವ ವಿವಾದಗಳನ್ನು ತೀರ್ಮಾನಿಸುತ್ತಿದ್ದರು: ಎಂತಹ ದೊಡ್ಡ ಮನುಷ್ಯರನ್ನು ವಿಚಾರಣೆ ಮಾಡುವುದಕ್ಕೂ ಈ ಸಭೆಗೆ ಅಧಿಕಾರವಿತ್ತು. (೫) ದೊಡ್ಡ ದೊಡ್ಡ ವಿಚಾರಗಳಲ್ಲಿ ವಿಟನಾಜಿಮೋಟ್ ಸಭೆಯವರ ಅನುಮತಿಯನ್ನು ಕೇಳುವುದು ಆವಶ್ಯಕವಾಗಿತ್ತು. ಕ್ರೈಸ್ತಮತವನ್ನು ಅವಲಂಬಿಸುವ ವಿಚಾರದಲ್ಲಿ ಸಭೆಯವರ ಅನುಮತಿಯನ್ನು ಕೇಳಿದುದೇ ಇದಕ್ಕೆ ನಿದರ್ಶನವಾಗಿರುತ್ತದೆ. (೬) ಸಭೆಯವರು ದೊರೆಯ ಅನುಮತಿಯನ್ನು ಪಡೆದು ಈಲ್ಡರ್‌ಮ್ಯಾನ್, ಬಿಷಪ್ ಮುಂತಾದ ಅಧಿಕಾರಿಗಳನ್ನು ನೇಮಿಸುತ್ತಿದ್ದರು. (೭) ಸರಕಾರಕ್ಕೆ ಸೇರಿ ಆದುವರೆಗೆ ಯಾರಿಗೂ ಕೊಡದೆಇದ್ದ ಭೂಪ್ರದೇಶಗಳನ್ನು ದೊರೆಯು ಇತರರಿಗೆ ಕೊಡುತ್ತಿದ್ದನು. ಆದರೆ ವಿಟನಾಜಿಮೋಟ್ ಸಭೆಯವರು ಒಪ್ಪಿದಲ್ಲದೆ ದೊರೆಯು ಹೀಗೆ ಮಾಡಲಾಗುತ್ತಿರಲಿಲ್ಲ.

**ದೊರೆಯ ಹಕ್ಕುಗಳು:—** ದೇಶಕ್ಕೆಲ್ಲಾ ಆತನೇ ಒಡೆಯನು. ರಾಜ್ಯವು ವಂಶಪಾರಂಪರ್ಯವಾಗಿ ಆತನಿಗೆ ಸೇರಿರತಕ್ಕುದು. ಆತನು ಪಟ್ಟಕ್ಕೆ ಬಂದೊಡನೆಯೇ ಕಿರೀಟಧಾರಣೆಯು ನಡೆಯತಕ್ಕುದು. ಆತನನ್ನು ಕೊಲ್ಲುವುದು ಮಹಾಪರಾಧ. ಆತನನ್ನು ಯಾರಾದರೂ ಕೊಲ್ಲುವುದಾದರೆ, ಹಾಗೆ ಮಾಡಿದವರು ಶಿಕ್ಷೆಯನ್ನನುಭವಿಸುವುದೂ ಅಲ್ಲದೆ, ದೊರೆಯ ಆತ್ಮೀಯರಿಗೆ ಅಪಾರವಾದ ದಂಡದ್ರವ್ಯವನ್ನು ಕೊಡತಕ್ಕುದು. ರಾಜನ ಸ್ವಂತ ಆಸ್ತಿಯಿಂದ ಬರುವ ಆದಾಯದ ಜೊತೆಗೆ ಅವನ ವೆಚ್ಚಕ್ಕಾಗಿ ಮತ್ತಷ್ಟು ಹಣ

ವನ್ನು ಕೊಡತಕ್ಕುದು. ನ್ಯಾಯಸ್ಥಾನಗಳಲ್ಲಿ ವಿಧಿಸಿದ ದಂಡದ್ರವ್ಯಗಳಿಂದ ಬಂದ ಆದಾಯದಲ್ಲಿ ದೊರೆಗೂ ಒಂದುಭಾಗವು ಸಲ್ಲತಕ್ಕುದು. ಭೂಮಿಯಲ್ಲಿ ಸಿಕ್ಕಿದ ನಿಧಿನಿಕ್ಷೇಪಗಳು ಆತನಿಗೆ ಸೇರತಕ್ಕುವು. ಗಣಿಗಳೂ, ಉಪ್ಪಿನ ಮಾರಾಟದದ್ರವ್ಯವೂ, ಆತನ ಸ್ವತ್ತೇ. ಇವುಗಳನ್ನೆಲ್ಲಾ ವಿಚಾರಿಸಿಕೊಳ್ಳುವುದಕ್ಕಾಗಿಯೇ ರಾಜನು ಷೆರೀಫ್ ಎಂಬ ಅಧಿಕಾರಿಯನ್ನು ನೇಮಿಸಿದ್ದುದು. ಯುದ್ಧಕಾಲದಲ್ಲಿ ದೊರೆಗೆ ಸಂಪೂರ್ಣ ಸ್ವಾತಂತ್ರ್ಯವಿರತಕ್ಕುದು. ಯುದ್ಧದ ವಿಷಯದಲ್ಲಿ ಆತನು ತನ್ನ ಮನಸ್ಸು ಬಪ್ಪಿದಂತೆ ವರ್ತಿಸಬಹುದು.

ಹಿಂದಿನ ಕಾಲದಲ್ಲಿ ದೊರೆಗೂ ವಿಟನಾಜಿಮೋಟ್ ಸಭೆಗೂ ಇದ್ದ ಹಕ್ಕುಗಳು ಈ ಪರಿಯಾಗಿದ್ದುವು. ಇಂಗ್ಲೆಂಡಿನ ದೊರೆಗಳಿಗೂ ಪಾರ್ಲಿಮೆಂಟ್ ಸಭೆಗೂ ಈಗಲೂ ನಡೆದುಬರುತ್ತಿರುವ ಹಕ್ಕುಗಳಿಗೆ ಮೂಲಕಾರಣವಾದುವು ಇವುಗಳೇ. ಇಷ್ಟು ಮಾತ್ರವೇ ಅಲ್ಲದೆ, ಹಿಂದೆ ರಾಜ್ಯಶಾಸನಕ್ಕೆ ತಳಹದಿಯಾಗಿದ್ದ ಸಾಧನಗಳೇ ಬಹುಮಟ್ಟಿಗೆ ಈಗಿನ ಪ್ರಭುತ್ವದಲ್ಲೂ ಕಂಡುಬರುತ್ತಿವೆ. ಈಗಿನ ದೊರೆಗಳು ಈಲ್ಡರ್‌ಮೆನ್‌ಗಳೆಂಬ ಪ್ರಮುಖರ ವಂಶದವರೇ ಆಗಿರುತ್ತಾರೆ. ಈಗಿನ ನ್ಯಾಯಸ್ಥಾನಗಳು ಹಿಂದಿನ ಕಾಲದಲ್ಲಿದ್ದ ಷೈರ್‌ಮೂಟ್ ಮುಂತಾದ ಪಂಚಾಯಿತ ಸಭೆಗಳ ರೂಪಾಂತರವಾಗಿರುತ್ತವೆ. ಯುದ್ಧಕಾಲದಲ್ಲಿ ಈಗ ಗುಂಪುಕೂಡಿಸುವ ಸೈನ್ಯಸಮುದಾಯವು ಹಿಂದಿನ ಕಾಲದಲ್ಲಿದ್ದ ಫೈರ್ಡ್ (Fyrd) ಎಂಬುದರ ಪರಿಣಾಮರೂಪವಾಗಿರುತ್ತದೆ. ಪೂರ್ವಕಾಲದ ವಿಟನಾಜಿಮೋಟ್ ಎಂಬ ಸಭೆಯೇ ಈಗಿನ ಪಾರ್ಲಿಮೆಂಟ್ ಸಭೆಯಾಗಿ ಪರಿವರ್ತನೆಯನ್ನು ಹೊಂದಿರುತ್ತದೆ.

ಆದರೂ, ಕೆಲವು ಪ್ರಭೇದಗಳು ಕಂಡುಬರುತ್ತವೆ. ಹಿಂದಿನಕಾಲದಲ್ಲಿ ಅನೇಕ ಸಣ್ಣ ಸಣ್ಣ ಗುಂಪುಗಳಾಗಿ ವಿಭಾಗವಾಗಿದ್ದ ಇಂಗ್ಲಿಷ್ ಜನಾಂಗವು ಈಗ ಒಕ್ಕಟ್ಟಾಗಿ ನಿಂತು ದೊಡ್ಡ ಚಕ್ರಾಧಿಪತ್ಯವನ್ನು ಸ್ಥಾಪಿಸಿರುತ್ತದೆ. ಇಷ್ಟೊಂದು ದೊಡ್ಡ ಚಕ್ರಾಧಿಪತ್ಯದ ಘನತೆಗನುಸಾರವಾಗಿ ಅಪರಿಮಿತವಾದ ಒಂದುಸೈನ್ಯವೂ, ದೊಡ್ಡದಾದ ಒಂದು ನೌಕಾಸೈನ್ಯವೂ ಏರ್ಪಟ್ಟಿರುತ್ತವೆ. ಎಲ್ಲಾ ಕಾಲಗಳಲ್ಲಿಯೂ (ಎಂದರೆ ಯುದ್ಧವು ನಡೆಯುವ ಕಾಲದಲ್ಲಿಯೂ, ಯುದ್ಧವು ನಡೆಯದ ಕಾಲದಲ್ಲಿಯೂ) ಈ ಎರಡು ಸಾಧನಗಳೂ ಶಾಶ್ವತವಾಗಿರತಕ್ಕುವಾಗಿವೆ. ಈ ಎರಡು ಸಾಧನಗಳು ಮಾತ್ರ, ಹಿಂದಿನ ಕಾಲದಲ್ಲಿದ್ದ ಯಾವಸಾಧನಗಳಿಂದಲೂ ಪರಿವರ್ತಿತವಾಗದೆ ಸ್ವಂತವಾಗಿ ಉದ್ಭವಿಸಿರುತ್ತವೆ. ಈಚೆಗೆ ಇವುಗಳ ಜೊತೆಗೆ ಅಂತರಿಕ್ಷದಲ್ಲಿ ಯುದ್ಧಮಾಡಲು ಸಹಕಾರಿಯಾದ ಆಕಾಶವಿಮಾನವೆಂಬ ಯಂತ್ರವಿಶೇಷವು ಬೇರೆ ನಿರ್ಮಿತವಾಗಿದೆ.

## ಎರಡನೆಯ ಪ್ರಕರಣ.

### ಫ್ಯೂಡಲಿಸಮ್ ಪದ್ಧತಿ

ರಾಜ್ಯಗಳಿಗೆ ಪರಸ್ಪರವಾಗಿ ಯುದ್ಧಗಳು ನಡೆದು ಸಣ್ಣರಾಜ್ಯಗಳು ದೊಡ್ಡರಾಜ್ಯಗಳಿಗೆ ವಶವಾಗಿ, ಕೊನೆಗೆ ಹೆಪ್ಟಾರ್ಕಿಯೆಂಬ ಅಭಿಧಾನದಿಂದ ಏಳುರಾಜ್ಯಗಳು ಏರ್ಪಟ್ಟವೆಂದು ಹಿಂದೆಯೇ ಗೊತ್ತಾಗಿರುವುದಷ್ಟೆ. ಈ ರಾಜ್ಯಗಳಿಗೆ ಒಂದಕ್ಕಿಂತ ಮತ್ತೊಂದು ಅಧಿಕವಾಗಬೇಕೆಂಬ ಸ್ಪರ್ಧೆಯು ಹುಟ್ಟಿ ಆಗಾಗ ಯುದ್ಧಗಳಾಗುತ್ತಿದ್ದುದರಿಂದ, ಕೆಲವು ರಾಜ್ಯಗಳು ರಾಜ್ಯವೆಂಬ ಹೆಸರನ್ನೇ ಕಳದುಕೊಂಡು ಷೈರುಗಳಾಗಿ ಪರಿಣಮಿಸುತ್ತಲೂ, ಸಣ್ಣರಾಜ್ಯಗಳು ದೊಡ್ಡರಾಜ್ಯಗಳಾಗುತ್ತಲೂ ಇದ್ದುವು. ಹೀಗೆ ಯುದ್ಧಕ್ಕೆ ಆರಂಭಮಾಡಿದ ದೇಶಗಳಲ್ಲಿ ಕೆಂಟ್‍ದೇಶವೇ ಮೊದಲನೆಯದಾಗಿತ್ತು. ಬಹು ಕಾಲ ಯುದ್ಧದ ಪ್ರಸಕ್ತಿಯೇ ಇಲ್ಲದಿದ್ದುದರಿಂದ ಈ ದೇಶವು ಸ್ತಿಮಿತತೆಯನ್ನು ಹೊಂದಿ ಗರಿಗಟ್ಟಿಕೊಂಡಿತ್ತು. ಆದರೂ, ಕೆಂಟ್ ದೇಶಕ್ಕೆ ಇತರ ದೇಶಗಳನ್ನು ಸ್ವಾಧೀನಪಡಿಸಿಕೊಳ್ಳುವ ಯೋಗವು ಬಂದೊದಗಲಿಲ್ಲ. ಹೀಗೆ ಎಲ್ಲಾ ದೇಶಗಳನ್ನೂ ಯುದ್ಧದಲ್ಲಿ ಸೋಲಿಸಿ ಆಧಿಪತ್ಯವನ್ನು ಸ್ಥಾಪಿಸಿದ ದೇಶಗಳಲ್ಲಿ ನಾರ್ತಂಬ್ರಿಯವೇ ಮೊದಲನೆಯದು. ಒಂದುಕಡೆ ಪೆನ್ನೈನ್‍ಪರ್ವತದ ಸಾಲಿನ ಗಿರಿದುರ್ಗಗಳಿಂದಲೂ, ಉಳಿದೆಡೆಗಳಲ್ಲಿ ಹಂಬರ್, ಉತ್ತರಸಮುದ್ರ ಫೋರ್ತ್‍ಎಂಬ ಜಲದುರ್ಗಗಳಿಂದಲೂ ಸುರಕ್ಷಿತವಾಗಿದ್ದ ಈ ದೇಶವು ಬಹು ಬೇಗನೆ ಉಛ್ರಾಯಸ್ಥಿತಿಗೆ ಬಂತು. ಕಾಲಕ್ರಮದಲ್ಲಿ ಈ ದೇಶದವರು ಸ್ಕಾಟ್‍ಜನರನ್ನೂ ವೆಲ್ಷ್‍ಜನರನ್ನೂ ಸೋಲಿಸಿದರು. ಕ್ರಿ. ಶ. ೬೧೭ ರಲ್ಲಿ ನಾರ್ತಂಬ್ರಿಯದ ದೊರೆಯಾದ ಎಡ್ವಿನ್ (Edwin) ಎಂಬವನು ಕೆಂಟ್ ಎಂಬ ಪ್ರದೇಶ ಹೊರತು, ಇಂಗ್ಲೆಂಡಿನ ಉಳಿದ ಎಲ್ಲಾ ಭಾಗಗಳನ್ನೂ ಸ್ವಾಧೀನಪಡಿಸಿಕೊಂಡನು. ನಾರ್ತಂಬ್ರಿಯಾ ದೇಶವು ಕ್ರಿ. ಶ. ೬೮೫ ರ ವರೆಗೂ ಹೀಗೆಯೇ ಉಛ್ರಾಯಸ್ಥಿತಿಯಲ್ಲಿತ್ತು. ಈ ವರುಷ (೬೮೫) ಉತ್ತರ ಭಾಗದ ಕೆಲ್ಟರು (Northern Kelts) ನಾರ್ತಂಬ್ರಿಯದವರನ್ನು ಸಂಪೂರ್ಣವಾಗಿ ಸೋಲಿಸಿದರು. ಹೀಗೆ ನಾರ್ತಂಬ್ರಿಯದ ಏಳಿಗೆಯು ಮುಗಿಯಿತು. ಬಳಿಕ ಮರ್ಷಿಯಾ (Mercia) ದೇಶದ ದೊರೆಯಾದ ಆಫ (Offa) ಎಂಬಾತನು ದಿಗ್ವಿಜಯಕ್ಕೆ ಹೊರಟು ಕೆಂಟ್ ದೇಶದವರನ್ನೂ, ವೆಸೆಕ್ಸಿನವ

ರನ್ನೂ ಯುದ್ಧದಲ್ಲಿ ಸೋಲಿಸಿ ವೆಲ್ಷ್ ಜನರನ್ನು ಸ್ವಾಧೀನಪಡಿಸಿಕೊಂಡು, ಲಿಚ್‌ಫೀಲ್ಡಿನಲ್ಲಿ (Lichfield) ಆರ್ಚ್‌ಬಿಷಪ್ ಎಂಬ ಮತಾಧಿಪತಿಯನ್ನು ನಿಯಮಿಸಿ, ಕ್ರಿ. ಶ. ೭೯೬ರ ವರೆಗೂ ಒಂದೇ ಸಮನಾಗಿ ತನ್ನ ದರ್ಪವನ್ನು ಕಾಪಾಡಿಕೊಂಡು ಆ ವರುಷ ಮೃತನಾದನು. ಕ್ರಿ. ಶ. ೮೨೭ರಲ್ಲಿ ವೆಸ್ಟ್ ಸ್ಯಾಕ್ಸನರ ದೊರೆಯಾದ ಎಗ್‌ಬರ್ಟ್ (Egbert) ಎಂಬಾತನು ಮರ್ಷಿಯಾ ದೇಶದವರನ್ನು ಸೋಲಿಸಿದನು. ಮುಂದೆ ಎರಡು ವರುಷ ಕಾಲದೊಳಗಾಗಿ ಕೆಂಟ್, ಸಸೆಕ್ಸ್, ಎಸೆಕ್ಸ್, ಈಸ್ಟ್ ಆಂಗ್ಲಿಯ, ನಾರ್ತಂಬ್ರಿಯ, ಎಂಬ ದೇಶಗಳೆಲ್ಲಾ ಅವನ ಸ್ವಾಧೀನಕ್ಕೆ ಬಂದು, ಆತನೇ ಇಂಗ್ಲಿಷರಿಗೆಲ್ಲಾ ಮುಖ್ಯ ದೊರೆಯಾದನು. ಇತರ ರಾಜ್ಯಗಳು ಡೇನರ (ಎಂದರೆ ಡೆನ್ಮಾರ್ಕಿನ ಜನರ) ಬಾಧೆಗೊಳಪಟ್ಟದ್ದರಿಂದ, ಈತನಿಗೆ ಅವುಗಳ ದೆಸೆಯಿಂದ ಯಾವ ಭೀತಿಯೂ ಇಲ್ಲದೆ ನಿರಾತಂಕವಾಗಿರಲು ಅನುಕೂಲವಾಯಿತು.

ಇಷ್ಟರಲ್ಲಿ, ಸ್ಕ್ಯಾಂಡಿನೇವಿಯಾ ದೇಶದ ಜನಸಂಖ್ಯೆಯು ಹೆಚ್ಚುತ್ತಾಬಂದು, ಕೊನೆಗೆ, ಅಲ್ಲಿನವರಿಗೆ ತಿಂಡಿಗೆ ಅಭಾವವಾಗುತ್ತ ಬರಲಾರಂಭವಾಯಿತು. ಆದಕಾರಣ, ಅಲ್ಲಿಯ ಜನರಲ್ಲಿ ಅನೇಕರು ಹೊರಗಿನ ದೇಶಗಳಿಗೆ ವಲಸೆಹೋಗಬೇಕೆಂದು ನಿರ್ಧರಿಸಿದರು. ಬಳಿಕ, ಇಂಗ್ಲೆಂಡ್, ನಾರ್ಮಂಡಿ (Normandy), ರಷ್ಯ (Russia), ಸಿಸಿಲಿ (Sicily) ಮತ್ತು ನೇಪಲ್ಸ್ (Naples) ಮುಂತಾದ ದೇಶಗಳನ್ನು ಸ್ವಾಧೀನಮಾಡಿಕೊಂಡು ಕಾನ್‌ಸ್ಟಾಂಟಿನೋಪಲನ್ನು (Constantinople) ಕಪ್ಪುಸಮುದ್ರದ ಕಡೆಯಿಂದಲೂ, ಮ್ಯಾಸಿಡೋನಿಯ (Macedonia)ದ ತೀರದಕಡೆಯಿಂದಲೂ ಮುತ್ತುವುದಾಗಿ ಹೆದರಿಸಬೇಕೆಂದು ಸಂಕಲ್ಪಮಾಡಿ ವಿಜಯಯಾತ್ರೆಗೆ ಹೊರಟರು. ಮೊದಲನೆಯ ಸಾರಿ ಅವರು ಇಂಗ್ಲೆಂಡನ್ನು ಮುತ್ತಿದಾಗ, ವಿಶೇಷಧನವನ್ನು ಕೊಳ್ಳೆ ಹೊಡೆದುಕೊಂಡು ಹೋದರು. ಎರಡನೆಯಸಾರಿ ಅವರು ಇಂಗ್ಲೆಂಡಿಗೆ ಬಂದಾಗ ಅಲ್ಲಿಯೇ ನೆಲೆಯಾಗಿ ನಿಂತರು. ಆದರೆ ಕ್ರಿ. ಶ. ೮೭೮ರಲ್ಲಿ, ವೆಸೆಕ್ಸ್ ರಾಜನಾದ ಆಲ್‌ಫ್ರೆಡ್ಡಿನಿಂದ ಅವರು ಪರಾಜಯವನ್ನು ಹೊಂದಿ, ವೆಡ್‌ಮೂರ್ ಒಪ್ಪಂದವನ್ನು ಮಾಡಿಕೊಂಡರು. ಇದರಿಂದ ಅವರು ವೆಸೆಕ್ಸಿನ ಗೊಡವೆಗೆ ಹೋಗದಂತಾಯಿತು. ಅವರು ಮುಂದೆ ಯುದ್ಧಗಳನ್ನೆ ಮಾಡದಂತೆ ಆಲ್‌ಫ್ರೆಡನು ತಡೆದು ನಿಲ್ಲಿಸಿದ್ದನು. ಅವನ ಮಗನಾದ ಎಡ್ವರ್ಡ್ (Edward the Elder) ಎಂಬವನು ಡೇನರ ಮೇಲೆ ಯುದ್ಧಮಾಡಿ, ಅವರಿಗೆ ಫೋರ್ತ್ (Forth) ವರೆಗೂ ಸ್ವಾಧೀನವಾಗಿದ್ದ ಪ್ರದೇಶವನ್ನೆಲ್ಲಾ ಜಯಿಸಿದನು. ಇದರಿಂದ ಅವನ ಯಶಸ್ಸು ಬಹಳ ಹೆಚ್ಚಿತು. ವೆಲ್ಷ್ ಜನರೂ, ಸ್ಕಾಟ್‌ಜನರೂ,

ಅವನ ವಶವರ್ತಿಗಳಾದರು. ಈ ರೀತಿಯಲ್ಲಿ ಎಡ್ವರ್ಡನು ಒಟ್ಟು ಬ್ರಿಟಿಷ್ ದ್ವೀಪಕ್ಕೆ ದೊರೆಯಾದನು. ಮುಂದೆ ಅವನ ವಂಶದವರಿಗೂ ಇದೇ ಪದವಿಯೇ ನಡೆದುಬಂತು.

ಇಷ್ಟೊಂದು ದೊಡ್ಡ ರಾಜ್ಯವನ್ನಾಳುವುದು ಬಹು ಕಷ್ಟವಾದ ಕೆಲಸವಾಗಿತ್ತು. ಪ್ರಯಾಣವು ಕಷ್ಟವಾಗಿತ್ತು. ಒಂದೆಡೆಯಿಂದ ಮತ್ತೊಂದೆಡೆಗೆ ವರ್ತಮಾನವು ಹೋಗಲು ಬಹಳಕಾಲವು ಹಿಡಿಯುತ್ತಿತ್ತು. ಆದುದರಿಂದ, ರಾಜ್ಯವು ಸಣ್ಣದಾಗಿದ್ದಾಗಿನಂತೆ ದೊರೆಯು ತಾನೇ ದೇಶವನ್ನೆಲ್ಲಾ ತಿರುಗಿ ಆಡಳಿತಗಳು ಸರಿಯಾಗಿ ನಡೆಯುವಂತೆ ನೋಡಿಕೊಳ್ಳಲು ಆಗುತ್ತಿರಲಿಲ್ಲ. ಈ ಸಂದರ್ಭದಲ್ಲಿ ರಾಜ್ಯದ ಆಡಳಿತಗಳು ಸರಿಯಾಗಿ ನಡೆಯುವಂತೆ ಮಾಡಲು ಎಡ್ಗರ್ (Edgar) ಮತ್ತು ಡನ್‌ಸ್ಟನ್ (Dunstan) ಎಂಬವರು ಒಂದು ಉಪಾಯವನ್ನು ಮಾಡಿದರು. ಅವರು, ದೇಶವನ್ನು ಅರ್ಲ್‌ಡಮ್ಮುಗಳೆಂಬ ವಿಭಾಗಗಳಾಗಿ ವಿಂಗಡಿಸಿ, ಈ ವಿಭಾಗಗಳಲ್ಲಿ ಒಂದೊಂದನ್ನೂ ಒಬ್ಬೊಬ್ಬ ಅರ್ಲ್ (Earl) ಎಂಬ ದೊಡ್ಡಮನುಷ್ಯನ ಆಳಿಕೆಗೆ ಒಳಪಡಿಸಿ, ಈ ಅರ್ಲ್‌ಗಳಿಗೆ ಬಹಳ ಅಧಿಕಾರವನ್ನುಕೊಟ್ಟು, ಅವರೆಲ್ಲರ ಮೇಲೂ ದೊರೆಯ ಆಧಿಪತ್ಯವಿರುವಂತೆ ಮಾಡಿದರು. ಈ ಪದ್ಧತಿಯಿಂದ ಅನೇಕ ನ್ಯೂನತೆಗಳುಂಟಾದುವು. ಸಮಾಧಾನವಿರುವ ಕಾಲದಲ್ಲೇನೋ ಈ ಪದ್ಧತಿಯಿಂದ ರಾಜ್ಯದ ಆಡಳಿತಗಳು ಸರಿಯಾಗಿ ನಡೆಯುತ್ತಿದ್ದುವು. ಆದರೆ ಯುದ್ಧಕಾಲದಲ್ಲಿ ಮಾತ್ರ ತೊಂದರೆಗಳು ಉಂಟಾಗುತ್ತಿದ್ದುವು. ಎಥೆಲ್‌ರೆಡ್ (Ethelred) ದೊರೆಯ ಕಾಲದಲ್ಲಿ ಡೇನರು ಮೇಲೆ ಬಿದ್ದಾಗ ಒಂದು ಷೈರಿನವರು ಮತ್ತೊಂದು ಷೈರಿನವರಿಗೆ ಸಹಾಯಮಾಡದೆ ಹೋದರು. ಅರ್ಲ್‌ಗಳೆಲ್ಲರೂ ಒಕ್ಕಟ್ಟಾಗಿರಬೇಕೆಂಬುದು ಎಂದೋ ಮಾಯವಾಯಿತು. ಸಮಾಧಾನಕಾಲದಲ್ಲಿ ಕೂಡ ರಾಜ್ಯದಲ್ಲಿದ್ದ ಬಿಗಿಯು ಸಡಿಲುವಂತಾಯಿತು. ಯಾವಾಗಲೂ ಅಲಸನಾಗಿರುತ್ತಿದ್ದ ಎಥೆಲ್‌ರೆಡ್ ದೊರೆಯು ತನ್ನ ಪೌರುಷದ ಮಹಿಮೆಯಿಂದ ತನ್ನ ಕೈಕೆಳಗಿನ ಸಾಮಂತರೆಲ್ಲರೂ ರಾಜ್ಯರಕ್ಷಣೆಗಾಗಿ ಸೊಂಟವನ್ನು ಕಟ್ಟಿ ನಿಲ್ಲುವಂತೆ ಮಾಡುವ ಭಾಗ್ಯವನ್ನು ಕೇಳಿಕೊಂಡು ಬಂದಿರಲಿಲ್ಲ. ಶತ್ರುಪಕ್ಷದವರಿಗೆ ಜಯವಾಯಿತು. ಕೆನ್ಯೂಟನು ದೊರೆಯಾದನು.

ಕೆನ್ಯೂಟನು ಹಿಂದಿನ ಪದ್ಧತಿಯನ್ನೇ (ಎಂದರೆ—ಎಡ್ಗರ್ ಮತ್ತು ಡನ್‌ಸ್ಟನ್ ಎಂಬವರು ಕಲ್ಪಿಸಿದ ಪದ್ಧತಿಯನ್ನೇ) ಅನುಸರಿಸಿ ರಾಜ್ಯಭಾರಮಾಡತೊಡಗಿದನು. ಆತನು ನಾರ್ವೆ, ಡೆನ್ಮಾರ್ಕ್ ಮತ್ತು ಇಂಗ್ಲೆಂಡ್ ದೇಶಗಳಿಗೆ ದೊರೆಯಾಗಿದ್ದುದರಿಂದ, ರಾಜ್ಯವು ಬಹಳ ದೊಡ್ಡದಾಗಿತ್ತು. ಆದರೂ, ಕೆನ್ಯೂ

ಟನು ದರ್ಪದಿಂದ ರಾಜ್ಯವಾಳಿದನು. ಇತರ ತೊಂದರೆಗಳನ್ನು ಹಚ್ಚಿಕೊಂಡರೆ ಸರಿಯಾಗಿ ಪ್ರಭುತ್ವಮಾಡಲಾಗುವುದಿಲ್ಲವೆಂದು ಬಗೆದು, ತನ್ನ ಕಾಲಕ್ಕೆ ಮುಂಚೆ ದೊರೆಗಳು ತಮ್ಮವಶದಲ್ಲಿಯೇ ಇಟ್ಟುಕೊಂಡಿರುತ್ತಿದ್ದ ವೆಸೆಕ್ಸಿನ ಅರ್ಲ್ಡಮ್ಮನ್ನು ಕೂಡ, ಕೆನ್ಯೂಟನು ಗಾಡ್ವಿನ್ ಎಂಬಾತನಿಗೆ ವಹಿಸಿಬಿಟ್ಟನು. ಇಲ್ಲಿಂದಮುಂದೆ, ಅರ್ಲ್‌ಗಳೇ ಸಂಪೂರ್ಣವಾಗಿ ಆಡಳಿತಗಳನ್ನು ನಡೆಯಿಸುವವರಾದರು; ದೊರೆಯು ಅವರೆಲ್ಲರಿಗೂ ಅಧ್ಯಕ್ಷನಾಗಿ ನಿಂತು ಮೇಲ್ವಿಚಾರಣೆಯನ್ನು ಮಾಡುವವನಾದನು. ಅರ್ಲ್‌ಗಳಾದರೋ, ಕೆಲವು ವೇಳೆ ಸ್ನೇಹದಿಂದಿರುತ್ತಲೂ, ಕೆಲವುವೇಳೆ ಪರಸ್ಪರವಾಗಿ ಜಗಳವಾಡುತ್ತಲೂ ಇದ್ದರು. ದಕ್ಷನಾಗಿದ್ದವನು ದೊರೆಯಾಗಿಲ್ಲದೇ ಇದ್ದಾಗಲಂತೂ ಅವರ ಜಗಳಗಳಿಗೆ ಕೊನೆಮೊದಲೇ ಇರುತ್ತಿರಲಿಲ್ಲ. ಅವರ ಜಗಳವನ್ನು ಬಿಡಿಸುವುದೇ ದೊರೆಯ ಕೆಲಸವಾಗಿರುತ್ತಿತ್ತು. ಅಂತು, ಈ ಆಂತಃಕಲಹಗಳು ಹೆಚ್ಚುತ್ತಬಂದ ಹಾಗೆಲ್ಲಾ ನಾರ್ಮನರ ದಿಗ್ವಿಜಯಕ್ಕೆ ಕಾಲವು ಹದಗೊಡುತ್ತಾ ಬಂತು.

ಈ ಬದಲಾವಣೆಗಳುಂಟಾದಹಾಗೆಲ್ಲಾ ದೊರೆತನದ ಗೌರವವೂ ಮಾರ್ಪಡುತ್ತಾಬಂತು. ಎಗ್ಬರ್ಟ್ ದೊರೆಯ ಕಾಲದಿಂದ ಹಿಡಿದು, ಎಡ್ಗರ್‌ದೊರೆಯ ಕಾಲದ ವರೆಗೂ, ದೊರೆತನದ ದರ್ಪವೂ, ಶಕ್ತಿಯೂ, ಗೌರವವೂ ಹೆಚ್ಚುತ್ತಾಬಂದುವು; ಎಡ್ಗರ್ ದೊರೆಯ ಕಾಲದಿಂದ ಎಡ್ವರ್ಡ್ ದಿ ಕನ್ಫೆಸರ್ (Edward the Confessor) ಎಂಬಾತನ ಕಾಲದ ವರೆಗೂ ಅವು ತಗ್ಗುತ್ತಾ ಬಂದುವು.

ರಾಜ್ಯವು ವಿಸ್ತಾರವಾಗುತ್ತಾ ಬಂದಹಾಗೆಲ್ಲಾ ದೊರೆಯ ಶಕ್ತಿಯೂ ಪ್ರಾಮುಖ್ಯತೆಯೂ ಹೆಚ್ಚುತ್ತಾ ಬಂದುವು. ವೆಸೆಕ್ಸ್ ಅಥವಾ ನಾರ್ತಂಬ್ರಿಯಾ ಮುಂತಾದ ಸಣ್ಣಸಣ್ಣ ದೇಶಗಳ ದೊರೆಗಳಿಗೂ, ಬಟ್ಟು ಬ್ರಿಟಿಷ್ ದ್ವೀಪಕ್ಕೆ ದೊರೆಯಾಗಿದ್ದಾತನಿಗೂ ಪ್ರಜೆಗಳು ಕೊಡುತ್ತಿದ್ದ ಪ್ರಾಮುಖ್ಯತೆಗಳಿಗೆ, ಪರಸ್ಪರವಾಗಿ, ಅಜಗಜಾಂತರವಾದ ವ್ಯತ್ಯಾಸವಿತ್ತು. ಡೇನರ ಮುತ್ತಿಗೆಗಳಿಗೆ ಆರಂಭವಾಗಿ, ಆಲ್ಫ್ರೆಡ್ ದೊರೆಯು ಅವರ ಸೊಕ್ಕನ್ನು ಮುರಿದಮೇಲೆ ಪ್ರಜೆಗಳಲ್ಲಿ ರಾಜಭಕ್ತಿಯು ವಿಶೇಷವಾಗಿ ಹೆಚ್ಚಿತು. ಅವರೆಲ್ಲರೂ, ಆಲ್ಫ್ರೆಡ್ ದೊರೆಯನ್ನೂ, ಆತನ ವಂಶೀಯರನ್ನೂ, ದೇಶೋದ್ಧಾರಕರೆಂದು ಭಾವಿಸುವಂತಾಯಿತು. ಈ ದೊರೆಗಳು ಬಹಳ ಶಕ್ತರಾಗಿದ್ದುದರಿಂದ ರಾಜಶಬ್ದವು ಇವರಲ್ಲಿ ಸಾರ್ಥಕವಾಗಿತ್ತು.

ದೊರೆಯು ಜನರ ತನುಧನಗಳನ್ನು ಕಾಪಾಡುತ್ತಾ, ನ್ಯಾಯಕ್ಕೆ ಜನ್ಮಸ್ಥಾನವಾಗಿದ್ದುದರಿಂದ ಅವನ ಗೌರವವು ಮತ್ತಷ್ಟು ಹೆಚ್ಚಾಯಿತು. ಕೊನೆಗೆ,

ವಿಟನಾಜಿಮೋಟ್ ಸಭೆಯವರ ಒಪ್ಪಿಗೆಯನ್ನು ತೆಗೆದುಕೊಳ್ಳದೆ ಭೂಮಿಯನ್ನು ಇತರರಿಗೆ ಕೊಡಿಗೆಯಾಗಿ ಕೊಡುವಂತಾಯಿತು.

ಈ ಹಿಂದಿನ ಪದ್ಧತಿಯು ಮೇರೆಗೆ ದೊರೆಯ ಪ್ರಾಮುಖ್ಯತೆಯೂ, ಶಕ್ತಿಯೂ, ಎಡ್‌ಗರ್ ದೊರೆಯ ಕಾಲದಲ್ಲಿ ಅತ್ಯುನ್ನತಸ್ಥಿತಿಗೆ ಬಂದುವು. ಆಡಳಿತಗಳು ಹೇಗೆ ನಡೆಯಬೇಕೆಂಬುದನ್ನು ಆತನೇ ನಿರ್ಧರಿಸಿ, ಜನರೆಲ್ಲರೂ ಬದುಲುಮಾತನಾಡದೆ ತನ್ನ ಅಭಿಮತಕ್ಕೆ ಅನುಸಾರವಾಗಿ ನಡೆಯುವಂತೆ ಮಾಡುತ್ತಿದ್ದನು. ಸೈನ್ಯವೆಷ್ಟೂ ಅವನ ವಶದಲ್ಲಿಯೇ ಇತ್ತು. ಆತನು ಸರಕಾರದ ಭೂಮಿಗಳನ್ನು ಸಭೆಯ ಅನುಮತಿಯನ್ನು ಪಡೆಯದೆ ತಾನೇ ಇತರರಿಗೆ ಕೊಟ್ಟುಬಿಡುತ್ತಿದ್ದನು; ಷೈರ್‌ಮೂಟ್ ಸಭೆಯಲ್ಲಿ ವಿಚಾರಣೆಯಾಗುತ್ತಿದ್ದ ವಿವಾದಗಳನ್ನು ತನ್ನಬಳಿಗೆ ಬರಮಾಡಿಕೊಂಡು ತಾನೇ ತೀರ್ಪು ಕೊಡುತ್ತಿದ್ದನು. ಈತನ ಕಾಲವು ಕಳೆದಬಳಿಕ ದೊರೆತನದ ಬಿಗಿಯು ಸಡಿಲುತ್ತಾ ಬಂತು. ಹೀಗಾದುದಕ್ಕೆ ಫ್ಯೂಡಲಿಸಮ್ (Feudalism) ಎಂಬ ಪದ್ಧತಿಯು ವೃದ್ಧಿಯಾಗುತ್ತಾ ಬಂದುದೇ ಕಾರಣವೆಂದು ಹೇಳಬಹುದಾಗಿರುತ್ತದೆ.

ಈ ಫ್ಯೂಡಲಿಸಮ್ ಪದ್ಧತಿಯು ಆಂಗ್ಲೇಯರ ಮೂಲಪುರುಷರು ಜರ್ಮನಿಯಲ್ಲಿದ್ದಾಗ ಅವರಲ್ಲಿ ಪ್ರಚುರವಾಗಿದ್ದ ಕಾಮಿಟೇಟಸ್ (Comitatus) ಕ್ರಮದಿಂದ ಪರಿವರ್ತಿತವಾಯಿತು. ಆದುದರಿಂದ ಫ್ಯೂಡಲಿಸಮ್ ಪದ್ಧತಿಯನ್ನು ವಿಚಾರಮಾಡುವುದಕ್ಕಿಂತ ಮುಂಚೆ, ಕಾಮಿಟೇಟಸ್ ಕ್ರಮವನ್ನು ತಿಳಿದುಕೊಳ್ಳುವುದು ಆವಶ್ಯಕವಾಗಿರುತ್ತದೆ. ಜರ್ಮನಿಯಲ್ಲಿ ಸೇವಾಧರ್ಮವನ್ನು ಹೀನವಾದುದೆಂದು ಎಣಿಸಿರಲಿಲ್ಲ. ಯಜಮಾನನು ಸೇವಕರನ್ನು ಸ್ನೇಹಿತರಂತೆ ಕಾಣುವ ವಾಡಿಕೆಯು ಇತ್ತು. ಆದುದರಿಂದ ಸೇವಕರಿಗೆ ಬಹಳ ಮನ್ನಣೆಯು ದೊರೆಯುತ್ತಿತ್ತು. ಈ ಕಾರಣದಿಂದ, ಯುವಕರೆಲ್ಲರೂ ಈಲ್ಡರ್‌ಮ್ಯಾನ್ ಎಂಬ ಮುಖ್ಯಸ್ಥನ ಸೇವೆಯನ್ನು ಮಾಡುವುದಕ್ಕೆ ಉತ್ಸಾಹಪಡುತ್ತಿದ್ದರು. ಅವರೆಲ್ಲರೂ ತಮ್ಮ ಯಜಮಾನನನ್ನು ಅನ್ನದಾತನೆಂದು ಗೌರವಿಸಿ, ಯುದ್ಧಕಾಲದಲ್ಲಿ ಅವರ ಪಕ್ಷವನ್ನು ವಹಿಸಿ ರಣರಂಗದಲ್ಲಿ ಅವರಿಗಾಗಿ ಕಡಿದಾಡುತ್ತಿದ್ದರು. ಯಜಮಾನನೂ, ಸೇವಕನೂ ಶೌರ್ಯದಲ್ಲಿ ಸಮಾನರಾಗಿರುತ್ತಿದ್ದರು. ಅವರು ಪರಸ್ಪರವಾಗಿ ಒಬ್ಬರಿಗಿಂತ ಮತ್ತೊಬ್ಬರು ಶೌರ್ಯದಲ್ಲಿ ಕಡಿಮೆಯಾಗಿರುವುದು ದೊಡ್ಡ ಅವಮಾನವೆಂದು ಭಾವಿಸಿದ್ದರು. ಯಜಮಾನನು ಸೇವಕರಿಗೆ ಅನ್ನಹಾಕುತ್ತಿದ್ದನು. ಇದಕ್ಕೆ ಬದುಲಾಗಿ, ಅವರು ಯಜಮಾನನನ್ನು ಸೇವಿಸುತ್ತಲೂ, ಅವಶ್ಯಬಿದ್ದಾಗ ಆತನಿಗೆ ತಮ್ಮ ಪ್ರಾಣ

ವನ್ನೇ ಬೇಕಾದರೂ ಒಪ್ಪಿಸುತ್ತಲೂ ಇದ್ದರು. ಇದೇ ಪದ್ಧತಿಯು ಮುಂದೆ ಅನೇಕ ಪರಿಷ್ಕರಣಗಳನ್ನು ಹೊಂದಿ, ಸೇವಕರಿಗೆ ಅನ್ನವನ್ನು ಹಾಕುವುದಕ್ಕೆ ಬದುಲಾಗಿ ಯಜಮಾನನು ಅವರಿಗೆ ವ್ಯವಸಾಯಕ್ಕೆ ಭೂಮಿಯನ್ನು ಕೊಡು ವಂತಾಗಿ, ಫ್ಯೂಡಲಿಸಮ್ ಎನಿಸಿಕೊಂಡಿತು.

ಈ ಫ್ಯೂಡಲಿಸಮ್ ಪದ್ಧತಿಗನುಸಾರವಾಗಿ ರಾಜನು ಎಲ್ಲಕ್ಕೂ ಮೇಲ್ಪಟ್ಟವನು. ಡ್ಯೂಕುಗಳೆಂಬ ದೊಡ್ಡಮನುಷ್ಯರು ಅವನನ್ನು ಆಶ್ರಯಿಸಿ ಕೊಂಡಿರತಕ್ಕದು. ಅವರು, ದೇಶದಲ್ಲಿ ಬಹಳ ದೊಡ್ಡದೊಡ್ಡ ಪ್ರದೇಶಗಳನ್ನಾಳತಕ್ಕವರು. ಅವರ ಪದವಿಯು ಸ್ವಲ್ಪ ಹೆಚ್ಚುಕಡಿಮೆಯಾಗಿ ರಾಜನಪದವಿಗೆ ಸಮಾನವಾದುದೆಂದೇ ಹೇಳಬಹುದಾಗಿತ್ತು. ಈ ಡ್ಯೂಕುಗಳೆಂಬ ದೊಡ್ಡ ಮನುಷ್ಯರೆಲ್ಲರೂ, ರಾಜನು ತಮ್ಮ ಆಡಳಿತಕ್ಕೆ ವಿಶಾಲವಾದ ಪ್ರದೇಶಗಳನ್ನು ಬಿಟ್ಟುಕೊಟ್ಟು ತಮ್ಮನ್ನು ಕಾಪಾಡುತ್ತಿದ್ದುದಕ್ಕೆ ಪ್ರತಿಯಾಗಿ, ತಾವೆಲ್ಲರೂ ಯುದ್ಧಕಾಲದಲ್ಲಿ ಆತನಿಗೆ ಬೆಂಬಲವಾಗಿ ನಿಲ್ಲುತ್ತೇವೆಂದು ವಾಗ್ದಾನ ಮಾಡುತ್ತಿದ್ದರು. ದೊರೆಗೆ ಡ್ಯೂಕುಗಳು ಹೇಗೆ ಆಶ್ರಿತರೊ ಹಾಗೆ ಕೌಂಟು ಗಳೆಂಬವರು ಡ್ಯೂಕುಗಳಿಗೆ ಆಶ್ರಿತರು. ಕೌಂಟುಗಳು ಡ್ಯೂಕಿನಿಂದ ಭೂಮಿ ಯನ್ನು ಪಡೆದುಕೊಂಡು, ಅದಕ್ಕೆ ಪ್ರತಿಯಾಗಿ ಯುದ್ಧಕಾಲದಲ್ಲಿ ತಾವೆಲ್ಲರೂ ಆತನಿಗೆ ಬೆಂಬಲವಾಗಿ ನಿಲ್ಲುವುದಾಗಿ ಮಾತುಕೊಡುತ್ತಿದ್ದರು. ಹೀಗೆಯೇ ಕೌಂಟುಗಳಿಗೆ ಅಧೀನರಾದವರೂ, ಅವರಿಗೆ ಅಧೀನರಾದವರೂ ಇದೇ ಭಾವದಿಂದ ಇರುತ್ತಿದ್ದರು. ಕೊನೆಗೆ, ರೈತರು ಇವರಿಂದ ಬೇಸಾಯಕ್ಕೆ ಭೂಮಿಯನ್ನು ಪಡೆದುಕೊಂಡು, ಇವರಲ್ಲಿ ಭೃತ್ಯಭಾವದಿಂದಿರುತ್ತಿದ್ದರು. ಒಟ್ಟೇನಾದಂತಾಯಿತು? ಫ್ಯೂಡಲಿಸಮ್ ಪದ್ಧತಿಯು ಅಂತಸ್ತಿನಮೇಲೆ ಅಂತಸ್ತುಳ್ಳ ದೊಡ್ಡರಥ; ರಾಜನು ಅದರಕಲಶ. ಈ ಪದ್ಧತಿಯಲ್ಲಿ ದೊರೆಯಿಂದ ಹಿಡಿದು ರೈತನವರೆಗೆ ಇದ್ದ ವಿಧವಿಧವಾದ ಆಶ್ರಯದಾತರಿಗೂ, ಆಶ್ರಿತರಿಗೂ, ಮುಖ್ಯವಾಗಿ ನಾಲ್ಕು ಬಗೆಯ ಸಂಬಂಧಗಳಿದ್ದುವು:—

(೧) ಆಶ್ರಯದಾತನು ತನ್ನ ಆಶ್ರಿತರಿಗೆ ಭೂಮಿಯನ್ನು ಕೊಟ್ಟು ಅವರನ್ನು ಸಲಹುತ್ತಿದ್ದನು. ಇದಕ್ಕೆ ಬದುಲಾಗಿ ಆಶ್ರಿತರು ತಮ್ಮ ಯಜಮಾನನಿಗೆ ಬೆಂಬ ಲವಾಗಿ ನಿಲ್ಲುತ್ತಿದ್ದರು. ಕೊನೆಗೆ ದೊರೆಯಮೇಲೆ ಕೈಮಾಡಬೇಕೆಂದು ಯಜಮಾನನು ಇಷ್ಟಪಟ್ಟರೆ, ಅವರು ಅದಕ್ಕೆ ಕೂಡ ಹಿಂತೆಗೆಯಲಾಗು ತ್ತಿರಲಿಲ್ಲ. ಹೀಗೆ ತಮ್ಮ ಯಜಮಾನನ ಅಪ್ಪಣೆಯಿಂದ ಅವರು ದೊರೆ ಯಮೇಲೆ ಕೈಮಾಡಿದಾಗ, ಅವರನ್ನು ರಾಜದ್ರೋಹಿಗಳೆಂದು ಭಾವಿಸುತ್ತಿರಲಿಲ್ಲ.

(೨) ಆಶ್ರಯದಾತನು ಯುದ್ಧಕ್ಕೆ ಹೋದಾಗ ಆಶ್ರಿತರೆಲ್ಲರೂ ಅವಶ್ಯವಾಗಿ ಆತನನ್ನು ಹಿಂಬಾಲಿಸಿ, ಅವನ ಪಕ್ಷವನ್ನು ವಹಿಸಿ ಯುದ್ಧಮಾಡಬೇಕಾ

ಗಿತ್ತು. (೩) ಆಶ್ರಿತರಲ್ಲಿ ಹುಟ್ಟಿದ ವಿವಾದಗಳನ್ನು ತೀರ್ಮಾನಮಾಡುವುದಕ್ಕೂ, ಅವರ ಅಪರಾಧಗಳಿಗೆ ಶಿಕ್ಷೆಯನ್ನು ವಿಧಿಸುವುದಕ್ಕೂ, ಆಶ್ರಯದಾತನು ಒಂದು ನ್ಯಾಯಸ್ಥಾನವನ್ನಿಟ್ಟುಕೊಂಡಿರುತ್ತಿದ್ದನು; ಆ ನ್ಯಾಯಸ್ಥಾನಕ್ಕೆ ತಾನೇಬಂದು ಅಧ್ಯಕ್ಷನಾಗಿ ಕುಳಿತುಕೊಳ್ಳುತ್ತಿದ್ದನು; ಇಲ್ಲವೇ ತನ್ನ ಪ್ರತಿನಿಧಿಯನ್ನು ಕಳುಹಿಸುತ್ತಿದ್ದನು. ಆಶ್ರಿತರೆಲ್ಲರೂ ತಪ್ಪದೆ ಅಲ್ಲಿಗೆ ಬಂದು, ತಾವೇ ವಿವಾದಗಳನ್ನು ವಿಚಾರಣೆಮಾಡಿಸಬೇಕಾಗಿತ್ತು. (೪) ಇವುಗಳಿಗೆಲ್ಲಾ ಬಾಹ್ಯಲಕ್ಷಣವಾಗಿ, ಆಶ್ರಯದಾತನು ಆಶ್ರಿತರೆಲ್ಲರಿಗೂ ಭೂಮಿಯನ್ನು ಕೊಡುತ್ತಿದ್ದನು. ಆದರೆ ಆಶ್ರಿತನು ಮೃತನಾದ ಮೇಲೆ, ಭೂಮಿಯ ಹಕ್ಕು ಆಶ್ರಯದಾತನಿಗೆ ಹಿಂತಿರುಗಿ ಹೋಗಿಬಿಡುತ್ತಿತ್ತು. ಆದನ್ನು ಮತ್ತೆ ಪಡೆದುಕೊಳ್ಳಲಿಚ್ಛಿಸುವವರು ರಿಲಿವಿಯಂ (Rilevium) ಎಂಬ ತೆರಿಗೆಯನ್ನು ಕೊಟ್ಟು, ಆಶ್ರಿತರಾಗಬೇಕಾಗಿತ್ತು.

ಈ ಫ್ಯೂಡಲಿಸಮ್ ಪದ್ಧತಿಗನುಸಾರವಾಗಿ ಒಬ್ಬೊಬ್ಬ ಡ್ಯೂಕನೂ ಸ್ವತಂತ್ರನಾಗಿರತಕ್ಕುದು; ಅವನು ತನ್ನ ಸೀಮೆಯಲ್ಲಿ ಏನನ್ನು ಬೇಕಾದರೂ ಮಾಡಿಕೊಳ್ಳಬಹುದು; ಡ್ಯೂಕನು ದೊರೆಗೆ ಮಾತ್ರವೇ ಉತ್ತರಹೇಳತಕ್ಕವನು; ಇತರ ಡ್ಯೂಕರು ಅವನಿಗೆ ಯಾವ ವಿಧದಲ್ಲಿಯೂ ಅಂಕೆ ಮಾಡಲಾಗದು. ಹೀಗೆಯೇ, ಕೌಂಟು ಮುಂತಾದವರೂ, ತಮ್ಮತಮ್ಮಲ್ಲಿ ಸ್ವತಂತ್ರರಾಗಿ ತಮಗೆ ಮೇಲ್ಪಟ್ಟವರಿಗೆ ಮಾತ್ರವೇ ಉತ್ತರವಾದಿಗಳಾಗಿದ್ದರು.

ಫ್ಯೂಡಲಿಸಮ್ ಪದ್ಧತಿಯು ಅಭಿವೃದ್ಧಿಗೆ ಬಂದ ಹಾಗೆಲ್ಲಾ ದೊರೆಯ ಶಕ್ತಿಯೂ, ಪ್ರಾಮುಖ್ಯತೆಯೂ ಕಡಿಮೆಯಾಗುತ್ತಾ ಬಂದುವು. ಸೈನ್ಯವೇ ಮೊದಲಾದುವೆಲ್ಲಾ ಡ್ಯೂಕ್ ಮುಂತಾದ ದೊಡ್ಡಮನುಷ್ಯರ ವಶದಲ್ಲಿದ್ದು, ಅವರಿಗೆ ಹೆಚ್ಚು ಸ್ವಾತಂತ್ರ್ಯವಿದ್ದುದರಿಂದ, ಹೀಗಾದುದು ಸ್ವಾಭಾವಿಕವಾದುದು. ಹೆಚ್ಚೇಕೆ? ಪ್ರಸಿದ್ಧ ಚರಿತ್ರಲೇಖಕರಾದ ಸ್ಟಬ್ ಎಂಬವರು ಹೇಳಿರುವಂತೆ ಈ ಪದ್ಧತಿಯು ಪ್ರಭಾವದಿಂದ ದೊರೆಯು ಕೇವಲ ಛಾಯೆಯಾಗಿ ಪರಿಣಮಿಸಿದನು. ಆದರೂ, ಇತರರು ಆ ಛಾಯೆಯನ್ನು ಅಲಕ್ಷ್ಯಮಾಡಿ ಬಿಟ್ಟುಬಿಡುವುದಕ್ಕಿಲ್ಲದೆ ಅದನ್ನೇ ಆಶ್ರಯಿಸಿಕೊಂಡು ನಡೆಯುತ್ತಿದ್ದರು.

ಬಹುಕಾಲ ಈ ಫ್ಯೂಡಲಿಸಮ್ ಪದ್ಧತಿಯು ಅಭಿವೃದ್ಧಿಯಾಗಿದ್ದರೆ, ಅದರಿಂದ ದೊರೆಯು ಸಂಪೂರ್ಣವಾಗಿ ಮೂಲೆಗೆಬಿದ್ದು ಅನೇಕ ಅನರ್ಥಗಳುಂಟಾಗುತ್ತಿದ್ದುವು. ಆದರೆ ಅಷ್ಟರಲ್ಲಿ ಇಂಗ್ಲೆಂಡ್‌ದೇಶವು ನಾರ್ಮನರ ವಶವಾಗಿ, ವಿಲಿಯಂ ದಿ ಕಾನ್ಕರರ್ (William the Conqueror) ಎಂಬಾತನ ದೊರೆತನಕ್ಕೊಳಪಟ್ಟಿತು; ಆತನು ಫ್ಯೂಡಲಿಸಮ್ ಪದ್ಧತಿಯ ವಿಚಾರದಲ್ಲಿ

ಕೆಲವು ತಿದ್ದುಪಾಟುಗಳನ್ನು ಮಾಡಿ, ಈ ಅನರ್ಥಗಳುಂಟಾಗದಂತೆ ಮಾಡಿದನು. ಫ್ಯೂಡಲಿಸಮ್ ಪದ್ಧತಿಯನ್ನು ಆತನೇ ಉಪಕ್ರಮಿಸಿದನೆಂದು ಕೆಲವರು ಭಾವಿಸುವರು. ಇದು ತಪ್ಪುತಿಳಿವಳಿಕೆ. ವಿಲಿಯುಮನು ಇಂಗ್ಲೆಂಡಿನಲ್ಲಿ ಕಾಲಿಡುವುದಕ್ಕಿಂತಲೂ ಬಹುಕಾಲಕ್ಕೆ ಮುಂಚೆಯೇ ಅಲ್ಲಿ ಫ್ಯೂಡಲಿಸಮ್ ಪದ್ಧತಿಯು ಇತ್ತೆಂದು ಧಾರಾಳವಾಗಿ ಹೇಳಬಹುದಾಗಿರುತ್ತದೆ.

---

## ಮೂರನೆಯ ಪ್ರಕರಣ.

### ವಿಲಿಯುಮನು ಮಾಡಿದ ತಿದ್ದುಪಾಟುಗಳು.

ಎಡ್ಗರ್ ಮತ್ತು ಡನ್‌ಸ್ಟನ್ ಎಂಬವರು ಇಂಗ್ಲೆಂಡು ದೇಶವನ್ನು ಅರ್ಲ್ಡಮ್ಮುಗಳಾಗಿ ವಿಂಗಡಿಸಿ, ಒಂದೊಂದು ಅರ್ಲ್ಡಮ್ಮನ್ನೂ ಒಬ್ಬೊಬ್ಬ ಅರ್ಲ್ ಎಂಬ ದೊಡ್ಡಮನುಷ್ಯನ ವಶಕ್ಕೆ ಒಪ್ಪಿಸಿದರೆಂದು ಹಿಂದೆ ಹೇಳಿದೆವಷ್ಟೆ. ಇದರಿಂದ ಬಹಳ ಕೆಡುಕುಂಟಾಯಿತು. ಅರ್ಲ್‌ಗಳು ಒಬ್ಬರ ಮೇಲೆ ಮತ್ತೊಬ್ಬರು ಆಧಿಕ್ಯವನ್ನು ಪಡೆದುಕೊಳ್ಳಬೇಕೆಂಬ ಉದ್ದೇಶದಿಂದ, ಪರಸ್ಪರವಾಗಿ ಹೋರಾಡತೊಡಗಿದರು. ಎಥೆಲ್‌ರೆಡ್ ದೊರೆಯ ಮಗನಾದ ಎಡ್ವರ್ಡ್ ದೊರೆಯು ಕಾಲದಲ್ಲಿ ವೆಸೆಕ್ಸಿನ ಅರ್ಲ್‌ಡಮ್ಮನ್ನು ವಹಿಸಿದ್ದ ಗಾಡ್‌ವಿನ್ ಮನೆತನದವರಿಗೂ, ಮರ್ಷಿಯುದ ಅರ್ಲ್‌ಡಮ್ಮನ್ನು ವಹಿಸಿದ್ದ ಲಿಯೋಫ್ರಿಕ್ (Leofric) ಮನೆತನದವರಿಗೂ ಹುಟ್ಟಿದ ಮನಸ್ತಾಪಗಳಲ್ಲಿ ಈ ದೊರೆಯು, ತನ್ನ ಘನತೆಯು ಎಷ್ಟುಮಟ್ಟಿನದೆಂಬುದನ್ನು ಯೋಚಿಸದೆ ಅವರಿಗೆ ಸಮಾಧಾನಮಾಡುವುದಕ್ಕೆ ನಿಂತನು.

ಈ ಎಡ್ವರ್ಡ್ ದೊರೆಯ ತಾಯಿಯು ನಾರ್ಮಂಡಿಯ ಡ್ಯೂಕರ ಮನೆಯವಳು. ಆದುದರಿಂದ ಈ ದೊರೆಯು ಶಿಕ್ಷಣವನ್ನು ಪಡೆದುದು ನಾರ್ಮಂಡಿಯಲ್ಲಿ. ಈತನಿಗೆ ತಮ್ಮ ತಾಯಿಯ ಮನೆಯ ಕಡೆಯುವರನ್ನು ಕಂಡರೆ ಇಷ್ಟ; ಆದಕಾರಣ ಇಂಗ್ಲೆಂಡಿನಲ್ಲಿ ನಾರ್ಮನರಿಗೆ (ನಾರ್ಮಂಡಿಯವರಿಗೆ ನಾರ್ಮನರೆಂದು ಹೆಸರು) ದೊಡ್ಡ ಅಧಿಕಾರಗಳು ದೊರೆತುವು. ಕೊನೆಕೊನೆಗೆ ದೊರೆಗೆ ಇಂಗ್ಲಿಷರನ್ನು ಕಂಡರೆ ಆಗದಂತಾಯಿತು. ತಮ್ಮದೇಶದಲ್ಲಿ ತಮಗೆ ಅವಮಾನಮಾಡಿ ತಮ್ಮನ್ನು ಕಂಡರೆ ದೊರೆಯು ದೂರ ಸರಿಯುತ್ತಿದ್ದುದಕ್ಕಾಗಿ ಜನರೆಲ್ಲರೂ ಖತಿಗೊಂಡರು. ದೊರೆಗೆ ವಿರೋಧವಾದ ಒಂದು ಪಂಗಡವೂ ಹುಟ್ಟಿತು.

ನಾರ್ಮಂಡಿಯ ಡ್ಯೂಕನಾಗಿದ್ದ ವಿಲಿಯಂ ಎಂಬಾತನು ಇದನ್ನೆಲ್ಲಾ ನೋಡಿಕೊಂಡಿದ್ದನು. ಎಡ್‌ವರ್ಡ್ ದೊರೆಯ ತಾಯಿಯು ತಮ್ಮ ಮನೆಯ ಹೆಣ್ಣುಮಗಳಾಗಿದ್ದುದರಿಂದ, ತನಗೆ ಬಂಧುವಾಗಿದ್ದ ಎಡ್ವರ್ಡನ ಬಳಿಗೆ ಹೋಗಿದ್ದಾಗಲೇ ಮುಂದೆ ಇಂಗ್ಲೆಂಡಿನ ರಾಜ್ಯಭಾರವು ತನಗೆ ದೊರೆಯುವಂತೆ ವಿಲಿಯಮನು ದೊರೆಯಿಂದ ವಾಗ್ದಾನವನ್ನು ಪಡೆದುಕೊಂಡಿದ್ದನು. ಅವನು ಸ್ವಭಾವತಃ ಶೂರ; ಕಾರ್ಯವನ್ನು ನಿರ್ವಹಿಸುವುದರಲ್ಲಿ ಸಮರ್ಥ; ಆಲೋಚನಾಪರ; ಇದರ ಜೊತೆಗೆ ನಾರ್ಮಂಡಿಯ ಡ್ಯೂಕ್‌ಪದವಿಯಲ್ಲಿದ್ದವನು; ಇದರ ಮೇಲೆ ಅವನಿಗೆ ಜನಸಹಾಯವೂ ಇತ್ತು. ಆದುದರಿಂದ ಇಂಗ್ಲೆಂಡಿನ ದಿಗ್ವಿಜಯವು ಅವನಿಗೆ ಸಾಧ್ಯವಾಗುವಂತಿತ್ತು. ಇಂಗ್ಲೆಂಡಿನ ದೊರೆಯು ತನ್ನ ಕಾಲಾನಂತರ ಅವನಿಗೆ ರಾಜ್ಯಭಾರವನ್ನು ವಹಿಸಲು ಒಪ್ಪದೆ ಇದ್ದರೂ, ಸ್ವಸಾಮರ್ಥ್ಯದಿಂದಲೇ ಅವನು ಇಂಗ್ಲೆಂಡನ್ನು ಸ್ವಾಧೀನಪಡಿಸಿಕೊಳ್ಳಲು ಶಕ್ತನಾಗಿದ್ದನು. ಅವನು ನಾರ್ಮಂಡಿಯಲ್ಲಿ ಅಪ್ರತಿಹತವಾದ ಸಾಮರ್ಥ್ಯದಿಂದ ಆಡಳಿತಗಳನ್ನು ನಡೆಯಿಸುತ್ತಿದ್ದನು. ಇಂಗ್ಲೆಂಡ್‌ದೇಶವು ಅವನ ವಶಕ್ಕೆ ಬಾರದೇಹೋಗಿದ್ದರೆ, ಅಲ್ಲಿ ಫ್ಯೂಡಲಿಸಮ್ ಪದ್ಧತಿಯು ಬಹಳ ಅಭಿವೃದ್ಧಿಯಾಗಿ ದೊರೆಯು ಮೂಲೆಗೆಬಿದ್ದು, ಡ್ಯೂಕರೇ ಮುಂತಾದವರ ಸ್ವಾತಂತ್ರ್ಯವೂ, ಅಂತಃಕಲಹಗಳೂ, ಒಂದಕ್ಕೆ ಹತ್ತರಂತೆ ಹೆಚ್ಚಿ ರಾಜ್ಯವು ಅನಾಯಕವಾಗುತ್ತಿತ್ತು. ಆದರೆ ವಿಧಿವಶದಿಂದ ಇಂಗ್ಲೆಂಡ್ ರಾಜ್ಯವು ವಿಲಿಯಮನ ಕೈಗೆ ಸಿಕ್ಕಿ ಈ ಅನರ್ಥಗಳಿಂದ ಪಾರಾಯಿತು.

ಎಡ್ವರ್ಡ್ ದೊರೆಯು ಮೃತನಾದನು. ಆತನ ಮಗನಾದ ಎಡ್‌ಗರ್ ಅಥೆಲಿಂಗ್ (Edgar Atheling) ಎಂಬವನು ಇನ್ನೂ ಸಣ್ಣಬಾಲಕನಾಗಿದ್ದನು. ಆದುದರಿಂದ, ವಿಟನಾಜಿಮೋಟ್ ಸಭೆಯವರು ರಾಣಿಯ ತೌರುಮನೆಯವರಾದ ಗಾಡ್‌ವಿನ್ ಮನೆತನಕ್ಕೆ ಸೇರಿದ ಹ್ಯಾರಲ್ಡ್ (Harold) ಎಂಬವನನ್ನು ಪಟ್ಟಕ್ಕೆ ತಂದರು.

ಇದನ್ನು ಕೇಳಿ ವಿಲಿಯಮನಿಗೆ ಬಹಳ ಕೋಪಬಂತು. ತನಗೆ ಇಂಗ್ಲೆಂಡ್‌ರಾಜ್ಯದ ಸಿಂಹಾಸನವು ಸಿಕ್ಕುವುದೆಂಬ ಆಸೆಯು ಬಯಲಾದುದೊಂದು; ಶುದ್ಧ ಇಂಗ್ಲಿಷ್ ಮನೆತನದವನಾದ ಹ್ಯಾರಲ್ಡನು ಸಿಂಹಾಸನಕ್ಕೆ ಬಂದುದರಿಂದ, ಆ ಮನೆತನದವರು ನಾರ್ಮನ್ ಜನರನ್ನು ಮೊದಲಿಗಿಂತ ಹೆಚ್ಚಾಗಿ ದ್ವೇಷಿಸಬಹುದೆಂಬ ನಿರೀಕ್ಷೆಯೊಂದು; ಇದರಮೇಲೆ ವಿಲಿಯಮನಿಗೆ ಹ್ಯಾರಲ್ಡನನ್ನು ಕಂಡರೆ ಆಗದೇ ಇದ್ದುದೊಂದು. ಈ ಕಾರಣಗಳಿಂದ ವಿಲಿಯಮನು ಇಂಗ್ಲೆಂಡಿನ ಮೇಲೆ ದಂಡೆತ್ತಿಹೋಗಲು ಸಿದ್ಧವಾದನು. ಆ ಸಮಯಕ್ಕೆ

ಸರಿಯಾಗಿ ಅವನಿಗೆ ಒಂದು ನೆವವೂ ಸಿಕ್ಕಿತು. ಇಂಗ್ಲೆಂಡಿನ ದೊರೆಗಳಿಗೂ ಕ್ರೈಸ್ತಮತಕ್ಕೆ ಮುಖ್ಯ ಗುರುಗಳಾದ (ಇಟೆಲಿಯಲ್ಲಿ ರೋಂನಗರದಲ್ಲಿದ್ದ) ಪೋಪರಿಗೂ ಮನಸ್ತಾಪವಿತ್ತು. ಇದರಮೇಲೆ ಇಂಗ್ಲೆಂಡಿನ ದೊರೆಯು, ಪೋಪರು ಕಳುಹಿಸಿದಾತನಿಗೆ ಕೆಲಸವನ್ನು ಕೊಡದೆ, ತನ್ನ ಕಡೆಯವನಾದ ಸ್ಟಿಗ್ಯಾಂಡ (Stigand) ಎಂಬಾತನನ್ನು ಯಾರ್ಕಿನ ಆರ್ಚ್‌ಬಿಷಪ್ ಕೆಲಸಕ್ಕೆ ತಂದನು. ಇದರಿಂದ ಪೋಪರ ಮನಸ್ಸಿನಲ್ಲಿ ಕೋಪವು ಕುದಿಯುತ್ತಿತ್ತು. ಈಸಂದರ್ಭದಲ್ಲಿ ವಿಲಿಯಮನು ಇಂಗ್ಲೆಂಡಿನ ದಿಗ್ವಿಜಯಕ್ಕೆ ಪೋಪರಿಂದ ಅನುಮತಿಯನ್ನು ಪಡೆಯುವುದು ಬಹಳ ಸುಲಭವಾಗಿತ್ತು. ವಿಲಿಯಮನು ತಾನು ಗುರುಗಳ ಅಪ್ಪಣೆಯಿಂದ ಇಂಗ್ಲೆಂಡನ್ನು ಮುತ್ತುವುದಾಗಿ ಕುಂಟು ನೆವವನ್ನು ಹೇಳುತ್ತಾ ದೊಡ್ಡದೊಂದು ಸೈನ್ಯವನ್ನು ತೆಗೆದುಕೊಂಡು ಇಂಗ್ಲೆಂಡಿಗೆ ಬಂದಿಳಿದನು.

ಹ್ಯಾರಲ್ಡನು ಶತ್ರುವಿನೊಡನೆ ಧೈರ್ಯದಿಂದ ಕಾದಲು ಯತ್ನಿಸಿದನು. ಆದರೆ ಜನಸಹಾಯವು ಒದಗದೇ ಹೋದುದರಿಂದ, ಅವನು ಯುದ್ಧದಲ್ಲಿ ಸೋಲಬೇಕಾಗಿ ಬಂತು. ಹೇಸ್ಟಿಂಗ್ಸ್ ಕದನದಲ್ಲಿ ವಿಲಿಯಮನು ಹ್ಯಾರಲ್ಡನನ್ನು ಸಂಪೂರ್ಣವಾಗಿ ಸೋಲಿಸಿದನು. ಬಳಿಕ, ವೆಸೆಕ್ಸನ್ನು ಸ್ವಾಧೀನಮಾಡಿಕೊಂಡು ಮುಂದೆಮುಂದೆ ದೇಶವನ್ನು ವಶಪಡಿಸಿಕೊಂಡು ನಡೆದನು. ಇಷ್ಟರಲ್ಲಿ ವಿಟಾನ್ ಸಭೆಯವರು ರಾಜಕುಮಾರನಾದ ಎಡ್ಗರನನ್ನು ದೊರೆಯಾಗಿ ಆರಿಸುವ ವಿಷಯವನ್ನು ಪರ್ಯಾಲೋಚಿಸಿ ಹಾಗೆ ಮಾಡುವುದು ಸರಿಯಲ್ಲವೆಂದು ನಿರ್ಧರಿಸಿ, ಕೊನೆಗೆ ವಿಲಿಯಮನನ್ನು ದೊರೆಯಾಗಿ ಆರಿಸಿದರು. ವಿಲಿಯಮನಿಗೆ ಕೇವಲ ಯುದ್ಧದಲ್ಲಿ ತಾನು ಜಯಶಾಲಿಯಾದ ಹಕ್ಕಿನಿಂದಲೇ ದೊರೆಯಾಗಲು ಇಷ್ಟವಿರಲಿಲ್ಲ. ಜನಗಳ ಸಮ್ಮತಿಯಿಂದ ತಾನು ಪಟ್ಟಕ್ಕೆ ಬರಬೇಕೆಂದು ಅವನು ತವಕಪಡುತ್ತಿದ್ದನು. ವಿಟಾನ್ ಸಭೆಯವರು ತನ್ನನ್ನು ದೊರೆಯಾಗಿ ಆರಿಸುವಂತೆ ಮಾಡುವುದಕ್ಕಾಗಿ ಅವನು ತನ್ನ ಪ್ರಾಬಲ್ಯವನ್ನು ಉಪಯೋಗಿಸಿ ಪ್ರಯತ್ನಮಾಡಿದನು. ವಿಟಾನಿನವರು ಅವನನ್ನು ದೊರೆಯಾಗಿ ಮಾಡಿದರು. ಮುಂದಿನ ಕ್ರಿಸ್ಮಸ್ ಹಬ್ಬದಲ್ಲಿ ಆತನಿಗೆ ಕಟ್ಟಳೆಯಪ್ರಕಾರ ಯಾರ್ಕಿನ ಆರ್ಚ್‌ಬಿಷಪ್ಪಿನಿಂದ ಕಿರೀಟಧಾರಣೆಯಾಯಿತು.

ವಿಲಿಯಮನ ಕೋರಿಕೆಯು ಈಡೇರಿತು. ಆತನು, ಈಗ ನಾಲ್ಕು ಬಗೆಯ ಹಕ್ಕುಗಳಿಂದ ಇಂಗ್ಲೆಂಡಿನ ರಾಜನಾದನು: ಇಂಗ್ಲೆಂಡನ್ನು ಜಯಿಸಿದ ಹಕ್ಕೊಂದು; ಹಿಂದೆ ಎಡ್ವರ್ಡ್ ದೊರೆಯಿಂದ ಪಡೆದಿದ್ದ ವಾಗ್ದಾನದ ಹಕ್ಕೊಂದು; ವಿಟನಾಜಿಮೋಟ್ ಸಭೆಯು ಆರಿಸಿದುದೊಂದು; ಪದ್ಧತಿಯ

ಪ್ರಕಾರ, ಇಂಗ್ಲಿಷ್ ಬಿಷಪ್ಪರಿಂದ ಕಿರೀಟಧಾರಣೆಯಾದುದೊಂದು. ಈ ಹಕ್ಕುಗಳಿಂದ ವಿಲಿಯಮನು ಇಂಗ್ಲಿಷರಿಗೂ ನಾರ್ಮನರಿಗೂ ಒಡೆಯನಾದನು. ವಿಲಿಯಮನು ಹೊಸದಾಗಿ ಯಾವ ಆಡಳಿತಕ್ರಮವನ್ನೂ ಸ್ಥಾಪಿಸದೇ ಇದ್ದರೂ ಹಿಂದಿನ ರಾಜ್ಯಭಾರಕ್ರಮವನ್ನು ಚೆನ್ನಾಗಿ ತಿದ್ದುಪಾಡುಮಾಡಿ, ದೊರೆತನದ ಬಿಗಿಯನ್ನು ಬಲಪಡಿಸಿದನು.

ಹಿಂದಿನಿಂದಲೂ ದೊರೆಗಳಾಗಿದ್ದವರಿಗೆ ಇದ್ದ ಹಕ್ಕುಗಳನ್ನೆಲ್ಲಾ, ವಿಲಿಯಮನು ತನಗೂ ಬರಮಾಡಿಕೊಂಡನು. ಸ್ಕಾಟ್ಲೆಂಡಿನ ದೊರೆಯು ತನಗೆ ಆಶ್ರಿತರಾಜನಾಗುವಂತೆ ಮಾಡಿಕೊಂಡನು. ಇಂಗ್ಲೆಂಡಿನ ಹಿಂದಿನ ದೊರೆಗಳಾರೂ ಪೋಪರಿಗೆ ವಶವರ್ತಿಗಳಾಗದೇ ಇದ್ದುದರಿಂದ ತಾನು ಆ ಪದ್ಧತಿಯನ್ನು ಬಿಡಲಾಗುವುದಿಲ್ಲವೆಂದು ಪೋಪರಿಗೆ ತಿಳಿಸಿಬಿಟ್ಟನು. ಬಳಿಕ, ನಿರಾತಂಕವಾಗಿ ರಾಜ್ಯಭಾರ ಮಾಡತೊಡಗಿದನು. ಆದರೂ, ಅವನ ಸ್ಥಿತಿಯು ಕೇವಲ ಸಂದಿಗ್ಧವಾಗಿತ್ತು. ಅವನು, ತಾನು ನಿಶ್ಚಯವಾಗಿಯೂ ಇಂಗ್ಲಿಷರ ಹಿತಚಿಂತಕನೆಂದು ಅವರಿಗೆ ನಂಬಿಕೆಯುಂಟಾಗುವಂತೆ ರಾಜ್ಯಭಾರಮಾಡಬೇಕೆಂದೆಣಿಸಿದನು; ಆದರೆ ತನಗೋಸ್ಕರವಾಗಿ ತಮ್ಮಜೀವವನ್ನು ಕೂಡ ಒಪ್ಪಿಸುವುದಕ್ಕೆ ಸಿದ್ಧರಾಗಿ ತನ್ನೊಡನೆ ಬಂದಿದ್ದ ನಾರ್ಮನರ ಯೋಗಕ್ಷೇಮವನ್ನು, ಅವನು ಅವಶ್ಯವಾಗಿ ನೋಡಿಕೊಳ್ಳಬೇಕಾಗಿತ್ತು. ಹೀಗೆ, ಉಭಯತ್ರರ ಮನಸ್ಸಿಗೂ ಅಸಮಾಧಾನವಾಗದಂತೆ ರಾಜ್ಯಭಾರಮಾಡುವುದು ಸಾಮಾನ್ಯವಿಚಾರವಾಗಿರಲಿಲ್ಲ. ಫ್ರಾನ್ಸ್ ಮುಂತಾದ ದೇಶಗಳಲ್ಲಿ ಫ್ಯೂಡಲಿಸಮ್ ಪದ್ಧತಿಯು ವಿಶೇಷ ಅಭಿವೃದ್ಧಿಗೆ ಬಂದು, ಒಬ್ಬೊಬ್ಬ ಡ್ಯೂಕನೂ ಒಬ್ಬೊಬ್ಬ ಅರಸುಮಗನಂತಾಗಿ ದೊರೆಯನ್ನು ಕೇಳುವವರೇ ಇಲ್ಲದಂತಾಗಿತ್ತು. ವಿಲಿಯಮನು ನಾರ್ಮಂಡಿಯಲ್ಲಿದ್ದಾಗ, ತಾನೂ ಇತರ ಡ್ಯೂಕರಂತೆಯೇ ನಡೆಯುತ್ತಿದ್ದುದರಿಂದ ಫ್ಯೂಡಲಿಸಮ್ ಪದ್ಧತಿಯನ್ನು ಅಭಿವೃದ್ಧಿಗೆ ತರುವುದರಿಂದ ದೊರೆಯಾದ ತನಗೆ ಉಂಟಾಗಬಹುದಾದ ಅನರ್ಥಗಳು ಅವನಿಗೆ ಚೆನ್ನಾಗಿ ಗೊತ್ತಾಗಿದ್ದುವು. ಆದುದರಿಂದ ವಿಲಿಯಮನು ಯುಕ್ತವಾದ ಬದಲಾವಣೆಗಳನ್ನು ಮಾಡಿ ಇಂಗ್ಲೆಂಡಿನಲ್ಲಿ ಫ್ಯೂಡಲಿಸಮ್ ಪದ್ಧತಿಯು ಹೆಸರಿಗೆ ಮಾತ್ರ ಉಳಿದಿರುವಂತೆ ಮಾಡಿದನು.

ವಿಲಿಯಮನು ಮುಂದೆ ಇಂಗ್ಲೆಂಡಿನ ಸಿಂಹಾಸನವು ತನಗೆ ದೊರೆಯುವಂತೆ ಎಡ್ವರ್ಡ್ ದೊರೆಯು ವಾಗ್ದಾನಮಾಡಿದ್ದಂತೆಯೂ, ಆದಕಾರಣ ಆ ದೊರೆಯು ಸತ್ತಂದಿನಿಂದಲೂ ತಾನೇ ಇಂಗ್ಲೆಂಡಿನ ದೊರೆಯಾದಂತೆಯೂ, ಹೇಸ್ಟಿಂಗ್ಸ್ ಕದನದಲ್ಲಿ ತನಗೆ ಪ್ರತಿಕಕ್ಷಿಗಳಾಗಿ ಯುದ್ಧ ಮಾಡಿದವರೆಲ್ಲರೂ

ರಾಜದ್ರೋಹಿಗಳೆಂದೂ, ತನಗೆ ಸಹಾಯಮಾಡದೆ ತಟಸ್ಥರಾಗಿದ್ದವರು ಕೂಡ ಅಪರಾಧ ಮಾಡಿದಂತಾಯಿತೆಂದೂ, ಹೇಳಿ ಇಂಗ್ಲೆಂಡಿನಲ್ಲಿ ಭೂಸ್ಥಿತಿಯಿದ್ದವರನ್ನೆಲ್ಲಾ ತನ್ನ ವಶವರ್ತಿಗಳನ್ನಾಗಿ ಮಾಡಿಕೊಂಡನು. ರಾಜದ್ರೋಹಿಗಳೆಂದು ಭಾವಿಸಿದ್ದವರೆಲ್ಲರೂ ಭೂಮಿಯನ್ನು ಕಳೆದುಕೊಳ್ಳಬೇಕಾಯಿತು; ಅವನಿಗೆ ಸಹಾಯಮಾಡದೆ ತಟಸ್ಥರಾಗಿದ್ದವರೆಲ್ಲರೂ ದಂಡದ್ರವ್ಯವನ್ನು ತೆರಬೇಕಾಯಿತು, ಇದರಿಂದ ವಿಲಿಯಮನು ತಮ್ಮೆಲ್ಲರಿಗೂ ಒಡೆಯನೆಂದು ಎಲ್ಲರೂ ಒಪ್ಪಿಕೊಂಡಂತಾಯಿತು. ಮೊದಲು ಸರಕಾರಕ್ಕೆ ಸೇರಿದ್ದು, ಆಗಾಗ ಜನರಿಗೆ ಕೊಡುತ್ತಿದ್ದ ಭೂಪ್ರದೇಶ (Folkland) ಗಳನ್ನು, ವಿಲಿಯಮನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡನು. ಅಲ್ಲಿಂದೀಚೆಗೆ ಅದಕ್ಕೆ "ದಿ ಫಾರೆಸ್ಟ್" (The forest) ಎಂದು ಹೆಸರು ಬಂತು. ದಂಗೆಯೆದ್ದವರ ಭೂಮಿಯನ್ನೆಲ್ಲಾ ವಿಲಿಯಮನು ಅವರಿಂದ ಕಿತ್ತುಕೊಂಡು ತನಗೆ ಆಪ್ತರಾಗಿದ್ದು ಸಹಾಯಮಾಡಿದವರಿಗೆ ಕೊಡಲಾರಂಭಿಸಿದನು.

ಫ್ಯೂಡಲಿಸಮ್ ಪದ್ಧತಿಯು ವೃದ್ಧಿಯಾದ ಹಾಗೆಲ್ಲಾ ಡ್ಯೂಕ್, ಅರ್ಲ್, ಮುಂತಾದವರ ಪದವಿಯು ವಂಶಪಾರಂಪರ್ಯವಾಗುತ್ತಾಬಂದು ಅವರು ಬಹಳ ಸ್ವತಂತ್ರರಾಗಿ ಪರಿಣಮಿಸಿ ದೊರೆಯನ್ನು ಮೂಲೆಗೆ ಒತ್ತರಿಸುವರೆಂಬುದನ್ನು ವಿಲಿಯಮನು ಚೆನ್ನಾಗಿ ಅರಿತಿದ್ದನು. ಆದಕಾರಣ, ಅವನು ಬಹಳ ಮುಖ್ಯವಾಗಿದ್ದ ಮರ್ಷಿಯ, ವೆಸೆಕ್ಸ್, ನಾರ್ತಂಬ್ರಿಯ ಮತ್ತು ಈಸ್ಟ್ಆಂಗ್ಲಿಯ ಎಂಬ ಅರ್ಲ್‌ಡಮ್‌ಗಳನ್ನು ತೆಗೆದುಹಾಕಿ, ಅವುಗಳ ಸ್ಥಾನದಲ್ಲಿ ಪೂರ್ವದಲ್ಲಿದ್ದಂತೆ ಷೈರುಗಳನ್ನೇರ್ಪಡಿಸಿ, ಅಲ್ಲಿಗೆ ಷೆರೀಫರೆಂಬ ಅಧಿಕಾರಿಗಳನ್ನು ನಿಯಮಿಸಿದನು. ಆದರೆ, ಡರ್‌ಹಾಂ (Durham) ಚೆಷೈರ್ (Cheshire) ಮತ್ತು ಕೆಂಟ್ (Kent) ಎಂಬ ಅರ್ಲ್‌ಡಮ್ಮುಗಳನ್ನು ಮಾತ್ರ ತೆಗೆದುಹಾಕಲಿಲ್ಲ. ಅಲ್ಲಿನ ಅರ್ಲ್‌ಗಳು ಪ್ರಮುಖರಾಗಿದ್ದುದು ದೇನೋ ನಿಜ; ಆದರೂ ವಿಲಿಯಮನು ಈ ಅರ್ಲ್‌ಡಮ್‌ಗಳನ್ನು ಉಳಿಸಿದುದಕ್ಕೆ ಕಾರಣವಿತ್ತು. ಹೊರಗಿನ ಜನರ ಈತಿಬಾಧೆಗಳನ್ನು ತಪ್ಪಿಸಿ ರಾಜ್ಯವನ್ನು ಕಾಪಾಡುವುದಕ್ಕೋಸ್ಕರವಾಗಿ ವಿಲಿಯಮನು ಇವುಗಳನ್ನುಳಿಸಬೇಕಾಯಿತು. ಚೆಷೈರಿನ ಅರ್ಲನು ವೆಲ್ಷ್ ಜನರ ತೊಂದರೆಯನ್ನು ತಪ್ಪಿಸುತ್ತಿದ್ದನು; ಡರ್‌ಹಾಂ ಅರ್ಲಿನಿಂದ ಸ್ಕಾಟ್‌ಜನರು ಕೊಡಬಹುದಾದ ಕಿರುಕುಳವು ತಪ್ಪುತ್ತಿತ್ತು; ಯೂರೋಪ್ ಖಂಡದ ಇತರ ಕಡೆಗಳಿಂದ ಬರುತ್ತಿದ್ದವರ ಹಾವಳಿಯನ್ನಡಗಿಸುವುದಕ್ಕೆ ಕೆಂಟಿನ ಅರ್ಲಿನಿಂದ ಬಹಳ ಸಹಾಯವಾಗುತ್ತಿತ್ತು. ಇಬ್ಬರು ಮತಾಧಿಕಾರಿಗಳು ಡರ್‌ಹಾಂ ಮತ್ತು ಕೆಂಟಿನ ಅರ್ಲರಾಗಿ ನಿಯಮಿತರಾದರು. ಆಗಿನ ಕಾಲದಲ್ಲಿ ಮತಾಧಿಕಾರಿಗಳು ಮದುವೆ ಮಾಡಿಕೊಳ್ಳಕೂಡದೆಂಬ ನಿಯಮವಿದ್ದುದರಿಂದ ಆ ಎರಡು ಅರ್ಲ್‌ಡಮ್ಮುಗಳೂ

ವಂಶಪಾರಂಪರ್ಯವಾಗಿ ನಡೆದುಬಂದು, ಅರ್ಲ್‌ಗಳು ಪ್ರಬಲರಾಗಿ, ದೊರೆಗೆ ತೊಂದರೆಯನ್ನುಂಟುಮಾಡಬಹುದೆಂಬ ಭಯಕ್ಕೆ ಲೇಶವೂ ಅವಕಾಶವಿರಲಿಲ್ಲ. ತನ್ನ ಆಲೋಚನಾಸಾಮರ್ಥ್ಯದಿಂದ ಇದನ್ನೆಲ್ಲಾ ನಿರ್ಧರಿಸಿದ ವಿಲಿಯಮನ ಜಾಣ್ಮೆಯನ್ನು ಎಷ್ಟುಕೊಂಡಾಡಿದರೂ ಸಾಲದು.

ಭೂಪ್ರದೇಶಗಳನ್ನು ವಿನಿಯೋಗಮಾಡುವುದರಲ್ಲಿಯೂ ವಿಲಿಯಮನು ಬಹಳ ಚತುರತೆಯನ್ನು ತೋರಿಸಿದನು. ಭೂಮಿಯನ್ನು ಹೇರಳವಾಗಿ ಬಂದೇಕಡೆಯಲ್ಲಿರುವಂತೆ ಕೊಡುವುದಾದರೆ ಜನರು ಬಹಳ ಪ್ರಬಲರಾಗುವರೆಂದುಬಗೆದು ಹಾಗೆ ಮಾಡದೆ ಕೊಡತಕ್ಕ ಭೂಪ್ರದೇಶಗಳು ಇಲ್ಲಿ ಸ್ವಲ್ಪ, ಅಲ್ಲಿ ಸ್ವಲ್ಪ, ಇನ್ನೊಂದು ಕಡೆಯಲ್ಲಿ ಸ್ವಲ್ಪ—ಈ ರೀತಿಯಾಗಿ ಹರಡಿಕೊಂಡಿರುವಂತೆ ಮಾಡಿದನು.

ಫ್ರಾನ್ಸ್ ಮುಂತಾದ ದೇಶಗಳಲ್ಲಿ ಫ್ಯೂಡಲಿಸಮ್ ಪದ್ಧತಿಯು ವಿಶೇಷ ಅಭಿವೃದ್ಧಿಗೆಬಂದು, ಡ್ಯೂಕ್, ಅರ್ಲ್, ಮೊದಲಾದವರೆಲ್ಲರೂ ದೊಡ್ಡದೊಡ್ಡ ದುರ್ಗಗಳನ್ನು ಕಟ್ಟಿಕೊಂಡು ಬಹಳ ಪ್ರಬಲರಾಗಿದ್ದರು. ಈ ದುರ್ಗಗಳಿಂದಲೂ, ಇವರುಗಳ ಸಾಮರ್ಥ್ಯದಿಂದಲೂ, ದೊರೆಯು ಕೂಡ ಭಯದಿಂದ ನಡುಗಬೇಕಾಗಿತ್ತು. ಆದರೆ ಇಂಗ್ಲೆಂಡಿನಲ್ಲಿ ವಿಲಿಯಮನು ಇದಕ್ಕೆ ಅವಕಾಶ ಕೊಡದೆ ದುರ್ಗಗಳನ್ನೆಲ್ಲಾ ತನ್ನ ಸ್ವಾಧೀನಪಡಿಸಿಕೊಂಡು ತನ್ನಕಡೆಯ ಅಧಿಕಾರಿಗಳ ವಶಕ್ಕೊಪ್ಪಿಸಿದನು. ಅಲ್ಲದೆ, ಮೇಲೆ ಹೇಳಿದ ದೊಡ್ಡಮನುಷ್ಯರಲ್ಲಿ ಯಾರೂ, ಯಾವ ಸಂದರ್ಭದಲ್ಲಿಯೂ, ದುರ್ಗವನ್ನು ಕಟ್ಟಕೂಡದೆಂದು ಕಟ್ಟುಮಾಡಿದನು. ಆದರೆ, ಅವರೆಲ್ಲರೂ ಹೀಗೆ ನಡೆದುಕೊಳ್ಳುವಂತೆ ಮಾಡುವುದಕ್ಕಾಗಿ, ವಿಲಿಯಮನೂ ಅವನ ಮಕ್ಕಳೂ ಎಷ್ಟೋ ಶ್ರಮವನ್ನು ವಹಿಸಬೇಕಾಯಿತು.

ಹೊರಗಿನ ದೇಶಗಳಲ್ಲಿ, ಡ್ಯೂಕ್ ಮುಂತಾದವರು ತಮ್ಮ ಆಡಳಿತಕ್ಕೆ ಒಳಪಟ್ಟ ಪ್ರಾಂತಗಳಲ್ಲಿ ತಮಗೆ ಬೇಕಾದ ನ್ಯಾಯಗಳನ್ನು ಆಚರಣೆಗೆ ತಂದುಕೊಂಡು, ತಮ್ಮ ಪ್ರಾಂತಗಳಿಗೆ ಹೊರಗಿನಿಂದ ಬರುವ ಸರಕುಗಳಿಗೆ ಸುಂಕವನ್ನು ಹಾಕುತ್ತಾ, ನ್ಯಾಯವಿಮರ್ಶೆಮಾಡುವ ಅಧಿಕಾರವನ್ನು ಕೂಡ ತಮ್ಮ ಕೈಯಲ್ಲಿಟ್ಟುಕೊಂಡಿರುತ್ತಿದ್ದರು. ಆದರೆ, ವಿಲಿಯಮನು ಇಂಗ್ಲೆಂಡಿನಲ್ಲಿ ಇದೊಂದಕ್ಕೂ ಅವಕಾಶವನ್ನು ಕೊಡದೆ, ತಾನು ವಿಧಿಸಿದ ನ್ಯಾಯ ನಿಬಂಧನೆಗಳನ್ನೇ ಪ್ರಜೆಗಳೆಲ್ಲರೂ ಅನುಸರಿಸಬೇಕೆಂದೂ, ತಾನು ಸ್ಥಾಪಿಸಿದ ನ್ಯಾಯಸ್ಥಾನಗಳಲ್ಲೇ ನ್ಯಾಯವಿಮರ್ಶೆಯಾಗಬೇಕೆಂದೂ, ಸುಂಕವನ್ನು ವಿಧಿಸುವುದಕ್ಕೆ ಸರಕಾರದವರ ಹೊರತು ಮತ್ತಾರೂ ಬಾಧ್ಯರಲ್ಲವೆಂದೂ,

ಇಂಗ್ಲೆಂಡಿನಲ್ಲಿ ಡ್ಯೂಕ್ ಮುಂತಾದವರು ಹಾಕಿದ ಸುಂಕಗಳಿರಕೂಡದೆಂದೂ ಕಟ್ಟುಮಾಡಿದನು.

ಡ್ಯೂಕ್ ಮುಂತಾದ ದೊಡ್ಡಮನುಷ್ಯರು ಸೈನ್ಯವನ್ನೊದಗಿಸಿಕೊಂಡು ದೊರೆಯ ಮೇಲೆ ಕೈಮಾಡದಂತೆ ವಿಲಿಯಂ ದೊರೆಯು ಅಡ್ಡಿಯನ್ನು ತಂದೊಡ್ಡಿದನು. ಇವರೆಲ್ಲರಿಗೂ ಮೊದಲಿದ್ದಂತೆ ಒಟ್ಟಿಗೆ ಒಂದೇ ಕಡೆಯಲ್ಲಿ ಭೂಮಿಯನ್ನು ಕೊಡದೇ ಹೋದುದರಿಂದ ಅವರ ಬಲವು ಕಡಿಮೆಯಾಯಿತು. ಒಟ್ಟಿಗೆ ಒಂದೇ ಕಡೆಯಲ್ಲಿ ತಮಗೆ ಭೂಮಿಯು ಇದ್ದಾಗ ಅವರೆಲ್ಲರೂ ತಮ್ಮ ಕೈಕೆಳಗಿನವರನ್ನು ಕ್ಷಣಮಾತ್ರದಲ್ಲಿ ಒಟ್ಟುಗೂಡಿಸಿ, ಯಾವ ಗಳಿಗೆಯಲ್ಲಿ ಬೇಕಾದರೆ ಆ ಗಳಿಗೆಯಲ್ಲಿ, ಸೈನ್ಯದೊಡನೆ ಹೊರಟು ದೊರೆಯ ಮೇಲೆ ಕೈಮಾಡುತ್ತಿದ್ದರು. ವಿಲಿಯಮನ ಏರ್ಪಾಡಿನಿಂದ ಹೀಗೆ ಮಾಡುವುದು ಅಸಾಧ್ಯ ವಾಯಿತು. ಈ ದೊಡ್ಡಮನುಷ್ಯರಿಗೆ ಸೇರಿದ್ದ ಭೂಪ್ರದೇಶಗಳು ಅಲ್ಲಲ್ಲಿ ಹರಡಿದ್ದುದರಿಂದ, ಅವರ ಕೈಕೆಳಗಿನ ಜನರೂ ಒಟ್ಟಿಗಿರದೆ ಅಲ್ಲಲ್ಲಿ ಚೆದರಿ ಕೊಂಡಿರಬೇಕಾಯಿತು. ಹೀಗೆ ಅಲ್ಲಲ್ಲಿದ್ದವರನ್ನೆಲ್ಲಾ ಬೇಗನೆ ಒಟ್ಟುಗೂಡಿ ಸುವುದು ಸಾಧ್ಯವಾಗಿರಲಿಲ್ಲ. ಫ್ಯೂಡಲಿಸಮ್ ಪದ್ಧತಿಗೆ ಒಳಪಟ್ಟವರೆಲ್ಲರೂ ತಮತಮಗೆ ಮೇಲ್ಪಟ್ಟವರಿಗೆ, ಯುದ್ಧಕಾಲದಲ್ಲಿ ತಾವು ಅವರಿಗೆ ಸಹಾಯ ಮಾಡುವುದಾಗಿ ವಾಗ್ದಾನಮಾಡುವ ಪದ್ಧತಿಯು ಇತ್ತೆಂದು ಹಿಂದೆಯೇ ಹೇಳಿರುವೆವಷ್ಟೆ. ಈ ಪದ್ಧತಿಯಿಂದ ಡ್ಯೂಕರೇ ಮುಂತಾದ ದೊಡ್ಡಮನುಷ್ಯರು ತಮ್ಮ ಕೈಕೆಳಗಿನವರನ್ನು ಗುಂಪುಕೂಡಿಸಿ ಸೈನ್ಯವನ್ನು ಕಟ್ಟಿ, ದೊರೆಯ ಮೇಲೆ ಬೀಳಲನುಕೂಲಿಸುತ್ತಿತ್ತು ; ಹೀಗೆ ಸಹಾಯಮಾಡುವುದು ಆ ದೊಡ್ಡ ಮನುಷ್ಯರ ಕೈಕೆಳಗಿನವರ ಕರ್ತವ್ಯವಾಗಿದ್ದುದರಿಂದ, ಅವರನ್ನು ರಾಜ ದ್ರೋಹಿಗಳೆಂದು ಪರಿಗಣಿಸಲವಕಾಶವಿರಲಿಲ್ಲ. ವಿಲಿಯಮನು ಈ ಪದ್ಧತಿ ಯನ್ನು ತಪ್ಪಿಸಿ ಫ್ಯೂಡಲಿಸಮ್ಮಿಗೆ ಸಂಬಂಧಪಟ್ಟವರೆಲ್ಲರೂ ತನ್ನ ಬಳಿಗೆ ಮಾತ್ರವೇ ಬಂದು, ತನ್ನಲ್ಲಿ ಸ್ವಾಮಿಭಕ್ತಿಯನ್ನೂ, ರಾಜಭಕ್ತಿಯನ್ನೂ, ತೋರಿಸುವುದಾಗಿಯೂ, ಯುದ್ಧಕಾಲದಲ್ಲಿ ತನಗೆ ಸಹಾಯಮಾಡುವುದಾ ಗಿಯೂ, ಪ್ರಮಾಣಮಾಡಿಕೊಟ್ಟು, ಯುದ್ಧ ಮಾಡಲು ಸಹಾಯಮಾಡು ವುದೊಂದು ಹೊರತು ಉಳಿದ ವಿಚಾರಗಳಲ್ಲಿ ಮೊದಲಿನಂತೆಯೇ ತಮ್ಮತಮ್ಮ ಮೇಲ್ಪಟ್ಟವರಲ್ಲಿ ವಿಧೇಯರಾಗಿ ನಡೆದುಕೊಂಡು, ಅವರಿಂದ ಎಂದಿನಂತೆಯೇ ಭೂಮಿಯನ್ನು ಪಡೆದುಕೊಳ್ಳಬಹುದೆಂದು ಅಪ್ಪಣೆಮಾಡಿದನು. ಇದರಿಂದ, ಅವರು ತಮ್ಮತಮ್ಮ ಮೇಲ್ಪಟ್ಟವರನ್ನು ಅನುಸರಿಸಿ, ಅವರಿಗೆ ಬೆಂಬಲವಾಗಿ ನಿಂತು ರಾಜನಮೇಲೆ ಕೈಮಾಡುವುದು ಸಂಪೂರ್ಣವಾಗಿ ತಪ್ಪಿಹೋಯಿತು. ಒಂದುವೇಳೆ, ಅವರು ಹಾಗೆ ಮಾಡಿದ್ದ ಪಕ್ಷದಲ್ಲಿ, ರಾಜನಿಗೆ ಕೊಟ್ಟ

ವಾಗ್ದಾನಕ್ಕೆ ತಪ್ಪಿ, ರಾಜದ್ರೋಹವನ್ನೆಸಗಿದವರೆಂದು ಹೇಳಿ ಅವರೆಲ್ಲರಿಗೂ ಕ್ರೂರವಾದ ಶಿಕ್ಷೆಯನ್ನು ವಿಧಿಸುವುದು ಗೊತ್ತೇ ಇತ್ತು.

ಯೂರೋಪಿನ ಇತರ ಭಾಗಗಳಲ್ಲಿ ಬಿಷಪ್ ಮುಂತಾದ ಮತಾಧಿಕಾರಿಗಳೂ (the clergy), ಫ್ಯೂಡಲಿಸಮ್ ಪದ್ಧತಿಗೆ ಸಂಬಂಧಪಟ್ಟ ದೊಡ್ಡ ಮನುಷ್ಯರೂ, ರಾಜಾದಾಯವನ್ನು ಕೊಡಬೇಕಾಗಿರಲಿಲ್ಲ. ಇಂಗ್ಲೆಂಡಿನಲ್ಲಾದರೋ ವಿಲಿಯಮನು, ಅವರೆಲ್ಲರೂ ರಾಜಾದಾಯವನ್ನು ಕೊಡತಕ್ಕದೆಂದು ನಿಷ್ಕರ್ಷೆಮಾಡಿದನು.

ವಿಲಿಯಂ ದೊರೆಯ ಕಾಲಕ್ಕೆ ಮೊದಲು ಬಿಷಪ್ ಮುಂತಾದ ಮತಾಧಿಕಾರಿಗಳು ಇತರ ದೊಡ್ಡಮನುಷ್ಯರೊಡನೆ ಷೈರ್‌ಮೂಟ್‌ಮುಂತಾದ ನ್ಯಾಯಸ್ಥಾನಗಳಲ್ಲಿ ಕುಳಿತು ಲೌಕಿಕವಿಚಾರಗಳಲ್ಲಿಯೂ, ಮತಸಂಬಂಧವಾದ ವಿಚಾರಗಳಲ್ಲಿಯೂ ನ್ಯಾಯವಿಮರ್ಶೆ ಮಾಡುತ್ತಿದ್ದರು. ವಿಲಿಯಮನು, ಪ್ರಮುಖರಾಗಿದ್ದ ಅನೇಕಮಂದಿ ಅರ್ಲ್‌ಗಳನ್ನು ತಾನು ತೆಗೆದುಹಾಕಿದ್ದುದರಿಂದ, ನ್ಯಾಯಸ್ಥಾನಗಳಲ್ಲಿ ಬಿಷಪ್ ಮುಂತಾದ ಮತಾಧಿಕಾರಿಗಳ ಸಂಖ್ಯೆಯು ಹೆಚ್ಚಿ ಲೌಕಿಕವಿಚಾರಗಳಿಗೆ ಅವರು ವಿಶೇಷ ತಲೆಹಾಕುವಂತೆ ಆಗುವುದೆಂದು ಎಣಿಸಿದನು. ಇದನ್ನು ತಪ್ಪಿಸುವುದಕ್ಕಾಗಿ, ಮತಾಧಿಕಾರಿಗಳಿಗೂ, ಷೈರ್‌ಮೂಟ್ ಮುಂತಾದ ನ್ಯಾಯಸ್ಥಾನಗಳಿಗೂ ಇದ್ದ ಸಂಬಂಧವನ್ನು ತಪ್ಪಿಸಿ ಲೌಕಿಕವಿಚಾರವಾದ ವಿವಾದಗಳ ನ್ಯಾಯವಿಮರ್ಶೆಯಲ್ಲಿ ಅವರಿಗೆ ಅಧಿಕಾರವಿಲ್ಲದಂತೆ ಮಾಡಿದನು. ಮತಸಂಬಂಧವಾದ ಅಪರಾಧಗಳನ್ನು ವಿಚಾರಣೆಮಾಡಿ, ತಪ್ಪಿತಸ್ಥರಿಗೆ ಅವರು ಶಿಕ್ಷೆಯನ್ನು ವಿಧಿಸಬಹುದೆಂದೂ, ಇದಕ್ಕಾಗಿ ಅವರು ಬೇರೇ ನ್ಯಾಯಸ್ಥಾನಗಳನ್ನು ಏರ್ಪಡಿಸಿಕೊಳ್ಳಬಹುದೆಂದೂ ಅಪ್ಪಣೆಮಾಡಿದನು. ಈ ಮತಸಂಬಂಧವಾದ ನ್ಯಾಯಸ್ಥಾನಗಳಿಗೆ, ಎಕ್ಲೀಸಿಯಾಸ್ಟಿಕಲ್ ಕೋರ್ಟುಗಳು (Ecclesiastical courts) ಎಂದು ಹೆಸರು.

ವಿಲಿಯಂ ದೊರೆಯು ಇಂಗ್ಲೆಂಡಿನಲ್ಲಿ ಬಿಷಪ್ ಮುಂತಾದವರ ಮತ್ತು ಪೋಪರ ನಿರಂಕುಶಪ್ರವರ್ತನೆಯನ್ನು ತಪ್ಪಿಸುವುದಕ್ಕಾಗಿ, ಕೆಲವು ನಿಬಂಧನೆಗಳನ್ನು ವಿಧಿಸಿದನು. ಅವುಗಳು ಯಾವುವೆಂದರೆ:—(೧) ದೊರೆಯ ಅಪ್ಪಣೆಯಿಲ್ಲದೆ ಇಂಗ್ಲೆಂಡಿನ ಪ್ರಜೆಗಳಾರೂ ಪೋಪರವರಿಗಾಗಲಿ, ಅವರ ಕಡೆಯ ಪೇಪಲ್ ಲೆಗೇಟ್ (Papal legate) ಎಂಬ ಅಧಿಕಾರಿಗಾಗಲಿ ವಿಧೇಯರಾಗಿ ನಡೆಯಕೂಡದು; ದೊರೆಯ ಸಮ್ಮತಿಯಿಲ್ಲದೆ ಅವರೊಡನೆ ಪತ್ರವ್ಯವಹಾರವನ್ನಿಟ್ಟುಕೊಳ್ಳಕೂಡದು. (೨) ಬಿಷಪ್ ಮುಂತಾದ ಅಧಿಕಾರಿಗಳು ದೊರೆಯ ಅನುಮತಿಯಿಲ್ಲದೆ ಸಭೆಸೇರಿ ಯಾವ ನಿಬಂಧನೆಗಳನ್ನೂ ಮಾಡಕೂಡದು. ಬಿಷಪ್

ಮುಂತಾದವರು ಆಗಾಗ ಸಭೆಸೇರಿ ದೊರೆಯ ಇಷ್ಟಕ್ಕೆ ವಿರೋಧನಾದ ನಿಬಂಧನೆಗಳನ್ನು ಮಾಡುತ್ತಿದ್ದುದನ್ನು ತಪ್ಪಿಸುವುದಕ್ಕಾಗಿ ವಿಲಿಯಮನು ಹೀಗೆ ಮಾಡಿದನು. (೩) ದೊರೆಯ ಅಪ್ಪಣೆಯಿಲ್ಲದೆ ಆತನ ಸೇವಕರಿಗಾಗಲೀ, ಇತರ ಪ್ರಜೆಗಳಿಗಾಗಲೀ ಪೋಪರು ಬಹಿಷ್ಕಾರವನ್ನು ಹಾಕಕೂಡದು. ಪೋಪರು ತಮ್ಮ ಇಷ್ಟಕ್ಕೆ ಸ್ವಲ್ಪವಿರೋಧವಾಗಿ ನಡೆದವರಿಗೆಲ್ಲಾ ಬಹಿಷ್ಕಾರವನ್ನು ಹಾಕಿ ತೊಂದರೆ ಪಡಿಸುತ್ತಿದ್ದುದು ಇದರಿಂದ ತಪ್ಪಿಹೋಯಿತು.

ಇದಲ್ಲದೆ, ವಿಲಿಯಮನು ಭೂಮಿಯನ್ನೆಲ್ಲಾ ಅಳತೆ ಮಾಡಿಸಿ, ಯಾರಿಗೆ ಎಷ್ಟು ಭೂಪ್ರದೇಶಗಳು ಸೇರಿದ್ದುವೆಂಬುದನ್ನೂ, ಅವು ಹಿಂದೆ ಯಾರ ಯಾರ ಅನುಭವದಲ್ಲಿದ್ದುವೆಂಬುದನ್ನೂ, ಅವುಗಳ ಸ್ಥಿತಿಯು ಎಂತಹುದೆಂಬುದನ್ನೂ, ಅವುಗಳ ಸ್ಥಿತಿಯನ್ನು ಎಷ್ಟುಮಟ್ಟಿಗೆ ಅಭಿವೃದ್ಧಿ ಮಾಡಬಹುದೆಂಬುದನ್ನೂ ನಿರ್ಧರಿಸುವಂತೆ ಅಧಿಕಾರಿಗಳನ್ನು ನಿಯಮಿಸಿ, ಇವುಗಳೆಲ್ಲವನ್ನೂ ಒಂದು ಪುಸ್ತಕದಲ್ಲಿ ಬರೆಯಿಸಿದನು. ಇದೇ ಪ್ರಸಿದ್ಧವಾದ 'ಡೂಮ್ಸ್‌ಡೆ' ಎಂಬ ಪುಸ್ತಕ.

ಇಷ್ಟೆಲ್ಲವನ್ನೂ ನೆರವೇರಿಸಲು ಬಹಳ ಕಾಲವು ಹಿಡಿಯಿತು. ಅವನ ನಿಬಂಧನೆಗಳು ಕೆಲವುಮಂದಿ ದೊಡ್ಡಮನುಷ್ಯರಿಗೆ ಸರಿಬೀಳದೆ ಅಲ್ಲಲ್ಲಿ ಕೆಲವು ದಂಗೆಗಳೂ ಆದುವು. ಸಮರ್ಥನಾದ ವಿಲಿಯಂ ದೊರೆಯು ಲೇಶವಾದರೂ ಎದೆಗುಂದದೆ ದಂಗೆಗಳನ್ನಡಗಿಸಿ, ತಾನು ವಿಧಿಸಿದ ನಿಬಂಧನೆಗಳೆಲ್ಲಾ ಆಚರಣೆಗೆ ಬರುವಂತೆ ಮಾಡಿದನು.

---

## ನಾಲ್ಕನೆಯ ಪ್ರಕರಣ.

### ನಾರ್ಮನರ ಪ್ರಭುತ್ವ.

ವಿಲಿಯಂ ದೊರೆಯ ಮಕ್ಕಳೂ ಕೂಡ, ಅವನ ಮೇಲ್ಪಂಕ್ತಿಯನ್ನೇ ಅನುಸರಿಸಿ ಫ್ಯೂಡಲಿಸಮ್ಮಿಗೆ ಸಂಬಂಧಪಟ್ಟ ದೊಡ್ಡಮನುಷ್ಯರ (Nobles) ಸೊಕ್ಕನ್ನಡಗಿಸಿ, ದರ್ಪದಿಂದ ಪ್ರಭುತ್ವಮಾಡಿದರು. ೧೦೮೭ನೆಯ ಇಸವಿಯಲ್ಲಿ ವಿಲಿಯಂ ದೊರೆಯು ರೋವೆನ್ (Rouen) ನಗರದಲ್ಲಿ ಮೃತನಾದನು. ಅವನ ಮಗನಾದ ವಿಲಿಯಂ ಎಂಬಾತನು ಸಭೆಯ ಅನುಮತಿಯಿಂದ ಇಂಗ್ಲೆಂಡಿನ ದೊರೆಯಾಗಿ ನಿಯಮಿತನಾದನು. ಒಡನೆಯೇ ಆತನು ಸತ್ಯವನ್ನುದ್ಧರಿಸಿ ನ್ಯಾಯವಾಗಿ ರಾಜ್ಯವನ್ನಾಳಿ, ಮತಧರ್ಮವನ್ನು ಕಾಪಾಡುವುದಾಗಿ ಪ್ರತಿಜ್ಞೆ ಮಾಡಿದನು. ಬಳಿಕ, ಅವನಿಗೆ ಕಿರೀಟಧಾರಣೆಯಾಯಿತು.

ಈತನು ಕೂಡ ತನ್ನ ತಂದೆಯಂತೆಯೇ ರಾಜ್ಯಭಾರಮಾಡತೊಡಗಿದನು. ಫ್ಯೂಡಲಿಸಮ್ಮಿಗೆ ಸಂಬಂಧಪಟ್ಟ ಬ್ಯಾರನ್ನರೆಂಬ ಒಂದು ಪಂಗಡದ ದೊಡ್ಡ ಮನುಷ್ಯರೆಲ್ಲಾ ಓಡೊ ಮತ್ತು ರಾಬರ್ಟ್ (Odo and Robert) ಎಂಬವರನ್ನು ಮುಂದಿಟ್ಟುಕೊಂಡು, ದೊರೆಗೆ ಪ್ರತಿಭಟಿಸಿ ನಿಂತು ರಾಚೆಸ್ಟರನ್ನು ಹಿಡಿದರು. ದೊರೆಯು ಇಂಗ್ಲೆಂಡಿನ ಜನಸಾಮಾನ್ಯಕ್ಕೆ, ತಾನು ಸ್ವಲ್ಪ ಕಂದಾಯವನ್ನು ಹಾಕಿ, ಸರಕಾರಕ್ಕೆ ಸೇರಿದ್ದ ಕಾಡುಗಳಲ್ಲೆಲ್ಲಾ ಅವರಿಗೆ ಬೇಟೆಯಾಡುವ ಹಕ್ಕನ್ನುಂಟುಮಾಡಿಕೊಟ್ಟು ನ್ಯಾಯದಿಂದ ರಾಜ್ಯವನ್ನು ಪಾಲಿಸುವುದಾಗಿ ಹೇಳಿ, ಅವರ ಸಹಾಯವನ್ನು ಪಡೆದು, ದಂಗೆಯನ್ನಡಗಿಸಿದನು. ಮುಂದೆ, ಸ್ವಲ್ಪಕಾಲದಲ್ಲಿಯೇ 'ಕ್ರೂಸೇಡ್ಸ್' (Crusades) ಎಂಬ ಮತ ಸಂಬಂಧವಾದ ಯುದ್ಧಕ್ಕೆ ಮೊದಲಾಯಿತು. ಈ ಯುದ್ಧದಲ್ಲಿ ಹೊಡೆದಾಡಿ ಕ್ರೈಸ್ತಮತವನ್ನು ಉದ್ಧರಿಸಬೇಕೆಂಬ ಉದ್ದೇಶದಿಂದ ಬ್ಯಾರನರಲ್ಲಿ ಅನೇಕರು ಇಂಗ್ಲೆಂಡನ್ನು ಬಿಟ್ಟು ಹೊರಟುಹೋದರು. ಆದುದರಿಂದ ದೊರೆಗೆ ಇವರಿಂದ ಉಂಟಾಗಬಹುದಾಗಿದ್ದ ದಂಗೆಯೇ ಮುಂತಾದ ತೊಂದರೆಗಳು ಸ್ವಲ್ಪ ಕಾಲದವರೆಗೆ ತಪ್ಪಿದುವು. ವಿಲಿಯಂ ದೊರೆಯ ಕಾಲದಲ್ಲಿ ಆರ್ಚ್‌ಬಿಷಪ್ಪನಾಗಿದ್ದ ಆನ್ಸ್‌ಲೆಮ್ (Anslem) ಎಂಬಾತನು (ದೊರೆಯ ತಂದೆಯಾದ ವಿಲಿಯಮನು ವಿಧಿಸಿದ್ದ ನಿಬಂಧನೆಗಳಿಂದ) ತಾನು ಲೌಕಿಕವಿಚಾರಕ್ಕೆ ಕೈಹಾಕುವ ಅಧಿಕಾರವು ತಪ್ಪಿಹೋಯಿತಲ್ಲಾ ಎಂದು ಚಿಂತಿಸಿ, ಕೊನೆಗೆ ಕೋಪಗೊಂಡು ದೊರೆಯೊಡನೆ ಜಗಳವಾಡಿದನು. ಕೊನೆಗೆ ತಮ್ಮಿಬ್ಬರಿಗೂ ಮನಸ್ತಾಪವು ಬರಲು ದೇಶವನ್ನೇ ಬಿಟ್ಟು ಓಡಿಹೋದನು.

ಈ ಎರಡನೆಯ ವಿಲಿಯಂ ದೊರೆಯು, ಹದಿಮೂರು ವರುಷಕಾಲ ದರ್ಪದಿಂದ ರಾಜ್ಯವಾಳಿದನು. ಪ್ರಜೆಗಳ ಸಹಾಯದಿಂದಲೂ ಮಂತ್ರಿಯಾದ ರ್ಯಾನಲ್ಫ್ ಫ್ಲ್ಯಾಂಬರ್ಡ್ (Ranulf Flambard) ಎಂಬಾತನ ಸಹಾಯದಿಂದಲೂ, ಅರ್ಲ್ ಮುಂತಾದವರ ಶಕ್ತಿಯನ್ನು ಆದಷ್ಟುಮಟ್ಟಿಗೆ ತಗ್ಗಿಸಿ, ಅವರ ದುರ್ಗಗಳನ್ನು ತಮ್ಮ ತಂದೆಯ ಕಾಲದಲ್ಲಿದ್ದಂತೆಯೇ ತನ್ನ ಸ್ವಾಧೀನದಲ್ಲಿ ಇಟ್ಟುಕೊಂಡು, ಅವರಿಂದ ಬರಬೇಕಾದ ಹಣವನ್ನು ಪೂರ್ತಿಯಾಗಿ ಬರಮಾಡಿಕೊಂಡು, ತನ್ಮೂಲಕ ಬಹಳ ಹಣವನ್ನು ಕೂಡಿಟ್ಟು, ದೇಶಕ್ಕೆ ಎಷ್ಟೋ ಒಳ್ಳೆಯದನ್ನು ಮಾಡಿ ಮೃತನಾದನು. ಅವನಿಗೆ ಮಕ್ಕಳಿರಲಿಲ್ಲ. ಆದುದರಿಂದ ಅವನ ತಮ್ಮನಾದ ಹೆನ್ರಿಯು ದೊರೆಯಾಗತಕ್ಕುದೆಂದು ವಿಟಾನ್ ಸಭೆಯವರು ಗೊತ್ತುಮಾಡಿದರು.

ಈ ಹೆನ್ರಿದೊರೆಯು (Henry I) ಪಟ್ಟಕ್ಕೆ ಬಂದೊಡನೆಯೇ ಜನರಂಜಕವಾದ ನಾಲ್ಕು ಕೆಲಸಗಳನ್ನು ಮಾಡಿದನು. ಅವುಗಳಾವುವೆಂದರೆ:—

(೧) ದೊಡ್ಡಮನುಷ್ಯರ ದ್ವೇಷಕ್ಕೆ ಪಾತ್ರನಾಗಿದ್ದ ರ್‍ಯಾನಲ್ಫ್ ಫ್ಲ್ಯಾಮ್‌ಬರ್ಡ್ Ranulf Flambard) ಎಂಬ ಮಂತ್ರಿಯನ್ನು ಸೆರೆಯಲ್ಲಿಟ್ಟುದು. ಇದರಿಂದ ದೊಡ್ಡಮನುಷ್ಯರಿಗೆಲ್ಲಾ ತೃಪ್ತಿಯಾಯಿತು. (೨) ಎಡ್‌ಗರ್ ಎಥೆಲಿಂಗ್ ಎಂಬವನ ಅಣ್ಣನಾದ ಸ್ಕಾಟ್ಲೆಂಡ್ ದೊರೆಯ ಮಗಳು ಮೊಡ್ (Maud) ಎಂಬಾಕೆಯನ್ನು ಮದುವೆಯಾದುದು. ಇದರಿಂದ ಜನರೆಲ್ಲರಿಗೂ ಬಹಳ ಸಂತೋಷವಾಯಿತು. ಏಕೆಂದರೆ ಹೆನ್ರಿಯ ವಂಶದಲ್ಲಿ ಮುಂದೆ ಸಿಂಹಾಸನಕ್ಕೆ ಬರುವವರಿಗೆ ಕೇವಲ ನಾರ್ಮನ್ ಮನೆತನದ ಸಂಬಂಧವೊಂದೇ ಅಲ್ಲದೆ, ಇಂಗ್ಲಿಷ್ ರಾಜವಂಶದೊಡನೆಯೂ ಅವರಿಗೆ ರಕ್ತಸಂಬಂಧವು ದೊರೆತಂತಾಯಿತು. (೩) ತಮ್ಮ ಅಣ್ಣನೊಡನೆ ಜಗಳವಾಡಿ ಓಡಿಹೋಗಿದ್ದ ಆನ್ಸೆಲ್ಮ (Anslem ನನ್ನು ಇಂಗ್ಲೆಂಡಿಗೆ ಬರಮಾಡಿದುಂದು. ಇದರಿಂದ ಮತಾಧಿಕಾರಿಗಳಿಗೆಲ್ಲಾ ಸಂತೋಷವಾಯಿತು. (೪) ಜನಗಳ ಆನುಕೂಲ್ಯಕ್ಕಾಗಿ ಒಂದು ಸನ್ನದನ್ನು ದಯೆಪಾಲಿಸಿದುದು.

ದೊರೆಯು ಕರುಣಿಸಿದ ಈ ಸನ್ನದಿನಲ್ಲಿ ಆರು ಸಂಗತಿಗಳಿದ್ದುವು. ಇವುಗಳಾವುವೆಂದರೆ :—(೧) ಹೆನ್ರಿಯು ವಿಟಾನ್ ಸಭೆಯವರ ಅನುಮತಿಯಿಂದ ಪಟ್ಟಕ್ಕೆಬಂದು ಆತನ ಕಿರೀಟಧಾರಣೆಯು ನೆರವೇರಿತು. (ಸನ್ನದಿನಲ್ಲಿ ಹೀಗಿದ್ದುದರಿಂದ, ವಿಟಾನ್ ಸಭೆಯವರ ಅನುಮತಿಯನ್ನು ಪಡೆಯದೆ ಯಾರಿಗೂ ಪಟ್ಟಕ್ಕೆ ಬರುವ ಅಧಿಕಾರವಿರದೆಂಬುದು ಗೊತ್ತಾಯಿತು.) (೨) ಮತಾಧಿಕಾರಿಗಳಲ್ಲಿ ಯಾವನಾದರೂ ಮೃತನಾಗಿ ಅವನ ಸ್ಥಾನಕ್ಕೆ ಮತ್ತೊಬ್ಬನು ಬರುವವರೆಗೂ, ಆ ಅಧಿಕಾರಿಗೆ ಬರುವ ಹುಟ್ಟುವಳಿಯನ್ನು ಪ್ರತ್ಯೇಕವಾಗಿ ಇಟ್ಟದ್ದು ಮುಂದೆ ಅಧಿಕಾರವನ್ನು ವಹಿಸುವವನಿಗೆ ಬಿಟ್ಟುಕೊಡಬೇಕೇ ಹೊರತು, ರಾಜನು ಖಂಡಿತವಾಗಿಯೂ ಅದನ್ನು ಉಪಯೋಗಿಸಿಕೊಳ್ಳಕೂಡದು. (೩) ಫ್ಯೂಡಲಿಸಮ್ ಪದ್ಧತಿಗೆ ಸಂಬಂಧಪಟ್ಟವರಲ್ಲಿ ಯಾರಾದರೂ ಒಬ್ಬರು ಮೃತಪಟ್ಟು, ಅವರ ಭೂಮಿಯನ್ನು ಮತ್ತೆಪಡೆದುಕೊಳ್ಳುವವರು ಆಶ್ರಯದಾತರಿಗೆ ಕೊಡಬೇಕಾಗಿದ್ದ ರಿಲಿವಿಯಂ (Relevium) ಎಂಬ ತೆರಿಗೆಯು, ಅದನ್ನು ಕೊಡತಕ್ಕವನ ಸ್ಥಿತಿಗತಿಗಳನ್ನು ನ್ಯಾಯವಾಗಿ ವಿಮರ್ಶೆಮಾಡಿ ನಿಷ್ಕರ್ಷೆಯಾಗಬೇಕು. (ಇದರಿಂದ ಮನಸ್ವಿಯಾಗಿ ರಿಲಿವಿಯಂ ತೆರಿಗೆಗಳನ್ನು ಹಾಕಿ ಜನರನ್ನು ಕಿರುಗುಟ್ಟಿಸುವುದು ಅಸಾಧ್ಯವಾಯಿತು ; ಆ ತೆರಿಗೆಯು ಇಷ್ಟೇ ಇರಬೇಕೆಂಬುದು ನಿರ್ಧರವಾಗಲು ಅವಕಾಶವಾಯಿತು.) (೪) ಅರ್ಲ್ ಮುಂತಾದ ದೊಡ್ಡಮನುಷ್ಯರು ತಮ್ಮ ಆಶ್ರಿತರ ಕಷ್ಟಸುಖಗಳನ್ನು ಸರಿಯಾಗಿ ವಿಚಾರಿಸಿಕೊಳ್ಳಬೇಕು. ಇದರಿಂದ ದೊರೆಯು ತಮಗೆ ಒಳ್ಳೆಯದನ್ನು ಮಾಡಬೇಕೆಂದು

ಅವರು ಹೇಗೆ ಅಪೇಕ್ಷಿಸುತ್ತಿದ್ದರೋ, ಹಾಗೆಯೇ ಅವರೂ ತಮ್ಮ ಆಶ್ರಿತರಿಗೆ ಒಳ್ಳೆಯದನ್ನು ಮಾಡಬೇಕೆಂಬುದು ದೃಢಪಟ್ಟಿತು. ಮೃತಶಾಸನ (Wills) ಗಳಿಂದ ಸ್ವಂತ ಸ್ವತ್ತುಗಳನ್ನು ಇತರರಿಗೆ ಸೇರಿಸಬಹುದು. (ಇದರಿಂದ, ಜನರಿಗೆ ತಮ್ಮ ಕಾಲಾನಂತರ ತಮಗೆ ಬೇಕಾದವರಿಗೆ ತಮ್ಮ ಸ್ವತ್ತುಗಳನ್ನು ಬಿಟ್ಟುಕೊಡುವ ಅಧಿಕಾರವುಂಟಾಯಿತು. (೬) ಎಡ್ವರ್ಡ್ ದೊರೆಯ ಕಾಲ ದಲ್ಲಿದ್ದ ನ್ಯಾಯನಿಬಂಧನೆಗಳನ್ನು ಮತ್ತೆ ಆಚರಣೆಗೆ ತರಬೇಕು. ಇದರಿಂದ ಇಂಗ್ಲೆಂಡ್ ರಾಜ್ಯವನ್ನು ಇಂಗ್ಲಿಷರ ಮನೋಭಾವಗಳಿಗನುಸಾರವಾಗಿ ಆಳಬೇಕೇ ಹೊರತು ನಾರ್ಮನರ ಮನೋಭಾವಗಳಿಗನುಸಾರವಾಗಿ ಪ್ರಭುತ್ವಮಾಡುವುದೆಂದಿಗೂ ಸರಿಯಲ್ಲವೆಂಬುದು ಗೊತ್ತಾಯಿತು.

ಹೆನ್ರಿಯು ಆನ್ಸೆಲ್ಮನನ್ನೇನೋ ಇಂಗ್ಲೆಂಡಿಗೆ ಬರಮಾಡಿದನು; ಆದರೂ ಆತನು ಬಂದೊಡನೆಯೇ ಆತನಿಗೂ ದೊರೆಗೂ ಮನಸ್ತಾಪವು ಬಂತು. ಯೂರೋಪಿನ ಇತರ ಭಾಗಗಳಲ್ಲಿ ಮತಾಧಿಕಾರಿಗಳೆಲ್ಲರೂ ತಾವು ದೊರೆಯ ಕೈಕೆಳಗಿರದೆ ಸ್ವಾತಂತ್ರ್ಯವನ್ನು ಪಡೆದುಕೊಳ್ಳಬೇಕೆಂದು ಹೋರಾಡುತ್ತಿದ್ದರು. ಈ ಸಂಬಂಧದಲ್ಲಿ ಯುದ್ಧಗಳುಕೂಡ ನಡೆದುವು. ಇಂಗ್ಲೆಂಡಿನಲ್ಲಿ ಮತಾಧಿಕಾರಿಗಳಿಗೆ ಫಲವತ್ತಾದ ಭೂಪ್ರದೇಶಗಳು ಮಾನ್ಯವಾಗಿ ದೊರೆತಿದ್ದುದರಿಂದ ಅವರ ಜೀವನವು ಸುಖವಾಗಿ ನಡೆಯುತ್ತಿತ್ತು. ನಾರ್ಮ ನರು ಇಂಗ್ಲೆಂಡಿಗೆ ಬರುವುದಕ್ಕೆ ಮುಂಚೆ, ಬಿಷಪ್ ಮುಂತಾದ ಮತಾಧಿಕಾರಿ ಗಳನ್ನು ವಿಟಾನ್ ಸಭೆಯವರು ಆರಿಸುತ್ತಿದ್ದರು. ವಿಲಿಯಂ ದೊರೆಯು ಇದನ್ನು ತಪ್ಪಿಸಿ, ಆಸ್ಥಾನದವರು ಈ ಅಧಿಕಾರಿಗಳನ್ನು ನಿಯಮಿಸತಕ್ಕ ದೆಂದೂ ಕ್ರಾಸಿಯರ್ (Crozier) ಎಂಬ ಮತಾಧಿಕಾರದಂಡವನ್ನೂ ಉಂಗುರ ವನ್ನೂ ದೊರೆಯು ಅವರಿಗೆ ಕೊಡತಕ್ಕುದೆಂದೂ ಗೊತ್ತುಮಾಡಿದನು. ಇದರಿಂದ ಕೇವಲ ದೊರೆಯ ಅನುಗ್ರಹದಿಂದ ಬಿಷಪ್ ಮುಂತಾದ ಅಧಿಕಾರಗಳು ದೊರೆತಂತಾದುವೇ ಹೊರತು, 'ಕಾನ್‌ಸೆಕ್ರೇಷನ್' (Consecration) ಎಂಬ ಕರ್ಮದ ಪ್ರಭಾವದಿಂದ ಅವುಗಳು ದೊರೆತಂತಾಗಲಿಲ್ಲವೆಂದೂ, ಆದಕಾರಣ ವಿಲಿಯಮನು ವಿಧಿಸಿದ್ದ ಈ ಪದ್ಧತಿಯನ್ನು ತಪ್ಪಿಸಿಬಿಡಬೇಕೆಂದೂ, ಆನ್ಸೆಲ್ಮನು ಮುಷ್ಕರಹಿಡಿದನು. ಹೆನ್ರಿಗೂ ಅವನಿಗೂ ಮನಸ್ತಾಪವು ಬಂತು. ಆದರೆ, ಯೂರೋಪಿನ ಇತರ ದೇಶಗಳಂತೆ ಇಂಗ್ಲೆಂಡಿನಲ್ಲಿಯೂ ಯುದ್ಧ ಗಳಾಗುವುದು ತಪ್ಪಿ, ಅವರಿಬ್ಬರ ಪರಸ್ಪರವಾದ ಒಪ್ಪಿಗೆಯಿಂದ ಈ ಮನಸ್ತಾ ಪವು ಬಿಡುಗಡೆಯಾಯಿತು. ದೊರೆಯು ಉಂಗುರವನ್ನೂ, ಕ್ರಾಸಿಯರ್ ಎಂಬ ದಂಡವನ್ನೂ, ಕೊಡುವ ಪದ್ಧತಿಯನ್ನು ನಿಲ್ಲಿಸುವುದಾಗಿ ಹೆನ್ರಿಯು ಒಪ್ಪಿ ಕೊಂಡನು. ಬಿಷಪ್ ಮುಂತಾದ ಅಧಿಕಾರಗಳಿಗೆ ನಿಯಮಿತರಾದವರು, 'ಕಾನ್‌ಸೆ

ಕ್ರೇಷನ್' ಎಂಬ ಕರ್ಮವನ್ನು ಮಾಡಿಕೊಂಡಲ್ಲದೆ ಕೇವಲ ಚುನಾವಣೆಯೊಂದರಿಂದಲೂ, ಕೃತಜ್ಞತಾಪೂರ್ವಕವಾಗಿ ದೊರೆಯಿಂದ ಮಾನ್ಯದ ಭೂಮಿಯನ್ನು ಪಡೆದುಕೊಂಡುದರಿಂದಲೂ, ಅಧಿಕಾರಕ್ಕೆ ಬರಲಾಗದು ಎಂಬ ಹೆನ್ರಿಯ ಅಭಿಮತಕ್ಕೆ ಆನ್ಸೆಲ್ಮನು ಸಮ್ಮತಿಸಿದನು.

ಹೆನ್ರಿಗೆ ರಾಬರ್ಟ್ (Robert) ಎಂಬೊಬ್ಬ ತಮ್ಮನಿದ್ದನು. ಅವನು ಅಣ್ಣನ ಮೇಲೆ ಕೈಮಾಡಲುದ್ಯುಕ್ತನಾಗಿ ಸೈನ್ಯವನ್ನು ಕಟ್ಟಿಕೊಂಡು ಯುದ್ಧಕ್ಕೆ ಬಂದನು. ಹೆನ್ರಿಯು ಟೆನ್ಚೆಬ್ರ್ಯಾಯ್ (Tenchebrai) ಕದನದಲ್ಲಿ ಅವನನ್ನು ಸೋಲಿಸಿ ಸೆರೆಮನೆಯಲ್ಲಿಟ್ಟು, ನಿರಾತಂಕವಾಗಿ ರಾಜ್ಯಭಾರ ಮಾಡತೊಡಗಿದನು. ತಮ್ಮ ಅಣ್ಣನ ಮೇಲ್ಪಂಕ್ತಿಯನ್ನೇ ಅನುಸರಿಸಿ ಸಾಮಾನ್ಯರ ಸಹಾಯವನ್ನು ಪಡೆದು, ಬ್ಯಾರನರನ್ನು ಮೂಲೆಗೆ ಕುಳ್ಳಿರಿಸಿದನು. ಅಲ್ಲದೆ ತನ್ನ ಕಾಲಾನಂತರ ತನ್ನ ಮಕ್ಕಳಿಗೆ ದೊರೆತನವು ಸಿಕ್ಕುವುದಕ್ಕೆ ಪ್ರಯತ್ನ ಮಾಡಿದನು. ಫ್ರಾನ್ಸ್ ದೇಶದಲ್ಲಿ ದೊರೆಯು ಸಾಯುವಾಗ ತನ್ನ ಹಿರಿಯಮಗನಿಗೆ ಕಿರೀಟಧಾರಣೆಮಾಡಿ ತನ್ನ ಬಳಿಕ ಅವನೇ ದೊರೆಯಾಗುವಂತೆ ಗೊತ್ತು ಮಾಡುವ ಪದ್ಧತಿಯು ಇತ್ತು. ಹೆನ್ರಿಯು ಇಂಗ್ಲೆಂಡಿನಲ್ಲಿಯೂ ಇದೇ ಪದ್ಧತಿಯನ್ನುಂಟುಮಾಡುವುದಕ್ಕಾಗಿ ಬಹಳ ಪ್ರಯಾಸಪಟ್ಟನು.

ಇನ್ನು ಹೆನ್ರಿಯ ರಾಜ್ಯಭಾರಕ್ರಮವನ್ನು ಪರ್ಯಾಲೋಚಿಸೋಣ. ಮೊದಲನೆಯ ವಿಲಿಯಂ ದೊರೆಯು (William the Conqueror) ಬಹಳ ಶ್ರಮಪಟ್ಟು ರಾಜ್ಯದ ಆಡಳಿತಗಳನ್ನು ಕ್ರಮಕ್ಕೆ ತಂದನು. ಅವನ ಮಗನಾದ ಎರಡನೆಯ ವಿಲಿಯಂ ದೊರೆಯೂ ಕೂಡ ದರ್ಪದಿಂದ ರಾಜ್ಯವಾಳಿದನು. ಆದರೂ ಈತನು ಯುದ್ಧಕಾರ್ಯದಲ್ಲಿ ಬಹಳ ಸಮರ್ಥನಾಗಿದ್ದನೇ ಹೊರತು ರಾಜ್ಯತಂತ್ರದಲ್ಲಿ ಅಷ್ಟೇನೂ ಚತುರನಾಗಿರಲಿಲ್ಲ. ಹೆನ್ರಿಯು ಮಾತ್ರ ರಾಜ್ಯದ ಆಡಳಿತಗಳನ್ನು ನಡೆಯಿಸುವುದರಲ್ಲಿ ಬಹಳ ಮೇಧಾವಿಯಾಗಿದ್ದನು. ನಾರ್ಮನ್ ರಾಜ್ಯಭಾರಕ್ಕೆ ಪರಿಪೂರ್ಣತೆಯುಂಟಾದುದು ಈತನ ಕಾಲದಲ್ಲೇ. ಈತನಿಗೆ ದೇಶದಲ್ಲಿ ಪೂರ್ಣಾಧಿಕಾರವಿತ್ತು. ಈತನಿಗಿದ್ದ ಸ್ವಾತಂತ್ರ್ಯದಲ್ಲಿ ಹತ್ತರಲ್ಲೊಂದುಪಾಲು ಸ್ವಾತಂತ್ರ್ಯವು ಕೂಡ, ಎಡ್ವರ್ಡ್ ದೊರೆಗೆ (Edward the Confessor) ಇರಲಿಲ್ಲವೆಂದು ಧಾರಾಳವಾಗಿ ಹೇಳಬಹುದು. ಹೀಗಾದುದಕ್ಕೆ, ಮೊದಲನೆಯ ವಿಲಿಯಂ ದೊರೆಯು, ಮುಖ್ಯವಾಗಿದ್ದ ಕೆಲವು ಅರ್ಲ್ಡಮ್ಮುಗಳನ್ನು ತೆಗೆದುಹಾಕಿ, ಉಳಿದ ಅರ್ಲ್ ಮುಂತಾದ ದೊಡ್ಡಮನುಷ್ಯರನ್ನು ದುರ್ಬಲರನ್ನಾಗಿ ಮಾಡಿ ಫ್ಯೂಡಲಿಸಮ್ ಪದ್ಧತಿಯನ್ನು ಅನೇಕ ವಿಧದಲ್ಲಿ ಮಾರ್ಪಡಿಸಿದುದೇ ಮುಖ್ಯಕಾರಣವೆಂದೂ, ಆದರೂ ಕೂಡ ಹೆನ್ರಿಯ ಸ್ವಾತಂ

ತ್ರ್ಯಕ್ಕೆ ಅವನ ಕಾರ್ಯದಕ್ಷತೆಯೂ ಸಹಕಾರಿಯಾಯಿತೆಂದೂ, ಹೇಳಬಹುದಾಗಿರುತ್ತದೆ. ಇದು ಹೇಗಾದರೂ ಇರಲಿ. ಸಿದ್ಧಾಂತದಲ್ಲೇನೋ ದೊರೆಯ ಪದವಿಯು ಮುಂಚಿನಂತೆಯೇ ಇತ್ತು. ಆದರೂ ವಸ್ತುತಃ ಅನುಭವದಲ್ಲಿ ನೋಡಿದರೆ ದೊರೆಗೆ ಅಸಾಧಾರಣವಾದ ಹಕ್ಕುಗಳು ಬಂದಿದ್ದುವು. ರಾಜ್ಯದಲ್ಲಿದ್ದವರಿಗೆಲ್ಲಾ ದೊರೆಯೇ ಮುಖ್ಯವಾದ ಆಶ್ರಯದಾತನಾಗಿದ್ದನು. ಹೆನ್ರಿಯನ್ನು ಜನರೇ ತಮ್ಮ ದೊರೆಯಾಗಿ ಆರಿಸಿಕೊಂಡಿದ್ದರು. ಅವನು ಮೊಡ್ ರಾಜಪುತ್ರಿಯನ್ನು ಮದುವೆಯಾದುದರಿಂದ ಅವನ ಸ್ಥಾನವು ಮತ್ತಷ್ಟು ದೃಢವಾಯಿತು ; ಅಲ್ಲದೆ ಅವನ ಮಕ್ಕಳು ಮೊಮ್ಮಕ್ಕಳಿಗೆ ಇಂಗ್ಲಿಷ್‌ಜನರ ರಕ್ತಸಂಬಂಧವು ದೊರೆತಂತಾಯಿತು. ಫ್ಯೂಡಲಿಸಮ್ ಪದ್ಧತಿಗೆ ಸೇರಿದವರೆಲ್ಲರೂ ಯುದ್ಧಕಾಲದಲ್ಲಿ ಅವನಿಗೆ ಬೆಂಬಲವಾಗಿ ನಿಲ್ಲುವಂತಾಗಿದ್ದುದರಿಂದಲೂ, ದುರ್ಗಗಳೆಲ್ಲಾ ಅವನ ವಶದಲ್ಲಿಯೇ ಇದ್ದುದರಿಂದಲೂ, ಬ್ಯಾರನರೆಲ್ಲರೂ ಇತರವಿಧಗಳಲ್ಲಿಯೂ ದುರ್ಬಲರಾಗುವಂತೆ ಏರ್ಪಡಿಸಿದ್ದುದರಿಂದಲೂ, ಅವರಲ್ಲಿ ಯಾರೂ ಸೈನ್ಯಸಮೇತರಾಗಿ ಬಂದು ದೊರೆಯಮೇಲೆ ಕೈಮಾಡುವಂತಿರಲಿಲ್ಲ. ಅತ್ತ ವಿಟಾನ್ ಸಭೆಯೂ ಹೀಗೆಯೇ ದುರ್ಬಲವಾಗಿತ್ತು. ಸಭೆಯೇನೋ ಅನೇಕವೇಳೆ ಕೂಡುತ್ತಿತ್ತು. ಆದರೂ, ದೊರೆಯನ್ನು ಸಭೆಯ ವಶವರ್ತಿಯಾಗುವಂತೆ ಮಾಡುವುದು ಮಾತ್ರ ಅಸಾಧ್ಯವಾಗಿತ್ತು. ಸಭೆಯು ದೊರೆಯಿಂದ ಅನೇಕ ವಾಗ್ದಾನಗಳನ್ನೇನೋ ಪಡೆದುಕೊಳ್ಳುತ್ತಿತ್ತು; ಆದರೆ, ದೊರೆಯು ಆ ವಾಗ್ದಾನಗಳನ್ನು ನೆರವೇರಿಸುವಂತೆ ಮಾಡುವುದೇನೋ ಸಭೆಯ ಕೈಯಲ್ಲಿ ಸಾಗುತ್ತಿರಲಿಲ್ಲ. ಎಲ್ಲಾ ಅಧಿಕಾರಗಳೂ ರಾಜನ ಕೈಯಲ್ಲಿಯೇ ಇದ್ದುವು. ಹೆನ್ರಿಯು ಯಾರಿಗೂ ವಶವರ್ತಿಯಾಗಿರದೆ ಸ್ವತಂತ್ರನಾಗಿದ್ದನು. ಆದರೂ ಅವನು ತೀರ ನಿರಂಕುಶ ಪ್ರವರ್ತಕನಾಗುವುದಕ್ಕೆ ಅವಕಾಶವಿರಲಿಲ್ಲ. ಏಕೆಂದರೆ ಬಂದುವೇಳೆ, ಅವನುಹಾಗೆ ಮಾಡುವಪಕ್ಷಕ್ಕೆ, ಮುಂದೆ ವಿಟಾನ್ ಸಭೆಯವರು ಅವನ ಮಕ್ಕಳಿಗೆ ದೊರೆತನವನ್ನು ಕೊಡದೆಹೋಗಬಹುದಾಗಿತ್ತು.

ನಾರ್ಮನ್ ಜನರು ಇಂಗ್ಲೆಂಡಿಗೆ ಬರುವುದಕ್ಕೆ ಮುಂಚೆ ಸ್ಥಳೀಯ ಆಧಿಪತ್ಯಕ್ಕೆ (Local Government) ಪ್ರಾಮುಖ್ಯತೆಯು ಇತ್ತು. ಆದರೆ, ನಾರ್ಮನರ ಕಾಲದಲ್ಲಿ ರಾಜ್ಯದ ಆಡಳಿತಗಳೆಲ್ಲಾ ದೊರೆಯ ಕೈಯಲ್ಲಿಯೇ ಇರಬೇಕೆಂಬ ವಿಷಯಕ್ಕೆ ಪ್ರಾಮುಖ್ಯತೆಯು ಬಂತು. ಪರಂತು, ರಾಜನೇ ಎಲ್ಲಾ ಕೆಲಸಗಳನ್ನೂ ಮಾಡಲಾಗುತ್ತಿರಲಿಲ್ಲವಾದುದರಿಂದ (ನಾರ್ಮನರ ಕಾಲಕ್ಕೆ ಮುಂಚೆ ಇಲ್ಲದೇಇದ್ದ) ಕೆಲವು ಅಧಿಕಾರಿಗಳನ್ನು ನಿಯಮಿಸಲಾಯಿತು. ಅವರು ದೊರೆಯ ಬಳಿಯಲ್ಲಿಯೇ ಇದ್ದುಕೊಂಡು ರಾಜ್ಯದ ಇತರ ಅಧಿಕಾರಿಗಳ ಮೇಲ್ವಿಚಾರಣೆಯನ್ನು ತೆಗೆದುಕೊಳ್ಳುತ್ತಾ ಆಡಳಿತಗಳನ್ನು ನಡೆ

ಯಿಸುತ್ತಿದ್ದರು. ಈ ಅಧಿಕಾರಗಳಲ್ಲೆಲ್ಲಾ 'ದಿ ಹೈ ಸ್ಟ್ಯೂಯರ್ಡ್' (The High Steward), ಕಾನ್‌ಸ್ಟೆಬಲ್ ಅಥವಾ ಮಾರ್ಷಲ್ (Constable or Marshal), ಛೇಂಬರ್ಲೇನ್ (Chamberlain) ಮತ್ತು ಕಪ್ ಬೇರರ್ (Cup Bearer) ಎಂಬ ನಾಲ್ಕು ಅಧಿಕಾರಗಳು ಬಹಳ ಮುಖ್ಯವಾಗಿದ್ದುವು. ಇವುಗಳಿಗೆ ಬಹಳ ದೊಡ್ಡ ವಂಶದವರೇ ನಿಯಮಿತರಾಗುತ್ತಿದ್ದರು. ಆದರೆ ಹೀಗೆ ಅಧಿಕಾರಕ್ಕೆ ಬಂದ ದೊಡ್ಡ ಮನುಷ್ಯರು ತಮ್ಮ ಅಧಿಕಾರಗಳು ವಂಶ ಪಾರಂಪರ್ಯವಾಗಿ ನಡೆದು ಬರುವಂತೆ ಮಾಡಿಕೊಳ್ಳಲು ಯತ್ನಿಸುತ್ತಿದ್ದರು. ಈ ಅಧಿಕಾರಗಳು ವಂಶಪಾರಂಪರ್ಯವಾದೊಡನೆಯೇ ದೊರೆಯು ಇವರು ಮಾಡುತ್ತಿದ್ದ ಕೆಲಸಗಳನ್ನು ಬೇರೇ ಅಧಿಕಾರಿಗಳಿಗೆ ವಹಿಸಿ, ಮೇಲೆ ಹೇಳಿದ ಅಧಿಕಾರಿಗಳು ಹೆಸರಿಗೆ ಮಾತ್ರ ಇರುವಂತೆ ಮಾಡಲಾರಂಭಿಸಿದನು. ಹೀಗೆ ಹೊಸದಾಗಿ ನಿಯಮಿತರಾಗಿದ್ದ ಅಧಿಕಾರಿಗಳಲ್ಲೆಲ್ಲಾ ಜಸ್ಟಿಸಿಯರ್ (The Justiciar) ಛಾನ್ಸೆಲರ್ (The Chancellor), ಮತ್ತು ಟ್ರೆಷರರ್ (The Treasurer) ಎಂಬ ಮೂವರು ಅಧಿಕಾರಿಗಳು ಪ್ರಮುಖರಾಗಿದ್ದರು. ನಾರ್ಮನರ ಕಾಲದಲ್ಲಿದ್ದ ಈ ಮೂರು ಅಧಿಕಾರಗಳೇ, ಮುಂದೆ 'ಲಾರ್ಡ್ ಚೀಫ್ ಜಸ್ಟಿಸ್' (Lord Chief Justice), 'ಲಾರ್ಡ್ ಛಾನ್ಸೆಲರ್' (Lord Chancellor) ಮತ್ತು 'ಫಸ್ಟ್ ಲಾರ್ಡ್ ಆಫ್ ಟ್ರೆಷರಿ' (The First Lord of Treasury) ಎಂಬವರ ಅಧಿಕಾರಗಳಾಗಿ ಪರಿಣಮಿಸಿದುವು.

ನಾರ್ಮನರ ಕಾಲದಲ್ಲಿ ಜಸ್ಟಿಸಿಯರ್ ಅಧಿಕಾರವೇ ಮುಖ್ಯವಾದುದಾಗಿತ್ತು. ನಾರ್ಮನ್ ದೊರೆಗಳು ಆಗಾಗ ಇಂಗ್ಲೆಂಡ್ ದೇಶವನ್ನು ಬಿಟ್ಟುಹೋಗಿ ಯೂರೋಪಿನ ಇತರ ಭಾಗಗಳಲ್ಲಿಯೂ ನಾರ್ಮಂಡಿಯಲ್ಲಿಯೂ ಇರಬೇಕಾದ ಸಂದರ್ಭಗಳು ಬೀಳುತ್ತಿದ್ದುವು. ಇಂತಹ ವೇಳೆಯಲ್ಲಿ ಅವರು ನಡೆಯಿಸಬೇಕಾಗಿದ್ದ ಆಡಳಿತಗಳನ್ನು ನೆರವೇರಿಸುವುದಕ್ಕಾಗಿ ಜಸ್ಟಿಸಿಯರ್ ಎಂಬ ಅಧಿಕಾರಿಯನ್ನು ನಿಯಮಿಸಬೇಕಾಯಿತು. ನಾರ್ಮನ್ ಜನರು ಇಂಗ್ಲೆಂಡಿಗೆ ಬರುವುದಕ್ಕಿಂತ ಮುಂಚೆಯೂ ಈ ಅಧಿಕಾರವು ಇತ್ತು; ಆದರೆ ಅದಕ್ಕೆ ಜಸ್ಟಿಸಿಯರ್ ಎಂಬ ಹೆಸರಿರಲಿಲ್ಲ. ಆದರೂ, ವಸ್ತುತಃ ಅಧಿಕಾರವೇನೋ ಇತ್ತು. ಕೆನ್ಯೂಟ್ ದೊರೆಯು ಡೆನ್ಮಾರ್ಕಿಗೆ ಹೋದಾಗ ಈ ಅಧಿಕಾರದಲ್ಲಿದ್ದ ಗಾಡ್‌ವಿನ್ ಎಂಬಾತನಿಗೆ ರಾಜ್ಯದ ಆಡಳಿತಗಳನ್ನು ವಹಿಸಿದ್ದನು. ಆದರೂ ಆಗಿನ ಕಾಲದಲ್ಲಿ ಆ ಅಧಿಕಾರವು ತಾತ್ಕಾಲಿಕವಾಗಿತ್ತು. ವಿಲಿಯಂ ದೊರೆಯು ಮಾತ್ರ, ತಾನು ನಾರ್ಮಂಡಿಗೆ ಹೋಗಬೇಕಾದಾಗ, ಒಬ್ಬನ ಮೇಲೆಯೇ ರಾಜ್ಯಭಾರವನ್ನು ವಹಿಸಿ ಹೊರಟುಹೋಗುವುದು ಅನುಚಿತವೆಂದು ಭಾವಿಸಿ,

ಒಬ್ಬನನ್ನೇ ಜಸ್ಟಿಸಿಯರ್ ಪದವಿಗೆ ನೇಮಿಸುವುದಕ್ಕೆ ಬದುಲಾಗಿ ಓಡೋ ಎಂಬಾತನಿಗೂ, ವಿಲಿಯಂ ಫಿಟ್ಸ್ ಆಸ್ಬರ್ನ್ (William Fitz Osbern) ಎಂಬಾತನಿಗೂ, ಚೀಫ್ ಜಸ್ಟಿಸಸ್ (Chief Justices) ಎಂಬ ಬಿರುದನ್ನು ಕೊಟ್ಟು ರಾಜ್ಯಭಾರವನ್ನು ಅವರಿಬ್ಬರಿಗೂ ವಹಿಸಿದನು. ವಿಲಿಯಂ ದೊರೆಯು ತನ್ನ ಸ್ಥಾನವು ಇನ್ನೂ ದೃಢವಾಗಿಲ್ಲವೆಂದು ಭಾವಿಸಿ, ತಾನು ಇಲ್ಲದ ವೇಳೆಯಲ್ಲಿ ಒಬ್ಬನೇ ರಾಜ್ಯದ ಆಡಳಿತಗಳನ್ನು ನಡೆಯಿಸತಕ್ಕುದೆಂದು ಗೊತ್ತುಮಾಡಿದರೆ ತನಗೆಲ್ಲಿ ಸ್ಥಾನಭ್ರಷ್ಟತ್ವವು ಬರುವುದೋ ಎಂದು ಬಗೆದು, ಇಬ್ಬರು ಆಡಳಿತಗಳನ್ನು ನಡೆಯಿಸುವುದಾದರೆ ಹೀಗಾಗಲು ಅವಕಾಶವಿರದೆಂದು ನಿರ್ಧರಿಸಿದುದೇ ಅದಕ್ಕೆ ಕಾರಣ.

ಆದರೆ ಎರಡನೆಯ ವಿಲಿಯಂ ದೊರೆಯ ಕಾಲದಲ್ಲಿ ಮಾತ್ರ ಜಸ್ಟಿಸಿಯರ್ ಅಧಿಕಾರವು ಖಾಯಂ ಆಗಿ ಇರತಕ್ಕುದೆಂದು ಗೊತ್ತಾಯಿತು. ಅಲ್ಲದೆ ಈ ಅಧಿಕಾರಕ್ಕೆ ಒಬ್ಬನನ್ನೇ ನಿಯಮಿಸುವಂತಾಯಿತು. ಇದನ್ನು ವಹಿಸಿದಾತನಿಗೆ ಚೀಫ್ ಜಸ್ಟಿಸ್ ಎಂಬ ಹೆಸರು ಬಂತು. ಎರಡನೆಯ ವಿಲಿಯಂ ದೊರೆಯು ತನ್ನ ಸ್ಥಾನವು ಬಲುಮೆಯುಳ್ಳುದೆಂದೂ, ಚೀಫ್ ಜಸ್ಟಿಸ್ ಪದವಿಗೆ ಒಬ್ಬನನ್ನೇ ನಿಯಮಿಸಿ, ತಾನು ದೇಶದಲ್ಲಿಲ್ಲದ ವೇಳೆಯಲ್ಲಿ ಆತನಿಗೆ ರಾಜ್ಯದ ಆಡಳಿತಗಳನ್ನು ವಹಿಸುವುದರಿಂದ ಯಾವ ಕುಂದುಕವೂ ಬರಲಾರದೆಂದೂ ಭಾವಿಸಿದ್ದನು. ದೊರೆಯು ದೇಶದಲ್ಲಿದ್ದಾಗ ಈ ಅಧಿಕಾರಿಯು ಆಧಿಪತ್ಯಮಾಡುವುದರಲ್ಲಿ ಆತನಿಗೆ ಸಹಾಯಮಾಡಬೇಕಾಗಿತ್ತು. ಈ ದೊಡ್ಡ ಅಧಿಕಾರವನ್ನು ವಹಿಸಲು ತಕ್ಕ ಸಾಮರ್ಥ್ಯವುಳ್ಳವರಿಗೆ ಮಾತ್ರವೇ ಅದು ದೊರೆಯುತ್ತಿತ್ತೇ ಹೊರತು, ಕೇವಲ ದೊಡ್ಡವಂಶದಲ್ಲಿ ಹುಟ್ಟಿದುದರಿಂದ ಈ ಪದವಿಗೆ ಬರಲಾಗುತ್ತಿರಲಿಲ್ಲ. ಅಲ್ಲದೆ ಅರ್ಹತೆಯನ್ನು ಪಡೆದಿದ್ದ ಸಾಮಾನ್ಯ ಜನರನ್ನು ಈ ಕೆಲಸಕ್ಕೆ ತಂದರೆ, ಅವರು ದೊರೆಯನ್ನು ಗೌರವಿಸಿ ಸೇವಿಸುವಂತೆ, ದೊಡ್ಡವಂಶದವರೆಂದಿಗೂ ಸೇವಿಸುತ್ತಿರಲಿಲ್ಲ. ಈ ಅಂಶವನ್ನು ವಿಲಿಯಂ ದೊರೆಯೂ, ಅವನ ತಮ್ಮನಾದ ಹೆನ್ರಿಯೂ ಚೆನ್ನಾಗಿ ಅರಿತಿದ್ದರು.

ಈ ಚೀಫ್ ಜಸ್ಟಿಸ್ ಅಧಿಕಾರಕ್ಕಿಂತಲೂ ಸ್ವಲ್ಪ ಕಡಿಮೆಯಾಗಿದ್ದುದು ಛಾನ್ಸೆಲರಿನ ಅಧಿಕಾರವು. ರಾಜಮುದ್ರೆಯನ್ನಿಟ್ಟುಕೊಂಡಿರುವುದು ಈತನ ಕೆಲಸ. ರಾಜಮುದ್ರೆಯು ಎಡ್ವರ್ಡ್ (Edward the Confessor) ದೊರೆಯ ಕಾಲದಲ್ಲಿ ಮಾತ್ರವೇ ಹುಟ್ಟಿತಾದುದರಿಂದ, ಈ ಮುದ್ರೆಯನ್ನಿಟ್ಟುಕೊಂಡಿರಲು ಛಾನ್ಸೆಲರ್ ಎಂಬ ಅಧಿಕಾರಿಯು ನಿಯಮಿತನಾದುದೂ ಆತನ ಕಾಲದಲ್ಲಿಯೇ. ಈ ಅಧಿಕಾರಿಯು ದೊರೆಯ ಕಾರ್ಯದರ್ಶಿಗಳಲ್ಲಿ ಮೊದಲನೆಯವನಾಗಿದ್ದನು.

ಅವಶ್ಯಬಿದ್ದಾಗ ಬರೆವಣಿಗೆಯ ಕೆಲಸವನ್ನೂ ಮಾಡುತ್ತಾ, ಸನ್ನದುಗಳಿಗೂ ಇತರ ಮುಖ್ಯವಾದ ಕಾಗದಪತ್ರಗಳಿಗೂ ರಾಜಮುದ್ರೆಯನ್ನೊತ್ತುವುದು ಈತನ ಕೆಲಸವಾಗಿತ್ತು. ದೊರೆಯ ಹಕ್ಕುಗಳು ಹೆಚ್ಚಿದಹಾಗೆಲ್ಲಾ ಈ ಅಧಿಕಾರಿಯ ಕಾರ್ಯಗೌರವವೂ ಹೆಚ್ಚುತ್ತಾ ಬಂತು. ಆದರೆ, ನಾರ್ಮನರ ಕಾಲದಲ್ಲಿ ಮಾತ್ರ ಈ ಅಧಿಕಾರವು ಚೀಫ್ ಜಸ್ಟಿಸ್ ಅಧಿಕಾರಕ್ಕಿಂತಲೂ ಕಡಿಮೆಯಾಗಿಯೇ ಇತ್ತು. ಛಾನ್ಸೆಲರ್ ಕೆಲಸಕ್ಕೆ ಸಾಮಾನ್ಯವಾಗಿ ಮತಾಧಿಕಾರಿಗಳನ್ನೇ ನಿಯಮಿಸುತ್ತಿದ್ದರು; ಅನೇಕವೇಳೆ ಬಿಷಪ್ ಎಂಬ ಮತಾಧಿಕಾರಿಗೇ ಈ ಕೆಲಸವನ್ನು ಕೊಡುತ್ತಿದ್ದರು.

ಛಾನ್ಸೆಲರ್ ಅಧಿಕಾರಕ್ಕಿಂತ ಸ್ವಲ್ಪ ಕಡಿಮೆಯಾಗಿದ್ದುದು ಟ್ರೆಷರರಿನ (ಖಜಾಂಚಿಯ) ಅಧಿಕಾರ. ರಾಜಾದಾಯವನ್ನು ನೋಡಿಕೊಳ್ಳುವುದು ಈ ಅಧಿಕಾರವನ್ನು ವಹಿಸಿದವನ ಕೆಲಸ. ದೊರೆಯ ಬಂಡಾರವಿದ್ದುದು ವಿಂಚೆಸ್ಟರ್‌ಪಟ್ಟಣದಲ್ಲಿ: ಆದಕಾರಣ, ಈ ಅಧಿಕಾರಿಯು ಅಲ್ಲಿಯೇ ವಾಸಮಾಡುತ್ತಿದ್ದನು. ರಾಜನಿಗೆ ಬರತಕ್ಕ ಹಣವನ್ನೆಲ್ಲಾ ತೆಗೆದುಕೊಂಡು, ಹಣದ ಲೆಕ್ಕವನ್ನು ಸರಿಯಾಗಿ ನೋಡಿಕೊಳ್ಳುವುದು ಈತನ ಕೆಲಸವಾಗಿತ್ತು.

ಈ ಮೂವರು ಅಧಿಕಾರಿಗಳೂ ಅರ್ಲ್ ಮುಂತಾದ ದೊಡ್ಡಮನುಷ್ಯರ ದ್ವೇಷಕ್ಕೆ ಪಾತ್ರರಾಗಿದ್ದರು. ತಮ್ಮಲ್ಲಿ ಯಾರಿಗೂ ಈ ಅಧಿಕಾರಗಳು ದೊರೆಯದೆ, ಇವುಗಳು ಸಾಮಾನ್ಯರ ಪಾಲಾದುವಲ್ಲಾ ಎಂಬ ಅಸೂಯೆಯೇ ಇದಕ್ಕೆ ಕಾರಣ. ಹೀಗೆ, ದೊಡ್ಡವರ ದ್ವೇಷಕ್ಕೆ ಪಾತ್ರರಾಗಿದ್ದ ಈ ಅಧಿಕಾರಿಗಳನ್ನು ಕಾಪಾಡುವುದು ದೊರೆಯ ಕೆಲಸವಾಗಿತ್ತು. ಈ ಅಧಿಕಾರಿಗಳ ಮೇಲೆ ದೊಡ್ಡಮನುಷ್ಯರಿಗಿದ್ದ ದ್ವೇಷವು ಬಹಳ ಹೆಚ್ಚಿದಾಗ, ಅವರ ಮನಸ್ಸಿಗೆ ಸಮಾಧಾನವನ್ನುಂಟುಮಾಡುವುದಕ್ಕಾಗಿ ದೊರೆಯೇ ಈ ಅಧಿಕಾರಿಗಳಿಗೆ ಕೆಡುಕು ಮಾಡುತ್ತಿದ್ದನು. ರ್‍ಯಾನಲ್ಫ್ ಫ್ಲ್ಯಾಂಬರ್ಡ್ (Ranulf Flambard) ಎಂಬಾತನಿಗೆ ಕಾರಾಗೃಹವಾಸವು ಪ್ರಾಪ್ತವಾದುದೇ ಇದಕ್ಕೆ ನಿದರ್ಶನವಾಗಿರುತ್ತದೆ.

ಆಸ್ಥಾನದ ಅಧಿಕಾರಿಗಳೆಲ್ಲಾ ದೊರೆಯ ಅಧ್ಯಕ್ಷತೆಯಲ್ಲಿಯೋ, ಇಲ್ಲವೆ ಆತನು ಇಲ್ಲದಿರುವಾಗ ಜಸ್ಟಿಸಿಯರ್ ಎಂಬ ಅಧಿಕಾರಿಯ ಅಧ್ಯಕ್ಷತೆಯಲ್ಲಿಯೋ, ಸಭೆಸೇರಿ ರಾಜಕಾರ್ಯಗಳನ್ನೆಲ್ಲಾ ನೆರವೇರಿಸುತ್ತಿದ್ದರು. ವಿಟಾನ್ ಸಭೆಯು ನೆರೆದಾಗ ಈ ಅಧಿಕಾರಿಗಳೂ ಸಭ್ಯರೊಡನೆ ಸೇರುತ್ತಿದ್ದರು. ಈ ಅಧಿಕಾರಿಗಳು ರಾಜಾದಾಯದ (Revenue) ವಿಚಾರವಾಗಿ ಹುಟ್ಟಿದ ವಿವಾದಗಳನ್ನು ತೀರ್ಮಾನಿಸುವುದಕ್ಕೆ ಕುಳಿತಾಗ, ಇವರ ಸಭೆಗೆ ಕೋರ್ಟ್ ಆಫ್ ಎಕ್ಸ್‌ಚೆಕರ್

(Court of Exchequer) ಎಂದು ಹೆಸರು ಬರುತ್ತಿತ್ತು; ಈ ಸಭೆಯಲ್ಲಿ ಜಸ್ಟಿಸಿಯರ್, ಛಾನ್ಸೆಲರ್, ಟ್ರೆಷರರ್, ಕಾನ್‌ಸ್ಟೇಬಲ್, ಛೇಂಬರ್‌ಲೇನ್, ಸ್ಟೂವರ್ಡ್, ಎಂಬ ಅಧಿಕಾರಿಗಳೂ, ದೊರೆಯು ನಿಯಮಿಸಿದ ಇನ್ನು ಕೆಲವು ಮಂದಿಗಳೂ ಇರುತ್ತಿದ್ದರು. ಇವರೆಲ್ಲರಿಗೂ "ಬ್ಯಾರನ್ಸ್ ಆಫ್ ದಿ ಎಕ್ಸ್‌ಚೆಕರ್" (Barons of the Exchequer) ಎಂಬ ಬಿರುದನ್ನು ಕೊಟ್ಟಿದ್ದರು. ಈ ಬಿರುದು ಈಗಲೂ ನಡೆದು ಬರುತ್ತಿದೆ. ರಾಜಾದಾಯದ ವಿಷಯಗಳು ಮಾತ್ರವೇ ಅಲ್ಲದೆ ಇತರ ವಿಚಾರಗಳೂ ಕೂಡ ಆಸ್ಥಾನದಲ್ಲಿ ತೀರ್ಮಾನವಾಗುತ್ತಿದ್ದುವು. ಅವುಗಳಾವುವೆಂದರೆ:—(೧) ಷೈರ್‌ಮೂಟ್ ನ್ಯಾಯಸ್ಥಾನದ ತೀರ್ಪುಗಳ ಮೇಲೆ ಅಪೀಲ್ (Appeal) ಮಾಡಲು ಇದೇ ಕೊನೆಯ ಸ್ಥಾನವಾಗಿತ್ತು. ಇಲ್ಲಿ ಅವುಗಳ ವಿಚಾರಣೆಯಾಗುತ್ತಿತ್ತು. (೨) ದೊರೆಯಿಂದಲೇ ಭೂಪ್ರದೇಶಗಳನ್ನು ಪಡೆದುಕೊಂಡಿದ್ದ ಮುಖ್ಯರಾದವರಿಗೆ (Tenants-in-Chief) ಪರಸ್ಪರವಾಗಿ ಹುಟ್ಟುತ್ತಿದ್ದ ವಿವಾದಗಳು ಇಲ್ಲಿಯೇ ತೀರ್ಮಾನವಾಗುತ್ತಿದ್ದುವು. (೩) ಕೆಳಗಿನ ನ್ಯಾಯಸ್ಥಾನಗಳಿಂದ ಅಲ್ಲಿ ನಡೆಯುತ್ತಿದ್ದ ಮೊಕದ್ದಮೆಗಳನ್ನು ಅವಶ್ಯಬಿದ್ದಾಗ ತಮ್ಮಲ್ಲಿಗೆ ಬರಮಾಡಿಕೊಂಡು ತಾವೇ ಅವುಗಳನ್ನು ತೀರ್ಮಾನಿಸುವುದಕ್ಕೂ ಈ ಸಭೆಯವರಿಗೆ ಅಧಿಕಾರವಿತ್ತು. (೪) ಈ ಸಭೆಯವರು ಕೆಲವು ವೇಳೆ ಕ್ರಿಮಿನಲ್ ಮೊಕದ್ದಮೆಗಳನ್ನೂ ವಿಚಾರಣೆ ಮಾಡುತ್ತಿದ್ದರು. (೫) ಹೆನ್ರಿಯು ಷೈರ್‌ಮೂಟ್ ನ್ಯಾಯಸ್ಥಾನಕ್ಕೆ ಕೂಡ ಆಸ್ಥಾನದಿಂದ ಕೆಲವರನ್ನು ಕಳುಹಿಸುತ್ತಿದ್ದನು. ಆಸ್ಥಾನದ ವಿಷಯದಲ್ಲಿ ಒಟ್ಟಿನಲ್ಲಿ ಹೇಳಬಹುದೇನೆಂದರೆ:— ಈಗಿನ ಹೈಕೋರ್ಟ್ ಆಫ್ ಜಸ್ಟಿಸ್ (High Court of Justice) ಎಂಬ ಉಚ್ಚನ್ಯಾಯಸ್ಥಾನದಲ್ಲಿ ನಡೆಯುವ ಕೆಲಸಗಳನ್ನೆಲ್ಲಾ ಆಸ್ಥಾನದವರು ನೆರವೇರಿಸುತ್ತಿದ್ದರು.

ದೊರೆಯೂ, ಆತನ ಆಸ್ಥಾನದವರೂ ದೇಶದಲ್ಲೆಲ್ಲಾ ಸ್ಥಳದಿಂದ ಸ್ಥಳಕ್ಕೆ ಸುತ್ತುತ್ತಾ ದೇಶದಲ್ಲಿ ನಡೆಯುತ್ತಿದ್ದ ಸಂಗತಿಗಳನ್ನೆಲ್ಲಾ ಪರಿಶೀಲಿಸಿ ಪ್ರಜೆಗಳ ಮನೆಯ ಬಾಗಿಲಿಗೆ ಹೋಗಿ ನ್ಯಾಯವಿಮರ್ಶೆಮಾಡಿ ಅವರಿಗೆ ಅನುಕೂಲವನ್ನು ಉಂಟುಮಾಡಿಕೊಡುತ್ತಿದ್ದರು.

ಆಸ್ಥಾನದವರಿಗೆ ದೊರೆಯು ತಮ್ಮ ಇಷ್ಟಕ್ಕೆ ಅನುಸಾರವಾಗಿ ನಡೆಯುವಂತೆ ಮಾಡುವಷ್ಟು ಸಾಮರ್ಥ್ಯವಿರಲಿಲ್ಲ. ಅರ್ಲ್‌ಗಳು ಬಹಳ ಸ್ವಲ್ಪಮಂದಿಗಳು ಮಾತ್ರವೇಯಿದ್ದರು. ಆದುದರಿಂದ ಅವರ ಕೈಯಲ್ಲಿ ಏನೂ ಸಾಗುವಂತಿರಲಿಲ್ಲ. ಆದರೂ, ಮುಂದೆ ಅವರ ಹೇಳಿಕೆಗನುಸಾರವಾಗಿಯೇ ದೊರೆಯು ನಡೆದುಕೊಳ್ಳುವ ಕಾಲವೂ ಬರುವುದಾಗಿತ್ತು. ಸದ್ಯಕ್ಕೆ ಬ್ಯಾರನ್ ಮುಂತಾ

ದವರಿಗೆ ಹೆಚ್ಚು ಸಾಮರ್ಥ್ಯವಿರಲಿಲ್ಲ. ಅವರು ಸರಿಯಾಗಿ ಆಸ್ಥಾನಕ್ಕೆ ಹೋಗುತ್ತಲೂ ಇರಲಿಲ್ಲ; ಅವರು ಹಾಗೆ ಮಾಡಬೇಕೆಂದು ದೊರೆಯು ಕೋರುತ್ತಲೂ ಇರಲಿಲ್ಲ. ಆದರೂ, ದೊರೆಯು ತನ್ನ ಕೆಲಸಗಳಲ್ಲೆಲ್ಲಾ ಹೆಸರಿಗೆಮಾತ್ರ ಅವರ ಒಪ್ಪಿಗೆಯನ್ನು ಪಡೆದುಕೊಳ್ಳುತ್ತಾ ಅವರಿಗೆ ಪ್ರಾಮು ಖ್ಯತೆಯು ಇರುವಂತೆ ತೋರ್ಪಡಿಸುತ್ತಿದ್ದನು. ವಿಟಾನ್ ಸಭೆಯವರಿಗೆ ದೊರೆ ಯನ್ನು ಆರಿಸುವ ಅಧಿಕಾರವೇನೋ ಇತ್ತು. ಆದರೆ ತೆರಿಗೆಗಳನ್ನು ವಿಧಿಸು ವುದು, ನ್ಯಾಯನಿಬಂಧನೆಗಳನ್ನು ವಿಧಿಸುವುದು, ಮುಂತಾದ ಇತರ ವಿಚಾರ ಗಳಲ್ಲಿ ದೊರೆಯು ತನ್ನ ಇಷ್ಟಬಂಧಂತೆ ವರ್ತಿಸುತ್ತಾ, ಹೆಸರಿಗೆಮಾತ್ರ ಸಭೆ ಯವರ ಅನುಮತಿಯನ್ನು ಪಡೆಯುವುದಕ್ಕೆ ಯತ್ನಿಸುತ್ತಿದ್ದನು. ಮತಾಧಿ ಕಾರಿಗಳು ಮಾತ್ರವೇ ಸ್ವಲ್ಪ ಮಟ್ಟಿಗೆ ದೊರೆಯು ತಮ್ಮ ಮಾತಿನಂತೆ ನಡೆಯು ವಹಾಗೆ ಮಾಡಲು ಪ್ರಯತ್ನವನ್ನು ಮಾಡುತ್ತಿದ್ದರು. ಎಂತಹ ಸಂದಿಗ್ಧ ಸಮಯದಲ್ಲಿಯೂ ಕೂಡ ಎದೆಗುಂದದೆ ಆನ್ಸೆಲ್ಮನು ಹೋರಾಡಿದುದರಿಂದ ಅವರಿಗೆ ಇಷ್ಟುಮಟ್ಟಿನ ಸ್ವಾತಂತ್ರ್ಯವು ಬಂತು.

ಸ್ಥಳೀಯ ಆಡಳಿತದ (Local Government) ವಿಚಾರಗಳುಮಾತ್ರ ಯಾವವಿಧದಲ್ಲಿಯೂ ಮಾರ್ಪಡದೆ ಮೊದಲಿನಂತೆಯೇ ನಡೆಯುತ್ತಿದ್ದುವು. ಒಟ್ಟಿನಲ್ಲಿ ಹೆನ್ರಿಯ ಪ್ರಭುತ್ವವು ಪ್ರಜೆಗಳಿಗೆ ಹಿತವಾಗಿಯೇ ಇತ್ತು. ಪ್ರಜೆಗಳಿಗೆ ಲೇಶವೂ ಪಕ್ಷಪಾತವಿಲ್ಲದೆ ನ್ಯಾಯವಿಮರ್ಶೆಯು ದೊರೆಯುತ್ತಿತ್ತು. ಹೆನ್ರಿಯ ಆಡಳಿತದ ಕ್ರಮವು ಹಿಂದಿನ ಇಂಗ್ಲಿಷ್ ದೊರೆಗಳ ಪ್ರಭುತ್ವ ಕ್ಕಿಂತಲೂ ಎಷ್ಟೋ ಚೆನ್ನಾಗಿತ್ತು. ಆದುದರಿಂದ, ಮುಂದೆ ಸ್ಟೀವನ್ ದೊರೆಯ ಕಾಲದಲ್ಲಿ ಇಂಗ್ಲೆಂಡಿನ ಪ್ರಭುತ್ವವು ಕೆಟ್ಟು ಹಾಳಾದಾಗ ಪ್ರಜೆಗಳು ಹೆನ್ರಿಯ ಕಾಲದ ನ್ಯಾಯನಿಬಂಧನೆಗಳನ್ನಪೇಕ್ಷಿಸಿದರೇ ಹೊರತು ಎಡ್ವರ್ಡ್ ದೊರೆಯ ಕಾಲದ ಪ್ರಭುತ್ವವನ್ನು ಬಯಸಲೇಯಿಲ್ಲ.

---

## ಐದನೆಯ ಪ್ರಕರಣ

### ಸ್ಟೀವನ್ ದೊರೆ

ಪ್ರಭುತ್ವಮಾಡುವುದರಲ್ಲಿ ವಿಲಿಯಮನೂ ಅವನಮಕ್ಕಳೂ ಎಷ್ಟು ವಿವೇಕಿಗಳಾಗಿಯೂ, ದಕ್ಷರಾಗಿಯೂ, ಇದ್ದರೆಂಬುದು ಅವರ ಆಡಳಿತದ ಕ್ರಮಕ್ಕೂ ಅವರ ಬಳಿಕ ಪಟ್ಟಕ್ಕೆಬಂದ ಸ್ಟೀವನ್ ದೊರೆಯ ರಾಜ್ಯಭಾರ ಕ್ರಮಕ್ಕೂ ಇರುವ ವೈಷಮ್ಯಗಳನ್ನು ಪರ್ಯಾಲೋಚಿಸಿದುದಲ್ಲದೇ ಮನಸ್ಸಿಗೆ

ವ್ಯಕ್ತವಾಗದು. ಸ್ಟೀವನ್ ದೊರೆಯ ಪ್ರಭುತ್ವಕ್ರಮವು ಎಲ್ಲಾ ವಿಷಯಗಳಲ್ಲಿಯೂ ಹಿಂದಿನದೊರೆಗಳ ರೀತಿಗೆ ವಿರೋಧವಾದುದಾಗಿತ್ತು. ಸಮರ್ಥನಾದ ದೊರೆಗೆ ಬದುಲಾಗಿ ದುರ್ಬಲನಾದ ದೊರೆ; ಕ್ರಮವರಿತು ಸುಸಜ್ಜಿತವಾದ ಆಸ್ಥಾನಕ್ಕೆ ಬದುಲು ಕಟ್ಟುಹರಿದು ಅಂದಗೆಟ್ಟಿದ್ದ ಆಸ್ಥಾನ; ಹಿಂದೆ ಅತಿದುರ್ಬಲರಾಗಿದ್ದ ಬ್ಯಾರನರ ಎಣೆಯಿಲ್ಲದ ಪ್ರತಾಪ ಮತ್ತು ಯಾಜಮಾನ್ಯ; ಸ್ಥಳೀಯನ್ಯಾಯಸ್ಥಾನಗಳಿಗೆ ಉತ್ತೇಜನಕ್ಕೆ ಬದುಲು ಉದಾಸೀನತೆ; ಇಲ್ಲದ ತೆರಿಗೆಗಳನ್ನು ತೆತ್ತು ನ್ಯಾಯವಿಮರ್ಶೆಗೆ ಮಾರ್ಗವಿಲ್ಲದೆ ಬಲಿಷ್ಠರ ಅನ್ಯಾಯಾಚರಣೆಗೆ ಸಿಕ್ಕಿಗೋಳಿಡುತ್ತಿದ್ದ ಜನಸಮುದಾಯ. ಇಂತಹ ಪ್ರಭುತ್ವದಲ್ಲಿ ಜನರ ದುರ್ದೆಶೆಗೆ ಪಾರವುಂಟೇ?

ಹೆನ್ರಿಯು ಸಾಯುವಾಗ ತನ್ನಮಗಳಾದ ಮೆಟಿಲ್ಡಾ (Matilda) ಎಂಬವಳು ಮುಂದೆ ಇಂಗ್ಲೆಂಡ್‌ದೇಶದ ರಾಣಿಯಾಗಿ ರಾಜ್ಯಭಾರಮಾಡತಕ್ಕುದೆಂದೂ, ಪ್ರಜೆಗಳು ಅವಳಿಗೆ ವಿಧೇಯರಾಗಿರತಕ್ಕುದೆಂದೂ ಗೊತ್ತುಮಾಡಿದ್ದನು. ಹೆನ್ರಿಯು ಮೃತನಾದೊಡನೆಯೇ ಪ್ರಜೆಗಳ ಅಭಿಪ್ರಾಯವು ಬದುಲಾಯಿಸಿತು. ಹೆಂಗಸು ರಾಜ್ಯಭಾರಮಾಡುವುದಕ್ಕೆ ಅವರು ಒಪ್ಪಲಿಲ್ಲ. ಆದುದರಿಂದ ವಿಲಿಯಂ ದೊರೆಯ ಮೊಮ್ಮಗನಾದ ಸ್ಟೀವನ್ನನಿಗೆ ಪಟ್ಟವಾಯಿತು.

ಸ್ಟೀವನ್ನನು ಸುಂದರನಾಗಿಯೂ, ಜನರಂಜನೆಯಾಗುವಂತೆ ಮಾತನಾಡುವವನಾಗಿಯೂ ಇದ್ದನು. ಅವನ ಔದಾರ್ಯಕ್ಕೆ ಕೊನೆಮೊದಲೇ ಇರಲಿಲ್ಲ. ಆದುದರಿಂದ ಅವನ ಬಳಿಗೆ ಬಂದವರ ಮನಸ್ಸೆಲ್ಲಾ ಅವನಲ್ಲಿಯೇ ನಟ್ಟುಹೋಗುತ್ತಿತ್ತು. ಸ್ಟೀವನ್ನನು ಕೇವಲ ಶೂರನಾಗಿದ್ದನೇ ಹೊರತು ರಾಜತಂತ್ರವಿಶಾರದನಾಗಿರಲಿಲ್ಲ. ಆದಕಾರಣ ದೊರೆಯಾಗಲು ಅವನಿಗೆ ಅರ್ಹತೆಯು ಇರಲಿಲ್ಲ. ವಿಲಿಯಮನೇ ಮೊದಲಾದ ದೊರೆಗಳು ಶೂರರೂ ಹೌದು; ಅದಕ್ಕಿಂತಲೂ ಹೆಚ್ಚಾಗಿ ಪ್ರಭುತ್ವದ ಗುಟ್ಟನ್ನು ತಿಳಿದುಕೊಂಡಿದ್ದವರೂ ಹೌದು. ಆದುದರಿಂದಲೇ ಅವರ ಪ್ರಭುತ್ವವು ಸರಿಯಾಗಿ ಸಾಗಿತು.

ಸ್ಟೀವನ್ ದೊರೆಯ ಆಳಿಕೆಯು ಅಚಾತುರ್ಯಗಳ ನೆಲೆಯಾಗಿತ್ತು. ಹೆನ್ರಿಯು ಮತಾಧಿಕಾರಿಗಳ ಮನೋರಂಜನೆಯಿಂದಲೂ, ಜಸ್ಟಿಸಿಯರ್ ಮೊದಲಾದ ಅಧಿಕಾರಿಗಳಿಗೆ ಪೂರ್ಣವಾಗಿ ಆಶ್ರಯವನ್ನು ಕೊಡುವುದರಿಂದಲೂ, ಬ್ಯಾರನರೇ ಮುಂತಾದವರನ್ನು ತನ್ನ ವಶವರ್ತಿಗಳಾಗುವಂತೆ ಮಾಡಿಕೊಳ್ಳುವುದರಿಂದಲೂ ಘನತೆಯನ್ನು ಪಡೆದು ದರ್ಪದಿಂದ ರಾಜ್ಯವಾಳಿದನು. ಸ್ಟೀವನ್ನನು ಇದೊಂದಕ್ಕೂ ಮನಸ್ಸು ಕೊಡಲಿಲ್ಲ. ಬಿರುದುಗಳನ್ನೂ ಭೂಪ್ರದೇಶಗಳನ್ನೂ ತಾರತಮ್ಯವಿಲ್ಲದೆ ಮನಸ್ಸು ಬಂದಂತೆ

ಕೊಡುವುದಕ್ಕಾರಂಭಿಸಿ, ತನ್ಮೂಲಕವಾಗಿ ಬ್ಯಾರನರೇ ಮುಂತಾದ ದೊಡ್ಡ ಮನುಷ್ಯರಿಗೆ ತೃಪ್ತಿಯನ್ನುಂಟುಮಾಡಿ ಅವರ ಸೌಹಾರ್ದವನ್ನು ಪಡೆದು ಕೊಳ್ಳಲು ಯತ್ನಿಸಿದನು. ಆದರೆ ಎಷ್ಟುಕೊಡಲಾದೀತು? ಕೊಡುವುದಕ್ಕೂ ಮಿತಿಯುಂಟು. ಸ್ಟೀವನ್ನನು ಎಷ್ಟೋಕೊಟ್ಟನು. ಕಡೆಗೆ, ಮತ್ತೇನನ್ನೂ ಕೊಡಲಾರದವನಾದನು. ಒಡನೆಯೇ, ಅವನಿಂದ ಉಪಕಾರಗಳನ್ನು ಪಡೆದ ದೊಡ್ಡಮನುಷ್ಯರೆಲ್ಲರೂ ಸ್ವಾತಂತ್ರ್ಯವನ್ನು ವಹಿಸಿ ದುರ್ಗಗಳನ್ನು ಕಟ್ಟಿಕೊಳ್ಳುವಂತಾಯಿತು. ಹೆಚ್ಚೇಕೆ? ಅವರಲ್ಲಿ ಒಬ್ಬೊಬ್ಬನೂ ಒಬ್ಬೊಬ್ಬ ದೊರೆಯಂತಾದನು. ಸ್ಟೀವನ್ನನು ತನ್ನ ಅಧಿಕಾರಿಗಳಿಗೆ ಆಶ್ರಯವನ್ನು ಕೊಡುವುದನ್ನು ಬಿಟ್ಟು ಅವರನ್ನು ನಿಗ್ರಹಿಸತೊಡಗಿದನು. ಹೆನ್ರಿಯ ಕಾಲದಿಂದಲೂ ಜಸ್ಟಿಸಿಯರ್ ಅಧಿಕಾರದಲ್ಲಿದ್ದ ಸ್ಯಾಲಿಸ್‌ಬರಿಯ ಬಿಷಪ್ಪನಾದ ರೋಜರನನ್ನೂ (Roger of Salisbury) ಅವನ ಮನೆಯವರನ್ನೂ ಸೆರೆಯಲ್ಲಿಟ್ಟನು. ರೋಜರನು, ಮರಣಕಾಲದಲ್ಲಿ ಹೆನ್ರಿಗೆ ಕೊಟ್ಟ ವಾಗ್ದಾನ ವನ್ನು ನೆರವೇರಿಸಿ ಮೆಟಿಲ್ಡಳಿಗೆ ಪಟ್ಟವನ್ನು ಕಟ್ಟಬೇಕೆಂದು ವಾದಿಸಿದುದೇ ಇದಕ್ಕೆ ಕಾರಣ. ತಮ್ಮ ಬಿಷಪ್ಪನನ್ನು ಸೆರೆಯಲ್ಲಿಟ್ಟುದರಿಂದ ಮತಾಧಿಕಾರಿಗಳೆ ಲ್ಲರೂ ಸ್ಟೀವನ್ನನಿಗೆ ವಿರೋಧಿಗಳಾದರು. ಹೀಗೆ ಎಲ್ಲಾ ವಿಧದಲ್ಲಿಯೂ ಆತಳಿತಗಳನ್ನು ಹದಗೆಡಿಸಿ, ಸ್ಟೀವನ್ನನು ದಿನದಿನಕ್ಕೂ ದುರ್ಬಲನಾಗುತ್ತಾ ಬಂದನು.

ಇಷ್ಟರಲ್ಲಿ, ಸಿಂಹಾಸನಕ್ಕೆ ಬರುವ ಯೋಗವನ್ನು ಕಳೆದುಕೊಂಡ ಮೆಟಿ ಲ್ಡಾ ಎಂಬಾಕೆಯ ಪಕ್ಷವನ್ನು ವಹಿಸಿ ಸ್ಕಾಟ್ಲೆಂಡಿನ ದೊರೆಯಾದ ಡೇವಿಡ್ಡನು ಸ್ಟೀವನ್ನನ ಮೇಲೆ ಯುದ್ಧಕ್ಕೆ ಬಂದನು. ಸ್ಟೀವನ್ನನ ಕಡೆಯವರು ಅವ ನನ್ನು ಸೋಲಿಸಿದರು. ಆದರೂ ಮೆಟಿಲ್ಡಳು ಇಂಗ್ಲೆಂಡಿಗೆ ಬರುವುದು ಮೇಲೆಂದು ಬೋಧಿಸಿ ಹಾಗೆಮಾಡಲು ಅವಳನ್ನು ಎತ್ತಿಕಟ್ಟಿದರು. ಅವಳು ತನ್ನ ಸಹೋದರನಾದ ರಾಬರ್ಟ್ಟ (Robert of Gloucester) ನೊಡನೆಯೂ, ತನ್ನಮಗನಾದ ಹೆನ್ರಿಯೊಡನೆಯೂ ಕೂಡಿ ಇಂಗ್ಲೆಂಡಿಗೆ ಬಂದಳು. ಸ್ಟೀವನ ನನ್ನು ಕಂಡರೆ ಆಗದವರೆಲ್ಲರೂ ಅವಳ ಪಕ್ಷವನ್ನು ವಹಿಸಿದರು. ಅವರಿಗೂ ಸ್ಟೀವನ್ನನ ಕಡೆಯವರಿಗೂ, ಯುದ್ಧಕ್ಕೆ (Civil war) ಉಪಕ್ರಮವಾಯಿತು. ಕೆಲವುವೇಳೆ ದೊರೆಯ ಕಡೆಯವರಿಗೂ ಕೆಲವುವೇಳೆ ಮೆಟಿಲ್ಡಳ ಕಡೆಯವರಿಗೂ ಜಯವಾಯಿತು. ಆದದರಿಂದ ಯಾವಕಡೆಗೂ ಖಂಡಿತವಾಗಿ ಜಯವು ನಿರ್ಧ ರವಾಗದೆ, ದೇಶದಲ್ಲೆಲ್ಲಾ ಕ್ಷೋಭೆಯುಂಟಾಯಿತು; ಜನರ ಕಷ್ಟಗಳಿಗೆ ಪಾರ ವೇ ಇರಲಿಲ್ಲ ಸ್ಟೀವನನ ಹಿರಿಯಮಗನಾದ ಯೂಸ್ಟೆಸನು (Eustace) ಸತ್ತು ಹೋದನು. ಬಳಿಕ ಸಮಾಧಾನಕ್ಕೆ ಅವಕಾಶವಾಯಿತು; ಮೆಟಿಲ್ಡಳ ಮಗನಾದ

ಹೆನ್ರಿಯ ಪರಾಕ್ರಮವನ್ನು ತಾಳಲಾರದೆ, ಸ್ಟೀವನ್ನನು ತನ್ನ ಕಾಲಾನಂತರ ಹೆನ್ರಿಯು ಪಟ್ಟಕ್ಕೆ ಬರಬಹುದೆಂದು ಒಪ್ಪಬೇಕಾಯಿತು. ಸ್ಟೀವನ್ನನಿಗೆ ಇನ್ನೂ ಗಂಡುಮಕ್ಕಳು ಇದ್ದರೂ ಕೂಡ ಅವನು ಇದಕ್ಕೆ ಸಮ್ಮತಿಸಲೇ ಬೇಕಾಯಿತು. ಯುದ್ಧವು ನಿಂತಿತು. ಸ್ಟೀವನ್ನನು ಮೃತನಾದ ಬಳಿಕ, ಯಾವವಿಧವಾದ ಅಡ್ಡಿಯೂ ಇಲ್ಲದೆ ಹೆನ್ರಿಯು ಸಿಂಹಾಸನಕ್ಕೆ ಬಂದನು.

---

## ಆರನೆಯ ಪ್ರಕರಣ

### ಎರಡನೆಯ ಹೆನ್ರಿ ದೊರೆಯು ಮಾಡಿದ ತಿದ್ದುಪಾಟುಗಳು.

ದೊರೆಯು ಸಮರ್ಥನಾಗಿದ್ದು ಪ್ಯೂಡಲಿಸಮ್ ಪದ್ಧತಿಗೆ ಸಂಬಂಧಪಟ್ಟ ವರನ್ನೆಲ್ಲಾ ಸ್ವಾಧೀನದಲ್ಲಿಟ್ಟಹೊರತು ದೇಶಕ್ಕೆ ಕ್ಷೇಮವಿರದೆಂಬುದು ಸ್ಟೀವನ್ನನ ಆಳಿಕೆಯಿಂದ ಎಲ್ಲರಿಗೂ ಗೊತ್ತಾಯಿತು. ನ್ಯಾಯಶಾಸನಕರ್ತ ರಾಗಿದ್ದ ಅಧಿಕಾರಿಗಳೂ, ಮತಾಧಿಕಾರಿಗಳೂ, ಪಟ್ಟಣಿಗರೂ ಮುಂತಾಗಿ ಸಮಸ್ತರೂ ಏಕನಿಷ್ಠತೆಯಿಂದ ದೇಶದಲ್ಲಿ ಮೊದಲಿನಂತೆ ನ್ಯಾಯವೂ, ಶಾಂತಿಯೂ, ನೆಲೆಗೊಳ್ಳುವಂತೆ ಮಾಡುವುದಕ್ಕಾಗಿ ಹೆನ್ರಿಗೆ ಸಹಾಯ ಮಾಡಲು ಸಿದ್ಧರಾಗಿ ನಿಂತರು. ಈ ಎರಡನೆಯ ಹೆನ್ರಿದೊರೆಯು ವಿಚಕ್ಷಣೆ ಯಿಂದ ರಾಜ್ಯಭಾರ ಮಾಡತೊಡಗಿದನು. ಈತನು ಸ್ವಭಾವದಿಂದಲೂ, ಶಿಕ್ಷಣದಿಂದಲೂ, ಪ್ರಭುತ್ವ ಮಾಡುವುದಕ್ಕೆ ಅರ್ಹನಾಗಿದ್ದನು. ಈತನು ಹದಗೆಟ್ಟು ಹೋಗಿದ್ದ ವಿಚಾರಗಳನ್ನೆಲ್ಲಾ ವ್ಯವಸ್ಥೆಗೆ ತಂದುನಿಲ್ಲಿಸಿ ಕ್ರಮ ಪಡಿಸಿದುದರಿಂದ, ಈತನು ಎಡ್ವರ್ಡ್ ದೊರೆಯು ಮತ್ತು ವಿಲಿಯಂ ದೊರೆಯ ಸಮಾನನೆಂದು ಹೇಳಲು ಲೇಶವೂ ಸಂದೇಹವಿಲ್ಲ.

ಹೆನ್ರಿಯು ಪಟ್ಟಕ್ಕೆ ಬಂದಾಗ, ಆತನಿಗೆ ಇಪ್ಪತ್ತೊಂದು ವರುಷ ವಯಸ್ಸಾಗಿತ್ತು. ಆತನು ಕಾಯಿಕಮಾನಸಿಕಚೈತನ್ಯಪುಂಜನಾಗಿದ್ದನು. ಆತನು ಮಟ್ಟತರದ ಆಳಾಗಿದ್ದರೂ, ಮೈಕಟ್ಟುಮಾತ್ರ ಅಂದಗೆಡದೇ ಇತ್ತು. ಬಹಳ ಉದ್ದವಾಗಿಲ್ಲದ ಗುಂಗುರಾದ ಕೂದಲು; ಕೋಪಿಸಿ ಕೊಂಡಾಗ ಕೆಂಡವನ್ನೇ ಕಾರುವಂತಿದ್ದ ಅತಿತೀವ್ರವಾದ ದೃಷ್ಟಿ; ಆತನನ್ನು ನೋಡಿದೊಡನೆಯೇ ಅವನ ಪರಿಶೀಲನಶಕ್ತಿಯೂ, ತಿಳಿವಳಿಕೆಯೂ, ಗೋಚರ ವಾಗುವಂತಿದ್ದ ನೇತ್ರಯುಗ್ಮ; ಇತರರನ್ನು ನೋಡಿದೊಡನೆಯೇ ಅವರ ನಡೆನುಡಿಗಳನ್ನು ಗ್ರಹಿಸುವ ಇಂಗಿತಜ್ಞಾನ—ಇವುಗಳಿಂದ ಕೂಡಿದ್ದ ಹೆನ್ರಿಯ ಸಾಮರ್ಥ್ಯಕ್ಕೆ ಎಲ್ಲೆಯೇ ಇರಲಿಲ್ಲ. ನಡೆಯುವುದರಲ್ಲಾಗಲೀ

ನುಡಿಯುವುದರಲ್ಲಾಗಲೀ ಆತನಿಗೆ ಬೇಸರವೇ ಇರಲಿಲ್ಲ; ಕುದುರೆಯ ಸವಾರಿಯಲ್ಲಿ ಅವನು ಹಗಲಿರುಳನ್ನು ಬೇಕಾದರೂ ಕಳೆಯುತ್ತಿದ್ದನು. ಯಾವಸ್ಥಳದಲ್ಲಿಯೂ ಒಂದೆರಡು ದಿನಗಳಿಗಿಂತಲೂ ಹೆಚ್ಚಾಗಿ ನಿಲ್ಲದೆ ಯಾವಾಗಲೂ ದೇಶವನ್ನು ಸುತ್ತುತ್ತಾ, ವಿಸ್ತಾರವಾದ ತನ್ನ ರಾಜ್ಯದಲ್ಲಿ ಎಲ್ಲೆಲ್ಲಿ ಏನೇನು ನಡೆಯುತ್ತಿತ್ತೆಂಬುದನ್ನು ಆತನು ಚೆನ್ನಾಗಿ ಗೊತ್ತುಮಾಡಿ ಕೊಳ್ಳುತ್ತಿದ್ದನು. ಪ್ರಯಾಣವು ಅತಿದುಸ್ತರವಾಗಿದ್ದ ಕಾಲದಲ್ಲಿ ಕೂಡ ಆತನು ಹೀಗೆ ಮಾಡುತ್ತಿದ್ದುದು ಎಂತಹವರಿಗೂ ವಿಸ್ಮಯವನ್ನುಂಟುಮಾಡುವ ವಿಷಯವೇ ಸರಿ. ಆತನ ಕಾಲದಲ್ಲಿ ದೊರೆಯ ದೃಷ್ಟಿಯು ಎಲ್ಲಾ ಕಡೆಗಳಲ್ಲಿಯೂ ಒಂದೇ ಸಮವಾಗಿ ವ್ಯಾಪಿಸಿತ್ತು. ಸ್ವಭಾವತಃ ಆತನಿಗೆ ದೊರೆತಿದ್ದ ಈ ಸಾಧನಗಳ ಜೊತೆಗೆ ಸೊಗಸಾದ ಶಿಕ್ಷಣವೂ ಆಗಿದ್ದುದರಿಂದ ವಜ್ರಕ್ಕೆ ಸಾಣೆಯಿಟ್ಟಂತಾಯಿತು. ತಾಯಿಯ ಕಡೆಯಿಂದ ನಾರ್ಮನ್ ಮತ್ತು ಇಂಗ್ಲಿಷ್ ರಕ್ತವನ್ನು ಹಂಚಿಕೊಂಡು ತಂದೆಯ ಕಡೆಯಿಂದ ಆಂಜೆವಿನ್ನ (Angevin) ನಾಗಿ, ಸ್ಕಾಟ್ಲೆಂಡಿನಲ್ಲಿ ವಿದ್ಯಾಭ್ಯಾಸವನ್ನು ಪಡೆದು, ವಿವಾಹದ ಮೂಲಕ ಫ್ರಾನ್ಸ್ ದೇಶದ ಅನೇಕ ಪ್ರದೇಶಗಳಿಗೆ ಒಡೆಯನಾಗಿ, ಹೆನ್ರಿಯು ಸರ್ವತೋ ಮುಖವಾಗಿದ್ದ ಪ್ರಜ್ಞೆಯುಳ್ಳವನಾಗಿದ್ದನು. ಆದಕಾರಣ ಆತನಲ್ಲಿ ಯಾವುದಾದರೂ ಒಂದೇಒಂದು ದೇಶಕ್ಕೆ ಸೇರಿ ಅಲ್ಲಿಯೇ ಹುಟ್ಟಿ ಬೆಳೆದವರಲ್ಲಿರಬಹುದಾದ ಸಂಕುಚಿತ ಭಾವಗಳೂ, ವಿದೇಶೀಯರ ಮೇಲಿನ ವಿದ್ವೇಷವೂ ಇರಲಿಲ್ಲ. ಇವುಗಳಿಗೆ ತಕ್ಕಂತೆ ಆತನಲ್ಲಿ ಉತ್ತಮವಾದ ವಿದ್ಯೆಯೂ ಇದ್ದುದರಿಂದ ಪ್ರಭುವಾಗಲು ಆತನು ಸಂಪೂರ್ಣವಾಗಿ ಅರ್ಹನಾಗಿದ್ದನು.

ಆತನು ಪಟ್ಟಕ್ಕೆ ಬಂದೊಡನೆಯೇ, ತಾನು ಇಂಗ್ಲಿಷ್ ಜನರಿಗೆ ಅಚ್ಚುಮೆಚ್ಚಾಗುವಂತೆ ರಾಜ್ಯಭಾರ ಮಾಡಬೇಕೆಂದೂ ಫ್ಯೂಡಲಿಸಮ್ ಪದ್ಧತಿಗೆ ಸಂಬಂಧಪಟ್ಟ ದೊಡ್ಡಮನುಷ್ಯರ ಹೊಮ್ಮನ್ನು ಮುರಿದು, ತಮ್ಮ ತಾತನಾದ ಹೆನ್ರಿದೊರೆಯ ಕಾಲದ ನ್ಯಾಯನಿಬಂಧನೆಗಳನ್ನೆಲ್ಲಾ ಆಚರಣೆಗೆ ತರಬೇಕೆಂದೂ ನಿರ್ಧರಿಸಿದನು. ಪ್ರಜೆಗಳೂ ಅಧಿಕಾರಿಗಳೂ ಸ್ಟೀವನ್ನನ ಆಳಿಕೆಯಲ್ಲಿ ಸಂಭವಿಸಿದ ಕಷ್ಟಗಳಿಂದ ಬೇಸತ್ತು, ಸರಿಯಾದ ರೀತಿಯಲ್ಲಿ ಪ್ರಭುತ್ವ ಮಾಡುವ ದೊರೆಯು ತಮಗೆ ದೊರೆತರೆ ಸಾಕೆಂದೂ, ಅಂತಹವನಿಗೆ ತಮ್ಮ ಕೈಯಲ್ಲಾದ ಸಹಾಯವನ್ನೆಲ್ಲಾ ಮಾಡಿ ಆತನ ಪಕ್ಷವನ್ನು ವಹಿಸಿ ನಿಲ್ಲುವುದಾಗಿಯೂ ಗೊತ್ತುಮಾಡಿಕೊಂಡಿದ್ದರು. ಆದುದರಿಂದ ಹೆನ್ರಿಯ ಕೋರಿಕೆಯು ನೆರವೇರಲು ಅನುಕೂಲವಾಯಿತು. ಬ್ಯಾರನರೇ ಮುಂತಾದವರ ಕೊಬ್ಬನ್ನು ಅಡಗಿಸುವುದರಲ್ಲಿ ಅಧಿಕಾರಿಗಳೂ, ಪ್ರಜೆಗಳೂ, ಅವನಿಗೆ ಬಹಳವಾಗಿ ಸಹಾಯಮಾಡಿದರು. ಸ್ಟೀವನನೂ, ಮೆಟಿಲ್ಡಳೂ ಅವರಿಗೆ ಲಂಚ

ವಾಗಿ ಕೊಟ್ಟಿದ್ದ ಭೂಪ್ರದೇಶಗಳನ್ನೆಲ್ಲಾ ಹಿಂದಕ್ಕೆ ತೆಗೆದುಕೊಂಡು, ಅವರು ನ್ಯಾಯಕ್ಕೆ ವಿರೋಧವಾಗಿ ಕಟ್ಟಿಕೊಂಡಿದ್ದ ದುರ್ಗಗಳನ್ನೆಲ್ಲಾ ನೆಲಸಮ ಮಾಡಿಸಿದನು; ಕೃತ್ರಿಮ ನಾಣ್ಯಗಳನ್ನು ರಚಿಸುತ್ತಿದ್ದುದನ್ನು ನಿರೋಧಿಸಿ ಶುದ್ಧವಾದ ನಾಣ್ಯಗಳನ್ನು ಚಲಾವಣೆಗೆ ಕೊಡಿಸಿದನು; ಸೆರೆಯಲ್ಲಿದ್ದ ಸ್ಯಾಲಿಸ್ಬರಿಯ ಬಿಷಪ್ಪನಾದ ರೋಜರನನ್ನೂ, ಅವನಮನೆಯವರನ್ನೂ ಬಿಡುಗಡೆ ಮಾಡಿಸಿ, ಅವನನ್ನು ಮೊದಲಿನ ಸ್ಥಿತಿಗೆ ತಂದನು.

ಈ ಕೆಲಸಗಳನ್ನೆಲ್ಲಾ ಮಾಡುವುದಕ್ಕೆ ಸ್ವಲ್ಪ ಕಾಲವು ಹಿಡಿಯಿತು. ಛಾನ್ಸೆಲರ್ ಅಧಿಕಾರದಲ್ಲಿದ್ದ ಥಾಮಸ್ ಎ ಬೆಕೆಟ್ (Thomas a' Becket) ಎಂಬ ಬಿಷಪ್ಪನು ಹೇಗೆ ವರ್ತಿಸಬೇಕೆಂಬ ವಿಷಯದಲ್ಲಿ ದೊರೆಗೆ ಸಲಹೆಗಳನ್ನು ಕೊಡುತ್ತಾ ರಾಜ್ಯದ ಆಡಳಿತಗಳನ್ನು ನಡೆಯಿಸುವುದರಲ್ಲಿ ಅವನಿಗೆ ಬಹಳ ಸಹಾಯ ಮಾಡುತ್ತಿದ್ದನು. ಈ ಛಾನ್ಸೆಲರನು ಬಹಳ ಗಟ್ಟಿಗನಾಗಿಯೂ, ಬುದ್ಧಿವಂತನಾಗಿಯೂ ಇದ್ದನು. ಹೆನ್ರಿಗೆ ಅವನಲ್ಲಿ ತುಂಬ ವಿಶ್ವಾಸವಿತ್ತು.

ಮೊದಲನೆಯ ವಿಲಿಯಂ ದೊರೆಯು, ಮತ ವಿಷಯಗಳಲ್ಲಿ ಹುಟ್ಟಿದ ವಿವಾದಗಳನ್ನೂ, ಮತಾಧಿಕಾರಿಗಳ ಅಪರಾಧಗಳನ್ನೂ, ಬಿಷಪ್ ಮುಂತಾದ ಮತಾಧಿಕಾರಿಗಳಿಂದ ಕೂಡಿದ 'ಎಕ್ಲೀಸಿಯಾಸ್ಟಿಕಲ್ ಕೋರ್ಟ್' ಗಳೆಂಬ ನ್ಯಾಯಸ್ಥಾನಗಳಲ್ಲಿ ವಿಚಾರಣೆಮಾಡುವಂತೆ ಏರ್ಪಡಿಸಿ, ಮತಾಧಿಕಾರಿಗಳಿಗೂ, ಷೈರ್‌ಮೂಟ್ ಮೊದಲಾದ ನ್ಯಾಯಸ್ಥಾನಗಳಿಗೂ ಇದ್ದ ಸಂಬಂಧವನ್ನು ತಪ್ಪಿಸಿದನೆಂದು ಹಿಂದೆಯೇ ಹೇಳಿದೆವಷ್ಟೆ. ಇದರಿಂದ ಬಹಳ ಕೆಡುಕುಂಟಾಯಿತು. ಬಿಷಪ್ಪುಗಳೆಲ್ಲರೂ ಸೇರಿ ನ್ಯಾಯಸ್ಥಾನಗಳನ್ನು ಕಲ್ಪಿಸಿಕೊಂಡು, ಪ್ರೀಸ್ಟ್ (Priest), ಡೀಕನ್ (Deacon) ಮುಂತಾದ ತಮ್ಮ ಕೈಕೆಳಗಿನ ಮತಾಧಿಕಾರಿಗಳ ಅಪರಾಧಗಳನ್ನು ವಿಚಾರಣೆ ಮಾಡತೊಡಗಿದರು. ಇವರು ಎಂತಹ ಅಪರಾಧಗಳನ್ನು ಮಾಡಿದರೂ, ಲೌಕಿಕರಾದ ಇತರರಿಗೆ ಷೈರ್‌ಮೂಟ್ ಮುಂತಾದ ನ್ಯಾಯಸ್ಥಾನಗಳಲ್ಲಿ ವಿಧಿಸುತ್ತಿದ್ದಂತೆ ಕಠಿನವಾದ ಶಿಕ್ಷೆಯೇ ಇಲ್ಲದೆ ಅತ್ಯಲ್ಪವಾದ ಶಿಕ್ಷೆಯಾಗುತ್ತಿತ್ತು. ಯಾವಾಗ ಅಪರಾಧಗಳಿಗೆ ತಕ್ಕ ಶಿಕ್ಷೆಯಾಗುವುದು ತಪ್ಪಿಹೋಯಿತೋ, ಆಗ ಮತಾಧಿಕಾರಿಗಳ ಅಪರಾಧಗಳು ಅತಿಯಾಗಿ ಹೆಚ್ಚಿಹೋದುವು. ನರಹತ್ಯೆಯನ್ನು ಮಾಡಿದರೂ ಇವರಿಗೆ ನೇಣುಹಾಕದೆ, ಚಾವಟಿಯಿಂದ ಕೆಲವು ಪೆಟ್ಟುಗಳನ್ನು ಹೊಡಿಸುವುದು, ಮೊನಾಸ್ಟರಿ (Monastery) ಎಂಬ ಮಠದಲ್ಲಿ ನಿರ್ಬಂಧದಲ್ಲಿಡುವುದು, ಮುಂತಾದ ಅತ್ಯಲ್ಪವಾದ ಶಿಕ್ಷೆಗಳನ್ನು ವಿಧಿಸುತ್ತಿದ್ದರು. ಆದುದರಿಂದ, ಮತಾಧಿಕಾರಿಗಳಲ್ಲಿ ಅನೇಕರಿಗೆ ಪಾಪಭೀತಿಯೇ ಇಲ್ಲದಂತಾಯಿತು. ಅನೇಕ ದುರಾತ್ಮರು ತಾವು ಮತಾಧಿಕಾರಗಳನ್ನು ಸಂಪಾದಿಸಿ

ಕೊಳ್ಳುವುದಾದರೆ ಅಪರಾಧಗಳನ್ನು ಮಾಡಬಹುದೆಂದೂ, ಅವುಗಳಿಗೆ ತಕ್ಕ ಶಿಕ್ಷೆಯೇ ಇಲ್ಲದೇ ಇದ್ದುದರಿಂದ, ತಾವು ಪಾಪಾಚರಣೆಯಿಂದಲೇ ಕಾಲವನ್ನು ಕಳೆದರೂ ಕೇಳುವವರೇ ಇರಲಿಲ್ಲವೆಂದೂ, ಆಲೋಚಿಸಿ ಹಾಗೆಯೇ ಮಾಡತೊಡಗಿದರು. ಇದರ ಮೇಲೆ, ಬಿಷಪ್ಪುಗಳ ತೀರ್ಮಾನವು ಸರಿಯಿಲ್ಲವೆಂದೂ ಪೋಪರಬಳಿಗೆ ಅಪೀಲ್ ಹೋಗಿ, ಮೊದಲೇ ಕಡಿಮೆಯಾಗಿದ್ದ ಶಿಕ್ಷೆಯನ್ನು ಮತ್ತಷ್ಟು ಕಡಿಮೆ ಮಾಡಿಸಿಕೊಳ್ಳಲು ಪ್ರಯತ್ನ ಮಾಡಲಾರಂಭಿಸಿದರು. ಇದರಿಂದ, ಮತಾಧಿಕಾರಿಗಳಿಗೆ ದೊರೆಯನ್ನು ಕಂಡರೆ ಅಲಕ್ಷ್ಯವು ಹುಟ್ಟಿತು; ಅವರ ಸ್ವಾತಂತ್ರ್ಯವು ಬಹಳ ಹೆಚ್ಚಿಹೋಯಿತು. ಹೆನ್ರಿಯು ಈ ವಿಚಾರಗಳಲ್ಲೆಲ್ಲಾ ತಕ್ಕ ಪರಿಷ್ಕರಣಗಳನ್ನು ಮಾಡಬೇಕೆಂದು ಯೋಚಿಸಿ, ಅದುವರೆಗೂ ತನ್ನ ಕಾರ್ಯಗಳಲ್ಲೆಲ್ಲಾ ತನಗೆ ಬಹಳ ಸಹಾಯಮಾಡಿ, ತನ್ನ ಬಲಭುಜದಂತಿದ್ದ ಛಾನ್ಸೆಲರನಾದ ಬೆಕೆಟ್ಟನನ್ನು, ಕ್ಯಾಂಟರ್‌ಬರಿಯ ಆರ್ಚ್‌ಬಿಷಪ್ (Archbishop of Canterbury) ಎಂಬ ದೊಡ್ಡ ಮತಾಧಿಕಾರಿಯನ್ನಾಗಿ ಮಾಡಿದನು. ಬಳಿಕ ಬೆಕೆಟ್ಟನ ಸ್ವಭಾವವೇ ಬದಲಾಯಿಸಿತು ಬೆಕೆಟ್ಟನು ದೊರೆಗೆ ಸಹಾಯಮಾಡುವುದು ಹೋಗಿ, ಅವನು ದೊರೆಗೆ ಇದಿರಾಳಿಯಾಗಿ ನಿಂತನು. ಇದನ್ನು ನೋಡಿ ಹೆನ್ರಿಯು ವಿಸ್ಮಿತನಾದನು. ಬೆಕೆಟ್ಟನು ಹೀಗೆ ಮಾಡಿದುದಕ್ಕೆ ಕಾರಣವೇನೆಂದು ದೊರೆಯು ಅವನನ್ನು ಕೇಳಿದಾಗ, ಬೆಕೆಟ್ಟನು ತಾನು ಛಾನ್ಸೆಲರ ಅಧಿಕಾರದಲ್ಲಿದ್ದಾಗ ದೊರೆಯ ಮನೋಭಾವವನ್ನು ಅನುಸರಿಸಿ ನಡೆಯುವುದು ತನ್ನ ಕರ್ತವ್ಯವಾಗಿತ್ತೆಂದೂ, ಆದರೆ, ಈಗ ತನಗೆ ಆರ್ಚ್‌ಬಿಷಪ್ ಅಧಿಕಾರವು ದೊರೆತುದರಿಂದ ಮತಾಧಿಕಾರಿಗಳ ಪಕ್ಷವನ್ನು ವಹಿಸಿನಿಂತು, ಅವರ ಘನತೆಯನ್ನುಳಿಸುವುದು ತನ್ನ ಧರ್ಮವೆಂದೂ ಉತ್ತರಹೇಳಿದನು.

ಮತಾಧಿಕಾರಿಗಳ ತಪ್ಪಿಗೆ ತಕ್ಕ ಶಿಕ್ಷೆಯಾಗಬೇಕೆಂಬುದಕ್ಕೆ ಸರ್ವರೂ ಸಮ್ಮತಿಸಬೇಕಾಗಿತ್ತು. ಆದರೆ, ಹೆನ್ರಿಯು ಮೊದಲು ಒಂದೆರಡು ಪರಿಷ್ಕರಣಗಳನ್ನು ಮಾಡದೆ ಒಂದೇ ತಡವೆಗೇ ಅನೇಕಾನೇಕ ತಿದ್ದುಪಾಟುಗಳನ್ನು ಮಾಡಲು ಯತ್ನಿಸಿದನು. ಆದಕಾರಣ, ಬೆಕೆಟ್ಟನೂ, ಮತಾಧಿಕಾರಿಗಳೂ ತಮ್ಮ ಅಧಿಕಾರಗಳು ಪವಿತ್ರವಾದುವುಗಳೆಂದೂ, ಆದುದರಿಂದ ದೊರೆಯೂ, ಆತನ ಸಾಮಾಜಿಕರೂ, ಕುಣಿಸಿದಂತೆಲ್ಲಾ ತಾವು ಕುಣಿಯಲಾಗುವುದಿಲ್ಲವೆಂದೂ, ನಿರ್ಧರಿಸಿಕೊಂಡರು. ಬೆಕೆಟ್ಟನು ದೊರೆಯ ಉದ್ದೇಶಗಳಿಗೆ ಪ್ರತಿಭಟಿಸಿ ನಿಂತನು. ದೊರೆಯು ಕ್ಲ್ಯಾರೆಂಡನ್ ಎಂಬಸ್ಥಳದಲ್ಲಿ ನಡೆದ ಸಭೆಯಲ್ಲಿ (Clarendon Council) ಮತಾಧಿಕಾರಿಗಳಿಗೂ, ರಾಜನಿಗೂ, ಇರಬೇಕಾದ ಸಂಬಂಧಗಳನ್ನೂ, ಅವರ ವಿಷಯದಲ್ಲಿ ಆಗಬೇಕಾಗಿದ್ದ ಪರಿಷ್ಕರಣಗಳನ್ನೂ ನಿರ್ಧರಿಸಿನು. ಅವರ ಕ್ರಮವು ಈ ಪರಿಯಾಗಿತ್ತು :—

(೧) ತೆರವಾಗಿದ್ದ ಮತಾಧಿಕಾರಗಳಿಗೆ ಬೇರೆ ಜನರನ್ನು ನೇಮಿಸುವಾಗ ಆ ಕೆಲಸಗಳಿಗೆ ಬರುವವಿಷಯದಲ್ಲಿ ಭಾವೀ ಅಧಿಕಾರಿಗಳಿಗೆ ಪರಸ್ಪರವಿವಾದವು ಹುಟ್ಟಿದಾಗ ಅದನ್ನು ದೊರೆಯ ನ್ಯಾಯಸ್ಥಾನದವರೇ ತೀರ್ಮಾನಿಸತಕ್ಕದು. (೨) ಕ್ರಿಮಿನಲ್ ಅಪರಾಧಿಗಳಾದ ಮತಾಧಿಕಾರಿಗಳ ವಿಚಾರಣೆಯು ದೊರೆಯ ನ್ಯಾಯಸ್ಥಾನದಲ್ಲಿಯೇ ಜರುಗತಕ್ಕದು. ಒಂದುವೇಳೆ, ಈ ವಿಚಾರಣೆಯು ಬಿಷಪ್ಪುಗಳ ನ್ಯಾಯಸ್ಥಾನದಲ್ಲಿಯೇ ನಡೆಯಬಹುದೆಂದು ನ್ಯಾಯಾಧಿಪತಿಯು ಸಮ್ಮತಿಸಡುವುದಾದರೆ, ಆಗಮಾತ್ರವೇ ಬಿಷಪ್ಪುಗಳಿಂದ ಮೊಕದ್ದಮೆಯು ತೀರ್ಮಾನವಾಗಬಹುದು. ಅಪರಾಧಿಗಳಾದ ಮತಾಧಿಕಾರಿಗಳಿಗೆ ಲೌಕಿಕ ರಂತೆಯೇ ಶಿಕ್ಷೆಯನ್ನು ವಿಧಿಸತಕ್ಕದು. (೩) ದೊರೆಯ ಅನುಮತಿಯಿಲ್ಲದೆ ಯಾವ ಮತಾಧಿಕಾರಿಯೂ ದೇಶವನ್ನು ಬಿಟ್ಟು ಹೊರಗೆಹೋಗಕೂಡದು. (೪) ಬಿಷಪ್ಪುಗಳ ತೀರ್ಮಾನದ ಮೇಲೆ ದೊರೆಯ ಬಳಿಗೆ ಅಪೀಲ್ ಹೋಗತಕ್ಕದು. ಅಪೀಲಿಗಾಗಿ ಮುಂದೆಹೋಗಲು ಆತನು ಸಮ್ಮತಿಸದೇ ಇದ್ದರೆ ವಿವಾದಗಳು ಆರ್ಚ್‌ಬಿಷಪ್ಪಿನಿಂದಲೇ ತಿರ್ಮಾನವಾಗಬೇಕು. ಕ್ರಿಮಿನಲ್ ಅಪರಾಧಿಗಳಾದ ಮತಾಧಿಕಾರಿಗಳನ್ನು ವಿಚಾರಣೆಮಾಡುವುದಕ್ಕೆ ಬಿಷಪ್ಪುಗಳಿಗೆ ಅಧಿಕಾರವಿರಕೂಡದು. ಮತಸಂಬಂಧವಾದ ಅಪರಾಧಗಳನ್ನು ಮಾತ್ರವೇ ಬಿಷಪ್ಪುಗಳೂ, ಆರ್ಚ್‌ಬಿಷಪ್ಪುಗಳೂ, ವಿಚಾರಣೆಮಾಡಬಹುದು. (೫) ಮತಾಧಿಕಾರಿಗಳು ದೊರೆಯ ಅಪ್ಪಣೆಯಿಲ್ಲದೆ ಫ್ಯೂಡಲಿಸಮ್ ಪದ್ಧತಿಗೆ ಸಂಬಂಧಪಟ್ಟವರಿಗೂ, ದೊರೆಯ ಕೈಕೆಳಗಿನ ಅಧಿಕಾರಿಗಳಿಗೂ ಬಹಿಷ್ಕಾರವನ್ನು (Excommunication) ಹಾಕಕೂಡದು. (೬) ದೊರೆಯು ತಮಗೆ ಭೂಪ್ರದೇಶಗಳನ್ನು ಕರುಣಿಸಿದ್ದುದಕ್ಕಾಗಿ, ಫ್ಯೂಡಲಿಸಮ್ ಪದ್ಧತಿಗೆ ಸಂಬಂಧಪಟ್ಟವರಂತೆಯೇ ದೊರೆಗೆ ಮತಾಧಿಕಾರಿಗಳು ವಿಧೇಯರಾಗಿದ್ದು, ಅವರಂತೆಯೇ ಆಸ್ಥಾನಕ್ಕೆ ಹೋಗಿ ರಾಜನಿಗೆ ನಜರು ಮಾಡತಕ್ಕದು. (೭) ದೊರೆಯ ಅಪ್ಪಣೆಯನ್ನು ಪಡೆದು ಆರ್ಚ್‌ಬಿಷಪ್, ಬಿಷಪ್, ಆಬಟ್ (Abbot) ಮುಂತಾದ ಅಧಿಕಾರಿಗಳನ್ನು ಆರಿಸಬೇಕು. ಹಾಗೆ ಆರಿಸಲ್ಪಟ್ಟವರು 'ಕಾನ್‌ಸೆಕ್ರೇಷನ್' (Consecration) ಎಂಬ ಪವಿತ್ರಕರ್ಮವನ್ನು ಮಾಡಿಕೊಳ್ಳುವುದಕ್ಕೆ ಮೊದಲು ದೊರೆಯು ತಮಗೆ ಭೂಪ್ರದೇಶಗಳನ್ನು ಕೊಟ್ಟಿರುವುದಕ್ಕಾಗಿ ಆತನಿಗೆ ನಜರುಮಾಡತಕ್ಕದು. (೮) ಫ್ಯೂಡಲಿಸಮ್ ಪದ್ಧತಿಗೆ ಒಳಪಟ್ಟಿರುವ ಸಾಮಾನ್ಯ ಜನರ ಮಕ್ಕಳನ್ನು ಮತಾಧಿಕಾರಗಳಿಗೆ ನಿಯಮಿಸುವುದಾದರೆ, ಅವರ ಆಶ್ರಯದಾತರ ಅಪ್ಪಣೆಯನ್ನು ಪಡೆದಲ್ಲದೆ ಕಾನ್‌ಸೆಕ್ರೇಷನ್ ಕರ್ಮವನ್ನು ನೆರವೇರಿಸಕೂಡದು.

ಈ ನಿಬಂಧನೆಗಳಿಂದ ಮತಾಧಿಕಾರಿಗಳು ದೊರೆಗೆ ವಶವರ್ತಿಗಳಾಗ ಬೇಕಾಗುವುದೆಂದೆಣಿಸಿ, ಬೆಕೆಟ್ಟನು ಪ್ರತಿಭಟಿಸಿನಿಂತನು. ಹೆನ್ರಿಯು ತನ್ನ ಉದ್ದೇಶಗಳನ್ನು ಸಾಧಿಸಲೇಬೇಕೆಂದು ಹಟಹಿಡಿದನು. ಬೆಕೆಟ್ಟನು ಅದಕ್ಕೆ ಒಪ್ಪದೆ ದೇಶವನ್ನೇ ಬಿಟ್ಟು ಹೊರಟುಹೋದನು. ಹೆನ್ರಿಯ ಮನೋರಥವು ನೆರವೇರಿದ್ದರೆ ಎಷ್ಟೋ ಚೆನ್ನಾಗಿತ್ತು. ಆದರೆ ಅದು ನೆರವೇರದೇ ಹೋಯಿತು. ಬೆಕೆಟ್ಟನು ದೇಶವನ್ನು ಬಿಟ್ಟು ಹೊರಟುಹೋಗಿದ್ದಾಗ ನರ ಹತ್ಯೆಗಳನ್ನೂ, ಕಳ್ಳತನವನ್ನೂ, ಇನ್ನೂ ಅನೇಕ ಪಾತಕಗಳನ್ನೂ, ಮಾಡಿದ್ದ ಅನೇಕಾನೇಕಮಂದಿ ಪ್ರೀಸ್ಟ್, ಡೀಕನ್ ಮೊದಲಾದ ಮತಾಧಿಕಾರಿಗಳಿಗೆ ದೊರೆಯ ನ್ಯಾಯಸ್ಥಾನದಲ್ಲಿ, ಸಾಮಾನ್ಯಲೌಕಿಕ ಜನರಿಗೆ ವಿಧಿಸುತ್ತಿದ್ದ ಶಿಕ್ಷೆಗಳೇ ಆದುವು. ಆದರೆ ಅಷ್ಟರಲ್ಲಿ ಬೆಕೆಟ್ಟನು ಇಂಗ್ಲೆಂಡಿಗೆ ಹಿಂತಿರುಗಿ ಬಂದನು; ಅವನನ್ನು ಯಾರೋ ಕೊಂದುಬಿಟ್ಟರು. ದೊರೆಯೇ ಅವನನ್ನು ಕೊಲ್ಲಿಸಿದ ನೆಂಬ ಸಂಶಯದಿಂದ ಜನರ ಮನಸ್ಸು ಕೆಟ್ಟುಹೋಯಿತು. ಇನ್ನು ಮತಾಧಿ ಕಾರಿಗಳ ಗೊಡವೆಗೆ ಹೋದಲ್ಲಿ ಕೆಲಸವು ಹದಗೆಡುವುದೆಂದರಿತು, ಹೆನ್ರಿಯು ಸುಮ್ಮನಾದನು; ಮತಾಧಿಕಾರಿಗಳ ಕ್ರಿಮಿನಲ್ ಅಪರಾಧಗಳು ಮೊದಲಿ ನಂತೆಯೇ ಬಿಷಪ್ ಮತ್ತು ಆರ್ಚ್‌ಬಿಷಪ್ಪುಗಳ ನ್ಯಾಯಸ್ಥಾನಗಳಲ್ಲಿಯೇ ವಿಚಾರಣೆಯಾಗುವುದಕ್ಕೂ, ಅಲ್ಲಿಯ ತೀರ್ಮಾನದ ಮೇಲೆ ಪೋಪರ ಬಳಿಗೆ ಅಪೀಲ್ ಹೋಗುವುದಕ್ಕೂ ಅವನು ಸಮ್ಮತಿಸಬೇಕಾಯಿತು. ಇದರಿಂದ, ಮತಾಧಿಕಾರಿಗಳ ಸ್ವಾತಂತ್ರ್ಯವು ಹೆಚ್ಚುತ್ತಾ ಹೋಯಿತು. ಮುಂದೆ, ಜಾನ್ ದೊರೆಯ ಕಾಲದಲ್ಲಂತೂ (ಆತನು ಪೋಪರಿಗೆ ಅಧೀನನಾದುದರಿಂದ) ಅವರ ಪ್ರತಿಷ್ಠೆಗೆ ಕೊನೆಮೊದಲೇ ಇರಲಿಲ್ಲ. ಅವರೆಲ್ಲರೂ ತಮ್ಮ ಅಧಿಕಾರಿಗಳನ್ನು ತಾವೇ ಆರಿಸಿಕೊಳ್ಳಬಹುದೆಂದು ಜಾನನು ಸಮ್ಮತಿಪಟ್ಟನು. (ಜಾನನ ಕಾಲದಿಂದ ಮುಂದೆ) ಮೂರನೆಯ ಹೆನ್ರಿಯ ಕಾಲದಲ್ಲಿ, ಮತಾಧಿಕಾರಗಳಿಗೆ ಹೊಸದಾಗಿ ಬಂದವರೆಲ್ಲರೂ, ತಮ್ಮ ಮೊದಲನೆಯ ವರ್ಷಾದಾಯವನ್ನು ಪೋಪರಿಗೆ ಕೊಡತಕ್ಕುದೆಂದು ಗೊತ್ತಾಯಿತು. ಹೆಚ್ಚೇಕೆ? 'ರೆಫರ್ ಮೇಷನ್' (Reformation) ಎಂಬ ಧರ್ಮಪರಿಷ್ಕರಣಕಾಲದವರೆಗೂ, ಪೋಪರ ಮತ್ತು ಮತಾಧಿಕಾರಿಗಳ ಸ್ವಾತಂತ್ರ್ಯಕ್ಕೆ ಇದಿರೇ ಇರಲಿಲ್ಲ.

ಮೊದಲನೆಯ ಹೆನ್ರಿ ದೊರೆಯು ಷೈರ್‌ಮೂಟ್ ಮುಂತಾದ ನ್ಯಾಯಸ್ಥಾನ ಗಳನ್ನು ತನ್ನ ವಶದಲ್ಲಿಟ್ಟುಕೊಳ್ಳುವುದಕ್ಕೋಸ್ಕರವಾಗಿ ತನ್ನ ಕಡೆಯ ನ್ಯಾಯಾ ಧಿಪತಿಗಳನ್ನು ಅಲ್ಲಿಗೆ ಕಳುಹಿಸುತ್ತಿದ್ದನೆಂದು ಹಿಂದೆ ಹೇಳಿದೆವಷ್ಟೆ. ಎರಡ ನೆಯ ಹೆನ್ರಿ ದೊರೆಯು ತಾನೂ ಅದೇ ಕ್ರಮವನ್ನು ಆಚರಣೆಗೆ ತರಬೇಕೆಂದು ಎಣಿಸಿ, ೧೧೬೬ ನೆಯ ಇಸವಿಯಲ್ಲಿ ಕ್ಲ್ಯಾರಂಡನ್ ಸಭೆಯಲ್ಲಿ ನಿಬಂಧನೆ

ಯೊಂದನ್ನು ಮಾಡಿದನು. ಅದರಿಂದ ಇಬ್ಬರು ನ್ಯಾಯಾಧಿಪತಿಗಳು ದೇಶದಲ್ಲೆಲ್ಲಾ ಸುತ್ತುತ್ತಾ ಷೈರ್‌ಮೂಟ್ ನ್ಯಾಯಸ್ಥಾನಗಳಿಗೆ ಹೋಗಿ ಅಲ್ಲಿ ವಿಚಾರಣೆಯು ನಡೆಯುವಾಗ ಅಧ್ಯಕ್ಷರಾಗಿ ಕುಳಿತಿರತಕ್ಕದೆಂದು ಗೊತ್ತಾಯಿತು. ೧೧೭೮ ನೆಯ ಇಸವಿಯಲ್ಲಿ ಈ ಕಾರ್ಯಕ್ಕಾಗಿ ಇಬ್ಬರಿಗೆ ಬದುಲು ನಾಲ್ವರು ನ್ಯಾಯಾಧಿಪತಿಗಳು ನಿಯಮಿತರಾದರು. ಇದೂ ಅಲ್ಲದೆ, ನ್ಯಾಯವಿಚಾರಣೆಯು ನಡೆಯುತ್ತಿದ್ದ ಕ್ರಮವೂ ಬಹುಮಟ್ಟಿಗೆ ಪರಿಷ್ಕೃತವಾಯಿತು. ಈತನ ಏರ್ಪಾಡುಗಳಿಂದಲೇ ಈಗಿನ ವಿಚಾರಣೆಯ ಕ್ರಮವು ಪರಿವರ್ತಿತವಾಗಿರುತ್ತದೆ. ರಾಜನ ನ್ಯಾಯಸ್ಥಾನಕ್ಕೂ, ಸ್ಥಳೀಯ ನ್ಯಾಯಸ್ಥಾನಗಳಿಗೂ (Local Courts), ಸರಿಯಾದ ಸಂಬಂಧವಿರುವಂತೆ ಹೆನ್ರಿಯು ಮಾಡಿದ್ದನು. ಇವಲ್ಲದೆ ರಾಜನ ನ್ಯಾಯಸ್ಥಾನದಲ್ಲಿಯೂ ಒಂದು ಬದುಲಾವಣೆಯಾಯಿತು. ಹೆನ್ರಿಯ ಕಾಲಕ್ಕೆ ಮುಂಚೆ ಇದ್ದುದು ಎಕ್ಸ್‌ಚೆಕರ್ ಎಂಬುದೊಂದೇ ದೊರೆಯ ನ್ಯಾಯಸ್ಥಾನ. ೧೧೭೮ ನೆಯ ಇಸವಿಯಲ್ಲಿ ಹೆನ್ರಿಯು ಕೋರ್ಟ್ ಆಫ್ ಕಿಂಗ್ಸ್ ಬೆಂಚ್ (Court of King's Bench) ಎಂಬುದೊಂದು ನ್ಯಾಯಸ್ಥಾನವನ್ನು ಸ್ಥಾಪಿಸಿ, ಈ ಹೊಸನ್ಯಾಯಸ್ಥಾನದ ತೀರ್ಮಾನದ ಮೇಲೆ ದೊರೆಯ ನ್ಯಾಯಸ್ಥಾನಕ್ಕೆ ಅಪೀಲ್ ಹೋಗಬಹುದೆಂದು ಗೊತ್ತುಮಾಡಿದನು. ಆದರೆ ಕಾಲಕ್ರಮದಲ್ಲಿ ಈ ನ್ಯಾಯಸ್ಥಾನದಿಂದ ಶಾಖೋಪಶಾಖೆಗಳು ಒಡೆದುವು. ಇವುಗಳೆಲ್ಲಾ ಕ್ರಮಕ್ರಮವಾಗಿ ದೊರೆಯ ನ್ಯಾಯಸ್ಥಾನದೊಡನೆ ತಮಗಿದ್ದ ಅಧೀನತೆಯನ್ನು ತಪ್ಪಿಸಿಕೊಳ್ಳುತ್ತಾ ಬಂದುವು. ಆದರೂ, ಪ್ರಿವಿ ಕೌನ್ಸಿಲ್ (Privy Council) ಎಂಬ ದೊರೆಯ ನ್ಯಾಯಸ್ಥಾನಕ್ಕೆ ಹಿಂದಿನಂತೆಯೇ ಎಲ್ಲಾ ಅಧಿಕಾರಗಳೂ ಇರಬೇಕೆಂಬ ಸಿದ್ಧಾಂತವೇನೋ ಇತ್ತು. ಕೊನೆಗೆ ಈ ನ್ಯಾಯಸ್ಥಾನಗಳೆಲ್ಲಾ ಪ್ರಬಲವಾಗುತ್ತಾ ಬಂದುವು. ಈಗಿನಕಾಲದಲ್ಲಾದರೋ ಇವುಗಳೆಲ್ಲಾ ಒಟ್ಟುಗೂಡಿ, ಹೈಕೋರ್ಟ್ ಆಫ್ ಜಸ್ಟಿಸ್ (High-Court of Justice) ಎಂಬ ಉಚ್ಚನ್ಯಾಯಸ್ಥಾನವಾಗಿ ಪರಿಣಮಿಸಿರುತ್ತವೆ.

ಇನ್ನು ಹೆನ್ರಿದೊರೆಯು, ಬ್ಯಾರನರೇ ಮುಂತಾದವರ ವಿಚಾರದಲ್ಲಿ ಹೇಗೆ ವರ್ತಿಸಿದನೆಂಬುದನ್ನು ತಿಳಿದುಕೊಳ್ಳೋಣ. ಅವರೆಲ್ಲರೂ ಸ್ಥಳೀಯ ನ್ಯಾಯಸ್ಥಾನ (Local Courts) ವಿಷಯಗಳಲ್ಲಿ ತಲೆಹಾಕಿ, ತಮ್ಮ ಪ್ರಾಬಲ್ಯದ ಮಹಿಮೆಯಿಂದ, ಮೇಲಕ್ಕೆ ಮಾತ್ರ ಅವುಗಳು ಮಾರ್ಪಟ್ಟಿರುವಂತೆ ಕಾಣದಂತೆಯೂ, ಆದರೂ ವಸ್ತುತಃ ಅವುಗಳು ತಮ್ಮ ಅಧೀನವಾಗಿ ಹಿಂದಿದ್ದ ಫ್ಯೂಡಲ್ ನ್ಯಾಯಸ್ಥಾನವನ್ನು ಹೋಲುವಂತೆಯೂ ಮಾಡಿದರು. ಹೆನ್ರಿಯು ಇದನ್ನೆಲ್ಲಾ ತಪ್ಪಿಸುವುದಕ್ಕಾಗಿ ತನ್ನ ಕಡೆಯ ನ್ಯಾಯಾಧಿಪತಿಗಳನ್ನು ಕಳುಹಿಸಿ, ಬ್ಯಾರನರೇ ಮುಂತಾದವರಿಗೆ ಯಾವ ವಿಧವಾದ ರಿಯಾಯತಿಯನ್ನೂ ತೋರಿ

ಸದೇ ಇರಬೇಕೆಂದೂ, ಅವರು ಅಪರಾಧಿಗಳ ಪಕ್ಷವನ್ನು ವಹಿಸಿ ಮಾಡುವ 'ಶಿಫಾರಸು' ಗಳಿಗೆ ನ್ಯಾಯಾಧಿಪತಿಗಳು ಕಿವಿಗೊಡದೇ ಇರಬೇಕೆಂದೂ ಕಟ್ಟಾಜ್ಞೆ ಮಾಡಿದನು; ಹೆನ್ರಿಯು ಬ್ಯಾರನ್ ಮುಂತಾದ ದೊಡ್ಡಮನುಷ್ಯರ ಪ್ರಾಬಲ್ಯವನ್ನ ಡಗಿಸುವುದಕ್ಕಾಗಿ ಇನ್ನೊಂದು ತಂತ್ರವನ್ನು ಮಾಡಿದನು. ಹಿಂದಿನ ದೊರೆಗಳ ಕಾಲದಲ್ಲಿ ಫ್ಯೂಡಲಿಸಮ್ ಪದ್ಧತಿಗೆ ಅನುಸಾರವಾಗಿ ಬದಗಿದ ಸೇನೆಯೂ, ಮೊದಲಿನಿಂದಲೂ ಇದ್ದ ಫೈರ್ಡ್ (Fyrd) ಎಂಬ ಇಂಗ್ಲಿಷ್ ಸೈನ್ಯವೂ, ಯುದ್ಧಕಾಲದಲ್ಲಿ ಅವರಿಗೆ ಬೆಂಬಲವಾಗಿ ನಿಲ್ಲುತ್ತಿದ್ದುವು. ೧೧೫೯ ನೆಯ ಇಸವಿಯಲ್ಲಿ ಫ್ರಾನ್ಸ್‌ದೇಶದವರ ಮೇಲೆ ಇಂಗ್ಲೆಂಡಿನವರು ಯುದ್ಧಕ್ಕೆ ಹೋಗ ಬೇಕಾಯಿತು. ಆಗ ಹೆನ್ರಿಯು ಹೊಸಪದ್ಧತಿಯೊಂದನ್ನು ಆಚರಣೆಗೆ ತರಬೇ ಕೆಂದು ಯೋಚಿಸಿ ಬ್ಯಾರನ್ ಮುಂತಾದ ದೊಡ್ಡಮನುಷ್ಯರೆಲ್ಲರೂ, ಫ್ಯೂಡಲಿ ಸಮ್ ಪದ್ಧತಿಯ ಪ್ರಕಾರ ತನಗೆ ಸೈನ್ಯವನ್ನು ಒಪಗಿಸಿ ಕೊಡುವುದಕ್ಕೆ ಬದುಲಾಗಿ, ಸ್ಕುಟೇಜ್ ಅಥವಾ ಗುರಾಣಿಯತೆರಿಗೆ (Scutage or Shield-money)ಯನ್ನು ಕೊಡಬೇಕೆಂದು ಅಪ್ಪಣೆಮಾಡಿದನು. ಮುಂದೆಯೂ ಯುದ್ಧಕಾಲಗಳಲ್ಲಿ ಇದೇ ಪದ್ಧತಿಯು ಆಚರಣೆಗೆ ಬಂತು. ಇದರಿಂದ ಬ್ಯಾರ ನರೇ ಮುಂತಾದವರು ಎರಡು ವಿಧದಲ್ಲಿ ದುರ್ಬಲರಾದರು: (೧) ತೆರಿಗೆಯನ್ನು ತೆತ್ತು ತೆತ್ತು ಅವರು ಬಡವರಾಗುತ್ತಾ ಬಂದರು; ದೊರೆಯು ಹೆಚ್ಚು ಹೆಚ್ಚಾಗಿ ಧನಿಕನಾಗುತ್ತಾ ಬಂದನು. (೨) ಫ್ಯೂಡಲಿಸಮ್ ಪದ್ಧತಿಯು ಹೀನಸ್ಥಿತಿಗ ಇಳಿಯುತ್ತಾ ಬಂತು. ದೊರೆಯಾದರೋ ಆ ಪದ್ಧತಿಗೆ ಸಂಬಂಧಪಟ್ಟವರಿಂದ ಬಂದ ತೆರಿಗೆಯ ಹಣವನ್ನು ವೆಚ್ಚಮಾಡಿ ತನ್ನ ನಂಬಿಕೆಗೆ ಪಾತ್ರರಾದ ಸೈನಿಕರನ್ನು ನಿಯಮಿಸಿಕೊಂಡು ಬಲಶಾಲಿಯಾಗುತ್ತಾ ಬಂದನು.

ಬ್ಯಾರನರೇ ಮುಂತಾದವರು ಇದನ್ನೆಲ್ಲಾ ನೋಡಿ ಸೈರಿಸಲಾರದೆ, ದೊರೆಯ ಏರ್ಪಾಡುಗಳನ್ನು ನೋಡಿ ಅಸಂತುಷ್ಟರಾಗಿ, ಫ್ರಾನ್ಸ್ ದೇಶದ ದೊರೆಯನ್ನೂ, ಸ್ಕಾಟ್ಲೆಂಡಿನ ದೊರೆಯನ್ನೂ, ಫ್ಲ್ಯಾಂಡರ್ಸಿನ ಕೌಂಟ ನನ್ನೂ (Count of Flanders), ಹೆನ್ರಿಯ ಮಕ್ಕಳನ್ನೂ ತಮ್ಮ ಕಡೆಗೆ ಸೇರಿಸಿಕೊಂಡು ದಂಗೆಯೆದ್ದರು (೧೧೭೩-೧೧೭೪). ದೊರೆಯನ್ನು ನಿಗ್ರಹಿಸ ಬೇಕೆಂಬುದೇ ಅವರ ಉದ್ದೇಶವಾಗಿತ್ತು. ಹೆನ್ರಿಯು ತನ್ನ ಸತ್ಪ್ರಭುತ್ವದ ಫಲವನ್ನು ಈ ಸಂದಿಗ್ಧಸಮಯದಲ್ಲಿ ಅನುಭವಿಸಿದನು. ಪ್ರಜೆಗಳೂ, ಅಧಿಕಾರಿ ಗಳೂ ಅವನ ಪಕ್ಷವನ್ನು ವಹಿಸಿ, ಅವನ ಸಹಾಯಕ್ಕೆ ಬಂದು ದಂಗೆಯನ್ನಡ ಗಿಸಿದರು. ಮುಂದೆ, ಯಾವವಿಧವಾದ ತೊಂದರೆಯೂ ಸಂಭವಿಸದಿರಲೆಂಬ ಉದ್ದೇಶದಿಂದ, ೧೧೮೧ರಲ್ಲಿ 'ಅಸ್ಸೈಸ್ ಆಫ್ ಆರಮ್ಸ್' (Assize of Arms)

ಎಂಬ ನಿಬಂಧನೆಯಿಂದ ಸೈನ್ಯವನ್ನು ಪರಿಷ್ಕರಿಸಿದನು; ಅಲ್ಲದೆ ಸೈನಿಕರ ಆಯುಧಗಳನ್ನೂ ಸರಿಯಾಗಿ ನಿಷ್ಕರ್ಷೆಮಾಡಿದನು.

ಹೆನ್ರಿಯಕಾಲದಲ್ಲಿ ಪ್ರಭುತ್ವಕ್ರಮವು ಅನೇಕಾನೇಕ ನಿಬಂಧನೆಗಳಿಂದ ಬಲಪಟ್ಟಿದೂ ಅಲ್ಲದೆ, ಪ್ರಭುತ್ವಕ್ಕೆ ಸಹಕಾರಿಗಳಾಗಿದ್ದ ಸಾಧನಗಳೂ ವೃದ್ಧಿಯಾದುವು. ಆತನು ಆರ್ಚ್‌ಬಿಷಪ್ಪುಗಳಿಂದಲೂ, ಬಿಷಪ್ಪುಗಳಿಂದಲೂ, ಅಬಟ್ಟುಗಳಿಂದಲೂ, ಅರ್ಲ್, ಬ್ಯಾರನ್ ಮುಂತಾದವರಿಂದಲೂ, ಕೂಡಿದ 'ಗ್ರೇಟ್ ಕೌನ್ಸಿಲ್' (Great Council) ಎಂಬ ಮಹಾಸಭೆಯನ್ನು ಕ್ರಮತಪ್ಪದೆ ಸಭೆಸೇರಿಸುತ್ತಿದ್ದನು. ಪಟ್ಟಣಗಳಿಗೆ ಇನ್ನೂ ಸರಿಯಾದ ಪ್ರಾಮುಖ್ಯತೆಯು ಬಂದಿರಲಿಲ್ಲ. ಅವುಗಳು ಬೇಗಬೇಗನೆ ಅಭಿವೃದ್ಧಿಯಾಗುತ್ತಿದ್ದುವು. ಹೆನ್ರಿಯಕಾಲದಲ್ಲಿ ಇಂಗ್ಲೆಂಡಿಗೂ, ಯೂರೋಪಿನ ಇತರಭಾಗಗಳಿಗೂ ವ್ಯವಹಾರವು ಉಪಕ್ರಮವಾದುದರಿಂದ, ವಾಣಿಜ್ಯವನ್ನು ನೆರವೇರಿಸುತ್ತಿದ್ದವರು ಪ್ರಾಮುಖ್ಯತೆಯನ್ನು ಹೊಂದುತ್ತಿದ್ದರು. ಇವರೆಲ್ಲರೂ ಮೊದಲಿನಿಂದಲೂಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದುದರಿಂದ ಇವರಿಗೆ ಸರಿಯಾದ ಪ್ರತಿನಿಧಿತ್ವವು ದೊರೆಯುವಂತಾಯಿತು.

ಒಟ್ಟಿನಲ್ಲಿ, ಹೆನ್ರಿಯ ಆಳಿಕೆಯು ಫಲದಾಯಕವಾದುದೇ ಆಯಿತು. ಮತಾಧಿಕಾರಿಗಳನ್ನು ಸ್ವಾಧೀನಪಡಿಸಿಕೊಂಡು ಅವರನ್ನು ಪರಿಷ್ಕರಿಸುವ ಬಂದುವಿಚಾರದಲ್ಲಿ ಮಾತ್ರ ಆವನ ಉದ್ಯಮವು ವ್ಯರ್ಥವಾಯಿತು. ಅವರ ಸ್ವಾತಂತ್ರ್ಯವು ಮೊದಲಿಗಿಂತಲೂ ಹೆಚ್ಚಾಯಿತು. ಆದರೆ, ಸೈನ್ಯದ ವಿಷಯದಲ್ಲಿಯೂ, ನ್ಯಾಯಸ್ಥಾನಗಳ ವಿಷಯದಲ್ಲಿಯೂ, ಅವನ ಪ್ರಯತ್ನವು ಫಲಕಾರಿಯಾಯಿತು. ಸ್ಟೀವನ್ ದೊರೆಯ ಕಾಲದ ಅನಾಯಕತ್ವವು ಎಲ್ಲರ ಮನಸ್ಸಿನಲ್ಲಿಯೂ ಇದ್ದುದರಿಂದ, ಹೆನ್ರಿಯು ಜನಾಂಗಕ್ಕೂ ರಾಜನಿಗೂ ಇದಿರುಬಿದ್ದಿದ್ದ ಬ್ಯಾರನ್ ಮುಂತಾದವರನ್ನು ನಿಗ್ರಹಿಸಲು ಅನುಕೂಲವಾಯಿತು. ಯಾವ ಗೋಜಿಗೂ ಹೋಗದೆ ರಾಜಭಕ್ತಿಯಿಂದಿದ್ದ ಪ್ರಜೆಗಳು ಸುರಕ್ಷಿತರಾಗಿದ್ದರು. ಜನಾಂಗವು ಸರಿಯಾಗಿ ದಾರ್ಢ್ಯವನ್ನು ಹೊಂದಿ, ಮುಂದೆ ಹೆನ್ರಿಯ ಮಕ್ಕಳ ಕಾಲದಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡುವುದಕ್ಕೆ ಸಿದ್ಧವಾಯಿತು.

---

## ಏಳನೆಯ ಪ್ರಕರಣ.

### ಜಾನನ ಸನ್ನದು ಮತ್ತು ಪಾರ್ಲಿಮೆಂಟ್ ಸಭೆಯ ಪ್ರಾರಂಭ.

ರಾಜರಕರ್ತವ್ಯವು ಸ್ವಕೀಯವಾದುದೆಂದೂ, ಪ್ರಜೆಗಳ ಪಕ್ಷವಾದುದೆಂದೂ, ಎರಡು ತೆರನಾಗಿರುತ್ತದೆ. ರಾಜನು ತನ್ನ ಸ್ಥಾನವನ್ನು ದೃಢಪಡಿಸಿ

ಕೊಂಡು, ತನ್ನ ಪೆಚ್ಚಕ್ಕೆ ಸಾಕಾಗುವಷ್ಟು ಆದಾಯವು ಬರುವಂತೆಮಾಡಿ ಕೊಂಡು, ತನಗೆ ಸರಿಯಾದ ಪ್ರಾಮುಖ್ಯತೆಯೂ ಮನ್ನಣೆಯೂ ಉಂಟಾಗು ವಂತೆ ನೋಡಿಕೊಳ್ಳುವುದಾದರೆ, ಅಲ್ಲಿಗೆ ದೊರೆಯು ಸ್ವಕೀಯಕರ್ತವ್ಯವನ್ನು ಸಾಧಿಸಿದಂತಾಯಿತು. ಹಿಂದೆಹೇಳಿದ ದೊರೆಗಳ ಕಾಲದಲ್ಲಿ ಈ ಕರ್ತವ್ಯವು ಚೆನ್ನಾಗಿ ಪ್ರತಿಪಾಲಿತವಾಯಿತು. ದೊರೆಯ ಅಧಿಕಾರವು ಹೆಚ್ಚುತ್ತಾಬಂದು, ಆತನು ಮೇಲೆ ತೋರ್ಪಡಿಸಿಕೊಳ್ಳದೇ ಇದ್ದರೂ, ವಸ್ತುತಃ ನಿರಂಕುಶಪ್ರವ ರ್ತಕನಾಗಿಯೇ ಇರುವಂತಾಗಿತ್ತು. ದೊರೆಯ ನಿರಂಕುಶಪ್ರವರ್ತನೆಯನ್ನು ತಡೆಯುವುದು ಬ್ಯಾರನ್ ಮುಂತಾದ ದೊಡ್ಡಮನುಷ್ಯರಿಂದ ಮಾತ್ರವೇ ಸಾಧ್ಯ. ಆದರೆ ಅವರ ಶಕ್ತಿಯು ನಿಗ್ರಹವಾಗಿದ್ದುದರಿಂದಲೂ, ಪ್ರಜೆಗಳೂ ಅಧಿಕಾರಿ ಗಳೂ ದೊರೆಯ ಕಡೆಗೆ ಇದ್ದುದರಿಂದಲೂ, ಇದರಮೇಲೆ, ದೊರೆಯು ಹೊಸದಾಗಿ ಬ್ಯಾರನ್ ಮುಂತಾದ ಕೆಲವು ಪದವಿಗಳನ್ನು ಕಲ್ಪಿಸಿ, ತನ್ನ ಪಕ್ಷದವರಾದ ಸಾಮಾನ್ಯರನ್ನು ಆ ಪದವಿಗಳಿಗೆ ತಂದು, ಅವರ ಸಹಾಯವನ್ನು ಪಡೆದಿದ್ದುದರಿಂದಲೂ, ಆತನ ನಿರಂಕುಶಪ್ರವರ್ತನೆಯನ್ನು ಧ್ವಂಸಮಾಡಬೇ ಕೆಂದಿದ್ದ ಬ್ಯಾರನರಿಂದ ಏನೂ ಸಾಗುವಂತಿರಲಿಲ್ಲ. ಆದುದರಿಂದ ಮೇಲೆ ಸಾಂಕುಶಪ್ರವರ್ತಕನಂತೆ ಕಂಡುಬಂದರೂ, ವಸ್ತುತಃ ಆತನು ನಿರಂಕುಶ ಪ್ರವರ್ತಕನೇ ಆಗಿದ್ದನು. ಇನ್ನು, ದೊರೆಯ ಎರಡನೆಯ ಕರ್ತವ್ಯದ ವಿಚಾರ. ಪ್ರಜೆಗಳಿಗೆ ತಮ್ಮ ಉತ್ತರವಾದಿತ್ವವು ಗೊತ್ತಾದಹಾಗೆಲ್ಲಾ ರಾಜನು ಅವರಿಗೆ ಸ್ವಾತಂತ್ರ್ಯವನ್ನು ಕೊಟ್ಟು, ರಾಜ್ಯದ ಆಡಳಿತಗಳಲ್ಲಿ ಅವರು ಭಾಗಿಗ ಳಾಗುವಂತೆಮಾಡಿ, ಸಾಂಕುಶಪ್ರವರ್ತಕನಾಗಿದ್ದರೆ ಈಕರ್ತವ್ಯವು ನೆರವೇರಿ ದಂತಾಯಿತು. ದೊರೆಯೇ ಈ ಕರ್ತವ್ಯವನ್ನು ಪ್ರತಿಪಾಲಿಸದೇ ಇದ್ದರೂ, ಆತನು ಹಾಗೆ ಮಾಡುವಂತೆ ಪ್ರಜೆಗಳು ಹೇಗೆ ಆತನನ್ನು ನಿರ್ಬಂಧಿಸಿ ದರೆಂಬುದನ್ನು ಇನ್ನು ಮುಂದೆ ವಿವರಿಸುವೆವು. ಇದುವರೆಗೆ, ಪ್ರಜೆಗಳಿಗೆ ತಮ್ಮ ಉತ್ತರವಾದಿತ್ವವು ಗೊತ್ತಾಗಿರಲಿಲ್ಲ. ಇನ್ನುಮುಂದೆ ಅವರು ಅದನ್ನು ಅರಿತುಕೊಂಡು ಸ್ವಾತಂತ್ರ್ಯಕ್ಕಾಗಿ ಹೋರಾಡತೊಡಗಿದರು. ಪ್ರಜೆಗಳೂ ಮತಾಧಿಕಾರಿಗಳೂ ದೊರೆಯ ಪಕ್ಷವನ್ನು ಬಿಟ್ಟು, ಬ್ಯಾರನರೇ ಮುಂತಾದ ದೊಡ್ಡಮನುಷ್ಯರೊಡನೆ ಸೇರಿ, ಸ್ವಾತಂತ್ರ್ಯಕ್ಕಾಗಿ ಹೊಡೆದಾಡತೊಡಗಿದರು. ಹೆನ್ರಿಯ ತರುವಾಯ ಪಟ್ಟಕ್ಕೆಬಂದವರು ಅವನಂತೆಯೇ ವಿವೇಕಿಗಳಾಗಿಯೂ, ಸುಹೃದಯವುಳ್ಳವರಾಗಿಯೂ, ಸಮರ್ಥರಾಗಿಯೂ ಇದ್ದಪಕ್ಷಕ್ಕೆ, ಅವರು ಜನಾಂಗಕ್ಕೆ ಹೆಸರಿಗೆಮಾತ್ರ ಸ್ವಾತಂತ್ರ್ಯವನ್ನು ಕೊಟ್ಟು ತಾವು ವಸ್ತುತಃ ನಿರಂಕುಶಪ್ರವರ್ತಕರಾಗಿರುವುದು ಸಾಧ್ಯವಾಗುತ್ತಿತ್ತು. ಆದರೆ ಹೆನ್ರಿಯ ತರುವಾಯ ಪಟ್ಟಕ್ಕೆ ಬಂದ ಅವನ ಮಕ್ಕಳಾದ ರಿಚರ್ಡನೂ (Richard I).

ಜಾನನೂ (King John) ಅಂತಹವರಾಗಿರಲಿಲ್ಲ. ಆದಕಾರಣ, ಮೇಲೆ ಹೇಳಿದ ಐಕಮತ್ಯವು ಮಾಯವಾಗಿ, ಬ್ಯಾರನರೇಮುಂತಾದ ದೊಡ್ಡ ಮನುಷ್ಯರೂ, ಪ್ರಜೆಗಳೂ, ಮತಾಧಿಕಾರಿಗಳೂ ಒಂದಾಗಿ ಸೇರಿ ದೊರೆಯ ನಿರಂಕುಶ ಪ್ರವರ್ತನೆಗೆ ಪ್ರತಿಭಟಿಸಿ ನಿಲ್ಲುವಂತಾಯಿತು. ಇದು ಹೆನ್ರಿಯ ಮರಣಾನಂತರ ಪಟ್ಟಕ್ಕೆ ಬಂದ ರಿಚರ್ಡನ ಕಾಲದಲ್ಲಿ ಅಂಕುರಿಸಿ ಜಾನನ ಕಾಲದಲ್ಲಿ ಮತ್ತಷ್ಟು ವೃದ್ಧಿಯಾಯಿತು.

ಕೆಲವು ವಿಚಾರಗಳಲ್ಲಿ ರಿಚರ್ಡನೂ ಸ್ಟೀವನ್ನಿನಂತೆಯೇ ಇದ್ದನು. ಅವನು ಸುಂದರನಾಗಿಯೂ, ಸಮರದಲ್ಲಿ ಬಹಳ ಸಾಹಸಿಯಾಗಿಯೂ, ರಾಜ್ಯಭಾರದಲ್ಲಿ ಉಪೇಕ್ಷೆಮಾಡುವವನಾಗಿಯೂ ಇದ್ದನು. ಯಾವನ್ಯೂನತೆಯು ಹೇಗಾದರೂ ಇರಲಿ. ಶೌರ್ಯದ ವಿಷಯದಲ್ಲಿ ರಿಚರ್ಡನಿಗೆ ಸಮಾನರಿರಲಿಲ್ಲ. ಅವನು ಪರಾಕ್ರಮಪುಂಜನಾಗಿದ್ದನೆಂದರೂ ಅತಿಶಯೋಕ್ತಿಯಾಗದು. ಅವನು ಹೀಗಿದ್ದುದರಿಂದಲೇ ಅವನಿಗೆ ಲೈನ್ ಹಾರ್ಟೆಡ್ (Lion-hearted) ಅಥವಾ 'ಸಿಂಹಹೃದಯ' ನೆಂಬ ಬಿರುದು ಬಂದುದು. ಅವನ ಶೌರ್ಯದ ವಿಷಯವಾಗಿ ಸರ್ ವಾಲ್ಟರ್ ಸ್ಕಾಟ್ (Sir Walter Scott) ಎಂಬ ಲೇಖಕನು ತನ್ನ ಗ್ರಂಥದಲ್ಲಿ ವಿಶದವಾಗಿ ವರ್ಣಿಸಿರುವನು. ಕ್ರೈಸ್ತಮತಸ್ಥರು ಪವಿತ್ರ ಭೂಮಿಯೆಂದು ಭಾವಿಸಿರುವ ಪ್ಯಾಲಸ್ಟೈನ್ (Palestine) ಎಂಬ ದೇಶವು ಸ್ಯಾರಸನರೆಂಬ ಮಹಮ್ಮದೀಯರ ವಶವಾಗಿತ್ತು. ಅಲ್ಲಿಗೆ ಯಾತ್ರಾರ್ಥವಾಗಿ ಹೋದ ಕ್ರೈಸ್ತರೆಲ್ಲರೂ ಅನೇಕ ತೆರಿಗೆಗಳನ್ನು ಕೊಡಬೇಕಾಗಿತ್ತು. ಕ್ರೈಸ್ತಮತ ಬಾಹಿರರಾದ ಸ್ಯಾರಸನರ ವಶದಿಂದ ಆ ಪವಿತ್ರಕ್ಷೇತ್ರವನ್ನು ಬಿಡಿಸಿ ಯಾತ್ರಿಕರಿಗೆ ಸೌಲಭ್ಯಗಳನ್ನು ಕಲ್ಪಿಸುವುದು ಕ್ರೈಸ್ತಮತಾವಲಂಬಿಗಳಾದ ಸಮಸ್ತ ದೊರೆಗಳಿಗೂ ಮುಖ್ಯಕರ್ತವ್ಯವೆಂದು ಪೋಪರು ಅಪ್ಪಣೆಮಾಡಿದರು. ಇತರ ದೊರೆಗಳೊಡನೆ ರಿಚರ್ಡನೂ ಸ್ಯಾರಸನರಮೇಲೆ ಯುದ್ಧಕ್ಕೆ ಹೊರಟು, ಭೀಮಪರಾಕ್ರಮದಿಂದ ಕಾದಿದನು. ಅಂತು, ಪ್ಯಾಲಸ್ಟೈನಿನಲ್ಲಿಯೇ ಅವನ ಕಾಲವೆಲ್ಲಾ ಕಳೆಯಿತು. ಈ ವೇಳೆಯಲ್ಲಿ ಅವನು ತನ್ನ ಕೈಕೆಳಗಿನ ಅಧಿಕಾರಿಗಳಿಗೆ ರಾಜ್ಯದ ಆಡಳಿತಗಳನ್ನು ವಹಿಸಬೇಕಾಯಿತು. ಅವರೂ ಹೀಗೆ ಮಾಡಿದುದರಿಂದ ಯಾವಕೆಡುಕೂ ಆಗಲಿಲ್ಲ. ಹೆನ್ರಿಯ ಕಾಲದಿಂದಲೂ ಕೆಲಸಮಾಡಿದ್ದ ಬಹಳ ಸಮರ್ಥರಾದ ಅಧಿಕಾರಿಗಳಿದ್ದರು; ಅವರಿಗೆ ಆಧಿಪತ್ಯವನ್ನು ವಹಿಸಿದುದರಿಂದ ರಾಜ್ಯದ ಆಡಳಿತಗಳು ಸರಿಯಾಗಿ ನೆರವೇರಿದುವು. ರಿಚರ್ಡನು ದೊರೆಯಾಗಿದ್ದ ಹತ್ತುವರುಷ ಕಾಲದಲ್ಲಿ, ಹೆನ್ರಿಯು ಮಾಡಿದ್ದ ಏರ್ಪಾಡುಗಳೆಲ್ಲಾ ದೃಢವಾಗಿ ಬೇರುಬಿಟ್ಟು ನಿಂತುವು.

ರಿಚರ್ಡ್ ದೊರೆಯ ಕಾಲದಲ್ಲಿ ಅನೇಕ ಬದಲಾವಣೆಗಳಾದುವು. ಪಟ್ಟಣಗಳು ಅಭಿವೃದ್ಧಿಯಾಗುತ್ತಾಬಂದುವು. ಪಟ್ಟಣಿಗರು ರೀವ್ ಎಂಬ ಅಧಿಕಾರಿಯ ಇಷ್ಟಕ್ಕೆ ಅನುಸಾರವಾಗಿ ನಡೆದುಕೊಂಡು, ಷೆರೀಫನ ವಶಕ್ಕೆ ಕಂದಾಯವನ್ನು ಕೊಡಬೇಕಾಗಿದ್ದ ಹಿಂದಿನ ಪದ್ಧತಿಯನ್ನು ಸಹಿಸಲಾರದೆ ಹೋದರು. ಆದಕಾರಣ ಅವರೆಲ್ಲರೂ ಸ್ವಾತಂತ್ರ್ಯಕ್ಕಾಗಿ ಹೋರಾಡಿ, ದೊರೆಯಿಂದ ಪೌರಕಾರ್ಯನಿರ್ವಾಹದ ಅಧಿಕಾರವನ್ನು ಪಡೆದುಕೊಳ್ಳಲು ಯತ್ನಿಸಿದರು. ಅವರ ಪ್ರಾರ್ಥನೆಗಳು ಮೂರು ತೆರನಾಗಿದ್ದುವು; (೧) ಪಟ್ಟಣದಲ್ಲಿದ್ದ ಮುಖ್ಯ ವರ್ತಕರೆಲ್ಲರೂ ಸೇರಿ ಪೌರಕಾರ್ಯಗಳನ್ನು ನಡೆಯಿಸಲು ಒಂದು ಸಂಘವನ್ನೇರ್ಪಡಿಸಿಕೊಳ್ಳುವಂತಾಗಬೇಕು. (೨) ಷೆರೀಫನಿಂದ ಉಂಟಾಗುತ್ತಿದ್ದ ಸುಲಿಗೆಯ ತೊಂದರೆಯು ತಪ್ಪುವುದಕ್ಕಾಗಿ ಪಟ್ಟಣಿಗರೆಲ್ಲರೂ ತಮ್ಮ ಕಂದಾಯವನ್ನು ನೇರವಾಗಿ ಸರಕಾರಕ್ಕೇ ಕೊಡುವಂತೆ ಅನುಜ್ಞೆಯಾಗಬೇಕು. (೩) ಪಟ್ಟಣಿಗರು ಹಂಡ್ರೆಡ್ ನ್ಯಾಯಸ್ಥಾನವೇ ಮೊದಲಾದವುಗಳಿಗೆ ಹೋಗಬೇಕಾಗಿದ್ದುದನ್ನು ತಪ್ಪಿಸಿ, ಪಟ್ಟಣದ ನ್ಯಾಯಸ್ಥಾನದಲ್ಲಿಯೇ ತಮ್ಮ ವಿವಾದಗಳನ್ನು ತೀರ್ಮಾನಮಾಡಿಕೊಳ್ಳಲು ಅನುಮತಿಯಾಗಬೇಕು.

ಈ ಪ್ರಾರ್ಥನೆಗಳು ನೆರವೇರಿದುವು. ರೀವ್ ಎಂಬ ಅಧಿಕಾರಿಗೆ 'ಮೇಯರ್' ಎಂಬ ಹೆಸರುಬಂತು. ಅವನು ಪೌರಕಾರ್ಯನಿರ್ವಾಹಕ ಸಭೆಯವರ ಅನುಮತಿಯಿಂದ ಕಾರ್ಯಗಳನ್ನು ನಡೆಯಿಸತಕ್ಕುದೆಂದು ಗೊತ್ತಾಯಿತು. ರಿಚರ್ಡ್ ದೊರೆಯು ಇದನ್ನೆಲ್ಲಾ ಕಾಣಿಸಿ ಬಂದು ಸನ್ನದನ್ನು ಕೊಟ್ಟನು. ಅವನಿಗೆ ಯುದ್ಧಕ್ಕಾಗಿ ಬಹಳ ಹಣವು ಬೇಕಾಗಿತ್ತು. ಧನವನ್ನು ಕೊಡುವುದಾದರೆ ಅವನು ಇಂತಹ ಸನ್ನದುಗಳನ್ನು ಕೊಡಲು ಸಿದ್ಧವಾಗಿದ್ದನು. ತಮ್ಮ ಕೋರಿಕೆಯು ನೆರವೇರುವುದಾದರೆ ಪಟ್ಟಣಿಗರು ಎಷ್ಟು ಹಣವನ್ನು ಬೇಕಾದರೂ ಕೊಡುವವರಾಗಿದ್ದರು. ಆದುದರಿಂದ ರಿಚರ್ಡ್ ದೊರೆಯ ಕಾಲದಲ್ಲಿ ಅನೇಕ ಸನ್ನದುಗಳು ಹುಟ್ಟಿದುವು. ಹಿಂದಿನ ದೊರೆಗಳೂ ಆಗಾಗ ಸನ್ನದುಗಳನ್ನು ಕೊಡುತ್ತಿದ್ದರು. ಆದರೆ ಅವರಿಗೆ ರಿಚರ್ಡಿನಷ್ಟು ಧನದ ಆವಶ್ಯಕತೆಯು ಇರಲಿಲ್ಲ. ಆದಕಾರಣ, ಅವರ ಕಾಲದಲ್ಲಿ ಹುಟ್ಟಿದ ಸನ್ನದುಗಳ ಸಂಖ್ಯೆಯು ರಿಚರ್ಡನ ಕಾಲದಲ್ಲಿಯ ಸನ್ನದುಗಳಷ್ಟು ಹೆಚ್ಚಾಗಿರಲಿಲ್ಲ. ಹೀಗೆ ಸನ್ನದುಗಳನ್ನು ಪಡೆದುಕೊಂಡ ಪಟ್ಟಣಿಗರು ಯಾವವಿಧದಲ್ಲಿಯೂ ಷೆರೀಫನ ಅಧೀನಕ್ಕೆ ಸಿಕ್ಕದೆ, ತಮ್ಮ ವಿವಾದಗಳನ್ನು ತಮ್ಮ ನ್ಯಾಯಸ್ಥಾನದಲ್ಲಿಯೇ ತೀರ್ಮಾನಮಾಡಿಕೊಳ್ಳುತ್ತಾ ಸ್ವಾತಂತ್ರ್ಯದಿಂದಿದ್ದರು. ಅವರೆಲ್ಲರೂ ತಮ್ಮ ಉತ್ತರವಾದಿತ್ವವನ್ನು ಅರಿತುಕೊಂಡರು; ಅದಕ್ಕನುಸಾರವಾಗಿ ನಡೆಯಲು ಅವಕಾಶವೂ ದೊರೆಯಿತು.

ರಿಚರ್ಡ್ ದೊರೆಯು ದೇಶದಲ್ಲಿಲ್ಲದ ವೇಳೆಯಲ್ಲಿ ಅವನ ಮಂತ್ರಿಗಳೇ ರಾಜ್ಯದ ಆಡಳಿತಗಳನ್ನು ನೆರವೇರಿಸುತ್ತಿದ್ದರು. ಇವರಲ್ಲಿ ವಿಲಿಯಂ ಲಾಂಗ್ ಷ್ಯಾಂಪ್ (William Longchamp) ಎಂಬವನೇ ಮೊದಲನೆಯವನಾಗಿದ್ದನು. ದೊರೆಯು ಯಾವಾಗಲೂ ಹೊರಗೆ ಇರುವಂತೆ ಮಾಡಿ ತಾನೇ ರಾಜ್ಯದ ಆಡಳಿತಗಳನ್ನು ನೆರವೇರಿಸಬೇಕೆಂಬ ಆಶೆಯು ಈತನಿಗೆ ಹುಟ್ಟಿತು; ಯುದ್ಧಕ್ಕಾಗಿ ಯಥೇಷ್ಟವಾಗಿ ಧನವನ್ನು ಒದಗಿಸಿಬಿಟ್ಟರೆ, ಸಮರದಲ್ಲಿಯೇ ಆಸಕ್ತಿಯನ್ನಿಟ್ಟುಕೊಂಡಿದ್ದ ರಿಚರ್ಡನು ಇಂಗ್ಲೆಂಡಿಗೆ ಬರುವ ಸಂಭವವೇ ಇರಲಿಲ್ಲವೆಂಬ ಮರ್ಮವು ಆತನಿಗೆ ಗೊತ್ತಿತ್ತು; ಹಾಗೆ ಹಣವನ್ನು ಒದಗಿಸಬೇಕೆಂಬ ಉದ್ದೇಶದಿಂದ ಅವನು ಸುಲಿಗೆಗೆ ಆರಂಭಿಸಿದನು. ಜನರು ಅಸಂತುಷ್ಟರಾಗಿ ದಂಗೆಯೆದ್ದರು. ಬಳಿಕ ಆತನ ಸ್ಥಾನಕ್ಕೆ ವಾಲ್ಟರ್ ಎಂಬಾತನು ನಿಯಮಿತನಾದನು. ಅವನ ತರುವಾಯ ಕ್ಯಾಂಟರ್‌ಬರಿಯ ಆರ್ಚ್‌ಬಿಷಪ್ಪನಾಗಿದ್ದ ಹ್ಯೂಬರ್ಟ್ ವಾಲ್ಟರ್ ಎಂಬಾತನು, ಜೊಫ್ರೆಫಿಟ್ಸ್‌ಪೀಟರ್ (Geoffrey Fitz Peter) ಎಂಬವನೊಡನೆಯೂ, ಎರಡನೆಯ ಹೆನ್ರಿ ದೊರೆಯ ಪತ್ನಿಯೊಡನೆಯೂ ಒಟ್ಟುಗೂಡಿ ಆಧಿಪತ್ಯಮಾಡತೊಡಗಿದನು. ಸ್ವಲ್ಪ ಕಾಲವುಕಳೆದ ಬಳಿಕ ಷಾಲಜನ್ನು (Chaluz) ಮುತ್ತಿದಾಗ, ಆಕಸ್ಮಿಕವಾಗಿ ಬಂದು ತಗುಲಿದ ಬಾಣದಿಂದ ರಿಚರ್ಡ್ ದೊರೆಯು ಮೃತನಾದನು. ಮುಂದೆ ಪಟ್ಟಕ್ಕೆ ಬರುವವರಾರೆಂದು ವಿವಾದವು ಹುಟ್ಟಿತು. ಬಹುಕಾಲಕ್ಕೆ ಮುಂಚೆಯೇ ಮೃತನಾಗಿದ್ದ ರಿಚರ್ಡನ ತಮ್ಮನಮಗನಾದ ಆರ್ಥರ (Arthur) ನೆಂಬ ಬಾಲಕನು ಸಿಂಹಾಸನಕ್ಕೆ ಅಧಿಕಾರಿಯಾಗಿದ್ದನು. ಆದರೂ ಹಿಂದಿನ ಪದ್ಧತಿಯಮೇರೆಗೆ ಪ್ರಾಪ್ತವಯಸ್ಕನೂ ಬಾಲಕನ ಚಿಕ್ಕಪ್ಪನೂ ಆದ ಜಾನನು ಪಟ್ಟಕ್ಕೆ ಬಂದನು. ಜನಗಳಿಗೆ ಹಿತಕರವಾಗುವಂತೆ ಪ್ರಭುತ್ವ ಮಾಡುವುದಾಗಿ ಮಾತುಕೊಟ್ಟು ಸಿಂಹಾಸನವನ್ನೇರಿದನು.

ಮೋಸಮಾಡುವುದರಲ್ಲಿ ಜಾನನು ಬಲುಗಟ್ಟಿಗನಾಗಿದ್ದನು. ನಿಯಮವರಿತು ನಡೆಯುವುದಕ್ಕೂ, ಆತನಿಗೂ ಬಲುದೂರವಿತ್ತು. ಇತರರ ಮನೋಭಾವಗಳಿಗೆ ಅವನು ಲಕ್ಷ್ಯಕೊಟ್ಟದಿನವೇ ಇಲ್ಲ. ಈ ಕಾರಣಗಳಿಂದ ಅವನ ದ್ವೇಷಿಗಳು ಒಬ್ಬರಾದಮೇಲೆ ಮತ್ತೊಬ್ಬರಂತೆ ಹೆಚ್ಚುತ್ತ ಬಂದರು. ಅವನಿಗೆ ಪಟ್ಟವಾಗಿ ಹದಿನೈದು ವರುಷಗಳು ತುಂಬುವುದರೊಳಗಾಗಿ ನಾರ್ಮಂಡಿಯು ಅವನ ಕೈಬಿಟ್ಟುಹೋಯಿತು; ಅವನ ತಾಯಿಯ ಕಡೆಯಿಂದ ದೊರೆತಿದ್ದ ದೇಶಗಳೂ ಅವನ ಆಳಿಕೆಯಿಂದ ಸಡಿಲಿಹೋದುವು; ಮತಾಧಿಕಾರಿಗಳಿಗೆ ಅವನಲ್ಲಿ ದ್ವೇಷವು ಹುಟ್ಟಿತು; ಬ್ಯಾರನರೇ ಮುಂತಾದವರಿಗೆ ಅವನ ಆಳಿಕೆಯಿಂದ ಜುಗುಪ್ಸೆಯುಂಟಾಯಿತು.

ನಾರ್ಮಂಡಿಯು ಹೋದುದರಿಂದ ಆಗ್ಗೆ ನಷ್ಟವಾದಂತೆ ತೋರಿ ಬಂದರೂ, ಒಟ್ಟಿನಲ್ಲಿ ಇದರಿಂದ ಜನಾಂಗಕ್ಕೆ ಆನುಕೂಲ್ಯವುಂಟಾಯಿತು: (೧) ಪ್ರಭುತ್ವ ಮಾಡುವವರು ಇಂಗ್ಲೆಂಡಿನ ಯೋಗಕ್ಷೇಮವೊಂದರಲ್ಲಿಯೇ ಆಸಕ್ತಿಯನ್ನಿಟ್ಟು ಏಕಾಗ್ರತೆಯಿಂದ ಆಡಳಿತಗಳನ್ನು ನಡೆಯಿಸುವಂತಾಯಿತು. (೨) ನಾರ್ಮಂಡಿಯು ಫ್ರಾನ್ಸ್ ದೇಶಕ್ಕೆ ಸೇರಿತ್ತು. ಅದು ಕೈಬಿಟ್ಟು ಹೋದೊಡನೆಯೇ, ಇಂಗ್ಲೆಂಡಿನಲ್ಲಿಯೂ ಫ್ರಾನ್ಸಿನಲ್ಲಿಯೂ ಭೂಪ್ರದೇಶಗಳನ್ನು ಪಡೆದುಕೊಂಡಿದ್ದ ಬ್ಯಾರನರು ಈ ಎರಡರಲ್ಲಿ ಯಾವುದಾದರೂ ಬಂದುದೇಶದ ಆಸ್ತಿಯನ್ನು ಬಿಟ್ಟುಬಿಡಬೇಕಾಯಿತು. ಇವರಲ್ಲಿ ಅನೇಕರು ತಮಗೆ ನಾರ್ಮಂಡಿಯಲ್ಲಿದ್ದ ಅಲ್ಪಸ್ವಲ್ಪ ಆಸ್ತಿಯನ್ನು ಬಿಟ್ಟು ಇಂಗ್ಲೆಂಡಿನಲ್ಲಿ ತಮಗಿದ್ದ ಹೆಚ್ಚು ಭೂಪ್ರದೇಶಗಳನ್ನೇ ರೂಢಿಸಿ, ಇಂಗ್ಲೆಂಡಿನ ಅಭಿವೃದ್ಧಿಯಲ್ಲಿಯೇ ಪೂರ್ಣಾಸಕ್ತಿಯನ್ನಿಡಬೇಕಾಯಿತು. (೩) ಈಗ ಇಂಗ್ಲಿಷ್ ಜನಾಂಗಕ್ಕೆ ವಿದೇಶೀಯರ ಸಂಬಂಧವು ತಪ್ಪಿಹೋದುದರಿಂದ, ಅವರ ಸ್ವದೇಶಾಭಿಮಾನವು ಹೆಚ್ಚಿ ವಿದೇಶೀಯರನ್ನು ಕಂಡರೆ ಆಗದಂತಾಯಿತು.

ಇಂಗ್ಲೆಂಡಿನ ದೊರೆಗೆ ಫ್ರಾನ್ಸ್‌ದೇಶದಲ್ಲಿಯ ಪಾಯ್ಟೊ ಎಂಬ ಪ್ರದೇಶವು ಸೇರಿತ್ತು. ಅಲ್ಲಿಯವರಲ್ಲಿ ಜಾನನಿಗೆ ಬಹಳ ವಿಶ್ವಾಸವಿತ್ತು. ಇಂಗ್ಲೆಂಡಿನವರು ಇದನ್ನು ನೋಡಿ ಸಹಿಸಲಾರದೆಹೋದರು. ಆದುದರಿಂದ ಅವರಿಗೆ ದೊರೆಯ ವಿಷಯದಲ್ಲಿ ಅಸಂತುಷ್ಟತೆಯು ಹುಟ್ಟಿತ್ತು. ಜಾನನಿಗೂ ಮತಾಧಿಕಾರಿಗಳಿಗೂ ಜಗಳ ಹುಟ್ಟಿದಾಗ, ಮೊದಲೇ ಅಸಂತುಷ್ಟರಾಗಿದ್ದ ಪ್ರಜೆಗಳು ಅವನ ಪಕ್ಷವನ್ನು ವಹಿಸದೇಹೋದರು. ಪ್ರಜೆಗಳೂ, ಬ್ಯಾರನರೂ, ಮತಾಧಿಕಾರಿಗಳೂ ಒಂದಾದರು. ಆದುದರಿಂದ ಜಾನನು ಮತಾಧಿಕಾರಿಗಳನ್ನು ತನ್ನ ವಶವರ್ತಿಗಳಾಗಿ ಮಾಡಿಕೊಳ್ಳುವುದು ಅಸಾಧ್ಯವಾಗಿ, ಅವನೇ ಪೋಪರಿಗೆ ಅಧೀನನಾಗಬೇಕಾಗಿಬಂತು. ಕ್ಯಾಂಟರ್‌ಬರಿಯ ಆರ್ಚ್‌ಬಿಷಪ್ ಕೆಲಸವು ತೆರವಾಯಿತು. ಅದಕ್ಕೆ ಬೇರೊಬ್ಬನನ್ನು ನೇಮಿಸುವ ವಿಷಯದಲ್ಲಿ ವಿವಾದವುಹುಟ್ಟಿತು. ಪೋಪರು ತಮ್ಮ ಪಟ್ಟಣದಲ್ಲಿ (ರೋಮ್ ನಗರ)ಮುಖ್ಯಸ್ಥಾನದಲ್ಲಿದ್ದ ಸ್ಟೀವನ್ ಲ್ಯಾಂಗ್‌ಟನ್ (Stephen Langton) ಎಂಬಾತನನ್ನು ಕ್ಯಾಂಟರ್‌ಬರಿಯ ಆರ್ಚ್‌ಬಿಷಪ್ ಕೆಲಸಕ್ಕೆ ನಿಯಮಿಸಬೇಕೆಂದು ಹೇಳಿದುದಕ್ಕೆ ಜಾನನು ಸಮ್ಮತಿಸಲಿಲ್ಲ. ಪೋಪರು ಕುಪಿತರಾಗಿ ಇಂಗ್ಲೆಂಡಿನಲ್ಲಿ ಯಾವ ಮತಕರ್ಮವನ್ನೂ ನಡೆಯಿಸಕೂಡದೆಂದು ಅಲ್ಲಿಯ ಮತಾಧಿಕಾರಿಗಳಿಗೆ ಅಪ್ಪಣೆ ಮಾಡಿದರು. ಆದರೂ ಜಾನನು ಬಗ್ಗಲಿಲ್ಲ. ಅಲ್ಲದೆ ಅದೇ ಸಮಯವೆಂದರಿತು ಮತಾಧಿಕಾರಿಗಳ ಸ್ವತ್ತನ್ನೆಲ್ಲಾ ಕೊಳ್ಳಹೊಡೆದನು. ಪೋಪರು ಇದರಿಂದ ಮತ್ತಷ್ಟು ಮುನಿದು ಜಾನನಿಗೆ ಬಹಿಷ್ಕಾರವನ್ನು

ಹಾಕಿದರು. ಬಹಿಷ್ಕಾರವು ಬಂದಬಳಿಕ ಜಾನನು ಮತಬಾಹಿರನಾದಂತಾಯಿತು. ಇಂತಹವನು ಕ್ರೈಸ್ತಮತಾವಲಂಬಿಗಳಿಗೆ ಒಡೆಯನಾಗಿರಕೂಡದೆಂದೂ, ಆದುದರಿಂದ ಅವನನ್ನು ಸಿಂಹಾಸನದಿಂದ ತಳ್ಳಬೇಕೆಂದೂ ಫ್ರಾನ್ಸಿನ ದೊರೆಯಾದ ಫಿಲಿಫ್ಆಗಸ್ಟಸ್ ಎಂಬಾತನಿಗೆ ಪೋಪರು ನಿರೂಪವನ್ನು ಕಳುಹಿಸಿದರು. ಜಾನನನ್ನು ಸಿಂಹಾಸನದಿಂದ ತಳ್ಳಿ ತಾನು ಇಂಗ್ಲೆಂಡಿನ ದೊರೆಯಾಗಲು ಅವಕಾಶವು ಸಿಕ್ಕಿತೆಂದು ಅವನು ಹಿಗ್ಗಿದನು. ಅಷ್ಟರಲ್ಲಿ ಜಾನನು ತನಗೆ ಸಂಭವಿಸುವುದರಲ್ಲಿದ್ದ ಅಪಾಯವನ್ನರಿತುಕೊಂಡು ಪೋಪರಿಗೆ ವಿಧೇಯತೆಯನ್ನು ತೋರಿಸಿ ಬಹಿಷ್ಕಾರದಿಂದ ಮುಕ್ತನಾದನು. ಪೋಪರೇ ತನಗೆ ರಾಜ್ಯಾಧಿಪತ್ಯವನ್ನು ಕೊಟ್ಟಿರುವರೆಂಬ ಅಂಶವನ್ನು ತೋರ್ಪಡಿಸುವುದಕ್ಕಾಗಿ, ಅವರ ಪ್ರತಿನಿಧಿಯವಶಕ್ಕೆ ಕಿರೀಟವನ್ನೊಪ್ಪಿಸಿ ಅವನ ಕೈಯಿಂದ ಅದನ್ನು ತಿರುಗಿ ತೆಗೆದುಕೊಂಡು ಕಪಟವೇಷವನ್ನು ತಾಳಿದನು. ಪೋಪರಿಗೆ ವರುಷವರುಷವೂ ಪಗುದಿಯನ್ನು ಕೊಡಲೊಪ್ಪಿದನು. ಇಲ್ಲಿಂದ ಮುಂದೆ ಪೋಪರು ಅವನಲ್ಲಿ ಮಿತ್ರಭಾವದಿಂದ ನಡೆದುಕೊಂಡರು; ಇಂಗ್ಲೆಂಡಿನ ಮತಾಧಿಕಾರಿಗಳಿಗೆ ಕೆಡಕು ಮಾಡಲು ಯತ್ನಿಸಿದಾಗಲೂ ಕೂಡ ಪೋಪರು ಅವನಿಗೆ ಅನುಕೂಲರಾಗಿದ್ದರು.

ಜಾನನು ಬಹಿಷ್ಕಾರದಿಂದ ಮುಕ್ತನಾದೊಡನೆಯೇ ಫ್ರಾನ್ಸಿನದೊರೆಯ ಆಶೆಯು ಬಯಲಾಯಿತು. ಆತನು ತನ್ನಮೇಲೆ ಕೈಮಾಡಬೇಕೆಂದಿದ್ದನೆಂಬುದನ್ನು ತಿಳಿದು ಜಾನನು ಕ್ರುದ್ಧನಾಗಿದ್ದನು; ಅಲ್ಲದೆ ಫಿಲಿಪ್ಪನಮೇಲಿನ ದ್ವೇಷವನ್ನು ತೀರಿಸಿಕೊಳ್ಳುವುದಕ್ಕಾಗಿ ಅವನ ಮೇಲೆ ನೌಕಾಸೈನ್ಯವೊಂದನ್ನು ಕಳುಹಿಸಿದನು; ಜರ್ಮನಿಯ ಆಟೋ ಚಕ್ರವರ್ತಿಯು ಫ್ರಾನ್ಸನ್ನು ನಿಗ್ರಹಿಸುವನೆಂಬ ನಂಬಿಕೆಯಿಂದ ಅವನಿಗೆ ಸಹಾಯಮಾಡಿದನು. ಫ್ರೆಂಚ್ ದೊರೆಯ ಮೇಲೆ ಕಳುಹಿಸಿದ ನೌಕಾದಳವು ಜಯವನ್ನು ಹೊಂದಿತು. ತನ್ನ ವಿಜಯಯಾತ್ರೆಯನ್ನು ಮತ್ತಷ್ಟು ವಿಸ್ತರಿಸಬೇಕೆಂಬ ಉದ್ದೇಶದಿಂದ, ಫ್ರಾನ್ಸ್‌ದೇಶವನ್ನು ಮುತ್ತುವುದಕ್ಕೆ ಬಂದು ಸೈನ್ಯವನ್ನು ಕಳುಹಿಸಲು ಜಾನನು ಯತ್ನಮಾಡಿದನು. ಬ್ಯಾರನರೇ ಮುಂತಾದ ದೊಡ್ಡಮನುಷ್ಯರು ಇದನ್ನು ಹಾಯುಗೊಡಿಸದೆ ಇಲ್ಲದನೆವಗಳನ್ನು ಹೇಳಿ ಜಾನನಿಗೆ ಸಹಾಯಮಾಡಲು ಒಪ್ಪಲಿಲ್ಲ. ಹೊಸ ಆರ್ಚ್‌ಬಿಷಪ್ಪನಾಗಿದ್ದ ಸ್ಟೀವನ್‌ಲ್ಯಾಂಗ್ಟನನು (Stephen Langton) ಬ್ಯಾರನರೇ ಮುಂತಾದವರೊಡನೆ ಸೇರಿ, ಅವರೆಲ್ಲರೂ ಹಿಂದೆ ಹೆನ್ರಿಯೇ ಮುಂತಾದವರು ಸನ್ನದನ್ನು ಕೊಟ್ಟದ್ದಂತೆಯೇ, ಪ್ರಜೆಗಳ ಸೌಕರ್ಯಕ್ಕಾಗಿ ಜಾನನೂ ಒಂದು ಸನ್ನದನ್ನು ಕೊಡುವಂತೆ ಅವನನ್ನು ಕೇಳಬೇಕೆಂದು ಪ್ರೇರೇಪಿಸಿದನು. ಇಷ್ಟರಲ್ಲಿ, ಜಾನನು ಜರ್ಮನಿಯ ಆಟೋಚಕ್ರವರ್ತಿಯ (Otto the Emperor) ಸಹಾಯಕ್ಕಾಗಿ ತಾನು ಕಳುಹಿಸಿದ್ದ ಸೇನೆಯು

ಬೋವಿನ್ಸ್ ಕದನ (Battle of Bouvines) ದಲ್ಲಿ ಸೋತುಹೋಯಿತೆಂದು ಕೇಳಿ ಪಾಯಿಟೌ (Poitou) ವಿನಿಂದ ಇಂಗ್ಲೆಂಡಿಗೆ ಬಂದನು.

ಜಾನನು ಇಂಗ್ಲೆಂಡಿಗೆ ಬಂದೊಡನೆಯೇ ಮತಾಧಿಕಾರಿಗಳು ಬ್ಯಾರನರ ಪಕ್ಷವನ್ನು ಬಿಟ್ಟು ತನ್ನ ಕಡೆಗೆ ಬರುವಂತೆ ಮಾಡಬೇಕೆಂಬ ಉದ್ದೇಶದಿಂದ ಮತಾಧಿಕಾರಿಗಳು ತಮ್ಮ ಅಧಿಕಾರಿಗಳನ್ನು ತಾವೇ ಆರಿಸಿಕೊಳ್ಳಬಹುದೆಂದು ಅನುಮತಿಯನ್ನು ಕೊಟ್ಟನು. ಈ ಹಕ್ಕನ್ನು ತನ್ನ ಕೈಯಲ್ಲಿ ಉಳಿಸಿಕೊಳ್ಳುವುದಕ್ಕಾಗಿ ಮೊದಲನೆಯ ಹೆನ್ರಿದೊರೆಯು ಆನ್ಸೆಲಮ (Anslem) ನೊಡನೆ ಎಷ್ಟೋ ಹೊಡೆದಾಡಿದ್ದನು. ಜಾನನು ಅದಕ್ಕೆ ಗಮನಕೊಡದೆ, ತಮ್ಮ ತಂದೆಯು ಬೆಕೆಟ್ಟನೊಡನೆ ಹೋರಾಡಿದ್ದುದನ್ನು ಮನಸ್ಸಿಗೆ ತಾರದೆ, ಆ ಹಕ್ಕನ್ನು ಕ್ಷಣಮಾತ್ರದಲ್ಲಿ ಕಳೆದುಕೊಂಡುಬಿಟ್ಟನು. ಅಲ್ಲದೆ ಮತಾಧಿಕಾರಿಗಳಿಗೆ ಅಧೀನನಾದನು; ಮತಯುದ್ಧಕ್ಕೆ (Crusade) ಹೋಗುವುದಾಗಿಹೇಳಿ ದೀಕ್ಷೆಯನ್ನು ವಹಿಸಿ, ಅದರ ಗುರುತಿಗಾಗಿ ಸಿಲುಬೆಯನ್ನು ಸ್ವೀಕರಿಸಿದನು.

ಬ್ಯಾರನರೇ ಮುಂತಾದವರೆಲ್ಲರೂ ತನಗೆ ಅಧೀನರಾಗಿರುವುದಾಗಿ ಪ್ರಮಾಣ ಮಾಡಿಕೊಡಬೇಕೆಂದು, ಜಾನನು ಅವರೆಲ್ಲರನ್ನೂ ಕೇಳಿದನು. ಅನೇಕರು ಇದಕ್ಕೆ ಪ್ರತ್ಯುತ್ತರವಾಗಿ ತಮ್ಮ ಕೈಕೆಳಗಿನವರನ್ನು ಸೇರಿಸಿಕೊಂಡು ಪ್ರತಿಭಟಿಸಿ ನಿಂತರು. ಜಾನನ ತಂದೆಯ ಕಾಲದಿಂದಲೂ ಇದ್ದ ಕೆಲವುಮಂದಿ ಅಧಿಕಾರಿಗಳೂ, ಅವನಮಿತ್ರರಲ್ಲಿ ಕೆಲವರೂ, ಕೊನೆಯವರೆಗೂ ಅವನ ಪಕ್ಷವನ್ನೇ ವಹಿಸಿದರು. ಆದರೂ ಪ್ರಜೆಗಳಲ್ಲಿ ಬಹುಮಂದಿ ತನಗೆ ವಿರೋಧಿಗಳಾಗಿರುವುದನ್ನರಿತು, ತನ್ನ ಹಟದಿಂದ ಪ್ರಯೋಜನವಿಲ್ಲವೆಂದುಭಾವಿಸಿ, ಬ್ಯಾರನರೇ ಮುಂತಾದವರ ಸಲಹೆಗಳಿಗೆ ಒಪ್ಪಿ 'ಮ್ಯಾಗ್ನ ಕಾರ್ಟ' (Magna Charta) ಎಂಬ ದೊಡ್ಡಸನ್ನದನ್ನು ಕೊಟ್ಟನು.

ಈ ಸನ್ನದಿನಲ್ಲಿ ಕಾಣಿಸಿದ್ದ ವಿಚಾರಗಳನ್ನು ಪರಿಶೀಲಿಸುವುದರಿಂದ ಬ್ಯಾರನರೂ, ಮತ್ತು ಪ್ರಜೆಗಳೂ ತಮಗೆ ಒದಗಿದ್ದ ಕಷ್ಟಗಳನ್ನರಿತುಕೊಂಡು ಅವುಗಳನ್ನು ಎಂತಹ ಉತ್ತಮರೀತಿಯಲ್ಲಿ ನಿವಾರಣೆಮಾಡಿಕೊಳ್ಳಲು ಯತ್ನಿಸಿದರೆಂಬುದು ಚೆನ್ನಾಗಿ ಗೊತ್ತಾಗುತ್ತದೆ. ಸನ್ನದಿನಲ್ಲಿ ಅನೇಕ ಸಂಗತಿಗಳಿದ್ದುವು ಆದರೂ, ಅವುಗಳಲ್ಲಿ ನಾಲ್ಕು ವಿಚಾರಗಳುಮಾತ್ರವೇ ಪ್ರಭುತ್ವದ ಚರಿತ್ರೆಗೆ ಸಂಬಂಧಪಡುತ್ತವೆ ಅವುಗಳಾವುವೆಂದರೆ:—

I. **ಮತವಿಚಾರ:** (೧) ಮತಾಧಿಕಾರಿಗಳಿಗೆ ಹಿಂದಿನಿಂದ ಬಂದಿದ್ದ ಹಕ್ಕುಗಳೂ ಅವರು ಹೊಸದಾಗಿ ಪಡೆದುಕೊಂಡಿದ್ದ ಹಕ್ಕುಗಳೂ ಎಂದೆಂದಿಗೂ ನಡೆದುಬರತಕ್ಕುದೆಂದು ಗೊತ್ತಾಯಿತು. (೨) ಮತಾ

ಧಿಕಾರಿಗಳಿಗೂ ಸರಕಾರಕ್ಕೂ ಇರಬೇಕಾದ ಸಂಬಂಧವು ನಿರ್ಧರವಾಯಿತು. (೩) ಅವರು ತಮ್ಮ ಅಧಿಕಾರಿಗಳನ್ನು ತಾವೇ ಆರಿಸಿಕೊಳ್ಳಬಹುದೆಂದು ದೊರೆಯು ಸಮ್ಮತಿಪಟ್ಟನು. (ಇದುಮಾತ್ರ ಒಂದೇಸಮನಾಗಿ ನಡೆದುಬಂದಿದ್ದರೆ ಈ ಅಧಿಕಾರಿಗಳ ಚುನಾವಣೆಯಲ್ಲಿ ಸರಕಾರದವರು ಅವರನ್ನು ಮಾತನಾಡಿಸುವಂತೆಯೇ ಇರಲಿಲ್ಲ.) ಆದರೆ ಸ್ವಲ್ಪಕಾಲದಲ್ಲಿಯೇ ಪೋಪರು ಈ ವಿಚಾರಕ್ಕೆ ಕೈಹಾಕಿ ಮತಾಧಿಕಾರಿಗಳನ್ನು ನಿಯಮಿಸುವ ಅಧಿಕಾರವನ್ನು ತಾವು ಪಡೆದುಕೊಂಡರು. ಬಳಿಕ ಅವರಿಗೂ, ದೊರೆಗೂ ಪರಸ್ಪರವಾಗಿ ಒಪ್ಪಂದವು ನಡೆದು, ದೊರೆಯು ಮತಾಧಿಕಾರವನ್ನು ಇಂತಹವರಿಗೆ ಕೊಡಬೇಕೆಂದು ಸೂಚಿಸುವುದೂ, ಪೋಪರು ಅದಕ್ಕೆ ಸಮ್ಮತಿಸುವುದೂ ರೂಢಿಗೆ ಬಂತು.

II. **ಫ್ಯೂಡಲಿಸಮ್ ಪದ್ಧತಿಯ ವಿಚಾರ:**—ಈ ವಿಚಾರದಲ್ಲಿ ಮೊದಲನೆಯ ಹೆನ್ರಿದೊರೆಯು ಕರುಣಿಸಿದ ಸನ್ನದಿನಲ್ಲಿದ್ದ ವಿಷಯಗಳೇ ಮತ್ತಷ್ಟು ಅಭಿವೃದ್ಧಿಯಾಗಿ ಜಾನನ ಸನ್ನದಿನಲ್ಲಿಯೂ ಕಾಣಿಸಲ್ಪಟ್ಟವು.

III. **ರಾಜ್ಯದ ಆಡಳಿತದ ವಿಚಾರ:**—ಕಂದಾಯವನ್ನು ಹಾಕುವ ವಿಚಾರದಲ್ಲಿಯೂ, ಗ್ರೇಟ್‌ಕೌನ್ಸಿಲ್ ಸಭೆಯು ಕ್ರಮತಪ್ಪದೆ ನೆರೆಯುವಂತೆ ಮಾಡುವ ವಿಷಯದಲ್ಲಿಯೂ ಕೆಲವು ಮುಖ್ಯವಾದ ಅಂಶಗಳು ಚರ್ಚಿಸಲ್ಪಟ್ಟಿದ್ದುವು. ಗ್ರೇಟ್‌ಕೌನ್ಸಿಲ್ ಸಭೆಯ ಅನುಮತಿಯಿಲ್ಲದೆ ದೊರೆಯು ಯಾವ ತೆರಿಗೆಯನ್ನೂ ಹಾಕಕೂಡದು. ಆದರೆ, ಬೇಗನೆ ಹಣವು ಒದಗಬೇಕಾದ ಸಂದರ್ಭಗಳು ಬಿದ್ದಾಗ, ದೊರೆಯು ತತ್ಕಾಲಿಕವಾಗಿ ಕೆಲವು ತೆರಿಗೆಗಳನ್ನು ಹಾಕಿ, ಹಣವನ್ನು ಬರಮಾಡಿಕೊಳ್ಳಬಹುದು; ತನ್ನ ಹಿರಿಯಮಗನಿಗೆ 'ನೈಟ್' ಪದವಿ (Knighthood) ಯನ್ನು ಕೊಡುವಾಗಲೂ, ಹಿರಿಯಮಗಳಿಗೆ ಪ್ರಥಮ ವಿವಾಹವಾಗುವಾಗಲೂ, ಶತ್ರುರಾಜರಿಗೆ ತಾನು ಸೆರೆಸಿಕ್ಕಿದಾಗ ಅವರಿಗೆ ಹಣವನ್ನು ಕೊಟ್ಟು ತಾನು ಬಿಡುಗಡೆಯನ್ನು ಹೊಂದಬೇಕಾದಾಗಲೂ, ದೊರೆಯು ಈರೀತಿಯಲ್ಲಿ ಹಣವನ್ನು ಪಡೆಯಬಹುದು.

IV. **ನ್ಯಾಯವಿಚಾರ:**—ನ್ಯಾಯನಿಬಂಧನೆಗಳಿಗನುಸಾರವಾದ ವಿಚಾರಣೆಯಾಗಲೀ, ಅಥವಾ ಅವನ ಸಮಾನಸ್ಕಂಧಗ ಅನುಮತಿಯಾಗಲೀ, ಇಲ್ಲದೆ, ಯಾವನನ್ನೂ ಶಿಕ್ಷಿಸಕೂಡದು.

ಗ್ರೇಟ್‌ಕೌನ್ಸಿಲ್ ಸಭೆಯು ಸೇರುವಂತೆ ಮಾಡಲು ಒಂದು ಕ್ರಮವನ್ನು ಅನುಸರಿಸಬೇಕಾಗಿತ್ತು. ಸಭೆಯು ಸೇರುವುದಕ್ಕೆ ನಾಲ್ವತ್ತು ದಿನಗಳಿಗೆ ಮುಂಚೆಯೇ, ಆರ್ಚ್‌ಬಿಷಪ್ಪುಗಳಿಗೂ, ಬಿಷಪ್ಪುಗಳಿಗೂ, ಆಬಟ್ಟುಗಳಿಗೂ,

ಡ್ಯೂಕರಿಗೂ, ಅರ್ಲ್‌ಗಳಿಗೂ, ಪ್ರಮುಖರಾಗಿದ್ದ ಕೆಲವು ಮಂದಿ ಬ್ಯಾರನರಿಗೂ, ಒಬ್ಬೊಬ್ಬರಿಗೆ ಒಂದೊಂದು ಆಹ್ವಾನಪತ್ರವನ್ನು ಕಳುಹಿಸಬೇಕಾಗಿತ್ತು. ಸಾಮಾನ್ಯರಾದ ಬ್ಯಾರನರಿಗೆ ಮಾತ್ರ ಎಲ್ಲರನ್ನೂ ಬರಹೇಳಿ ಒಟ್ಟಿಗೆ ಒಂದು ಆಹ್ವಾನಪತ್ರವನ್ನು ಕಳುಹಿಸಿ, ಷೆರೀಫನು ನ್ಯಾಯಸ್ಥಾನದಲ್ಲಿ ಎಲ್ಲರೂ ಕುಳಿತಿರುವಾಗ ಅದನ್ನು ಓದುವಂತೆ ಅಪ್ಪಣೆಮಾಡಿದರೆ ಸಾಕಾಗಿತ್ತು. ಒಬ್ಬೊಬ್ಬ ಷೆರೀಫನ ಬಳಿಗೂ ಇಂತಹ ಒಂದೊಂದು ಆಹ್ವಾನಪತ್ರವು ಹೋಗುತ್ತಿತ್ತು. ಅವನು ಅದನ್ನು ಬ್ಯಾರನರಿಗೆ ಓದಿಹೇಳುತ್ತಿದ್ದನು. ಏತಕ್ಕೋಸ್ಕರವಾಗಿ ಸಭೆಯು ಸೇರಬೇಕಾಗಿತ್ತೆಂಬುದನ್ನು ಸದಸ್ಯರಿಗೆ ತಿಳಿಸುತ್ತಿದ್ದರು.

ಈ ಸಭೆಯಲ್ಲಿ ಎರಡು ನ್ಯೂನತೆಗಳಿದ್ದುವು: (೧) ಸಾಮಾನ್ಯರಾದ ಬ್ಯಾರನರು ಸಭೆಗೆ ಬರುವುದು ಅನೇಕ ವೇಳೆ ಅಸಂಭವವಾಗಿತ್ತು. ಇಂತಹ ವೇಳೆಯಲ್ಲಿ ಅವರು ತಮ್ಮ ಪ್ರತಿನಿಧಿಗಳನ್ನು ಕಳುಹಿಸುವಂತೆ ಏರ್ಪಡಿಸಿರಲಿಲ್ಲವಾಗಿ, ಅವರ ಅಭಿಪ್ರಾಯವನ್ನು ತಿಳಿದುಕೊಳ್ಳುವುದು ಅವಶ್ಯವಾದಾಗ ಹಾಗೆ ಮಾಡುವುದಕ್ಕಿಲ್ಲದೆ ಬಹಳ ತೊಂದರೆಯಾಗುತ್ತಿತ್ತು. ಅವರ ಪ್ರತಿನಿಧಿಗಳು ಬರುವಂತಾಗಿದ್ದರೆ ಅವರ ಅಭಿಪ್ರಾಯವನ್ನು ತಿಳಿಯಲು ಅನುಕೂಲವಾಗುತ್ತಿತ್ತು. (೨) ತೆರಿಗೆಯ ವಿಚಾರದಲ್ಲಿ, ಪ್ರಾಮುಖ್ಯತೆಯನ್ನು ಹೊಂದುತ್ತಿದ್ದ ಪಟ್ಟಣಿಗರನ್ನು ಈ ಸಭೆಗೆಸೇರಿಸಿ, ಅವರ ಅಭಿಮತವನ್ನು ಪರ್ಯಾಲೋಚಿಸುತ್ತಿರಲಿಲ್ಲ. ಹೀಗೆ ಮಾಡದೆಯೇ ಪಟ್ಟಣಗಳಲ್ಲಿ ತೆರಿಗೆಯನ್ನು ಹಾಕುತ್ತಿದ್ದರು.

ಜಾನನ ಸನ್ನದಿನಿಂದ ಗ್ರೇಟ್‌ಕೌನ್ಸಿಲ್ ಸಭೆಯು ಕ್ರಮತಪ್ಪದೆ ನೆರೆಯುವಂತಾಯಿತು. ಪ್ರಜೆಗಳಿಗೆ ಅವರ ಸಮ್ಮತಿಯಿಲ್ಲದೆ, ಸಿಕ್ಕಿದಂತೆ ತೆರಿಗೆಯನ್ನು ಹಾಕುವುದು ತಪ್ಪಿಹೋಯಿತು. ಸನ್ನದಿನಲ್ಲಿ ಕಂಡ ಸಂಗತಿಗಳನ್ನು ಆಚರಣೆಗೆ ತರುವುದಕ್ಕಾಗಿ 'ಕಮಿಟಿ' (Committee) ಯೊಂದು ಸ್ಥಾಪಿತವಾಯಿತು. ಲಂಡನ್ ನಗರದ ಮೇಯರನೂ, ಬಹಳ ಪ್ರಮುಖರಾಗಿದ್ದ ಬ್ಯಾರನರೂ, ಈ ಕಮಿಟಿಗೆ ಸೇರಿದ್ದರು. ದೊರೆಯ ಕಾರ್ಯಗಳನ್ನು ನೆರವೇರಿಸಲು ಕಮಿಟಿಯು ಸ್ಥಾಪಿತವಾದುದು ಇದೇ ಮೊದಲು. ಈ ಏರ್ಪಾಡಿನಿಂದ ಪ್ರಜೆಗಳಲ್ಲಿ ರಾಜ್ಯನಿರ್ವಹಣಶಕ್ತಿಯು ನೆಲೆಗೊಳ್ಳಲು ಅನುಕೂಲಿಸಿತು.

ಜಾನನು ಸನ್ನದನ್ನೇನೋ ಕೊಟ್ಟನು; ಆದರೆ ಅದಕ್ಕನುಸಾರವಾಗಿ ನಡೆಯಲು ಅವನಿಗೆ ಇಷ್ಟವಿರಲಿಲ್ಲ. ಕೊಟ್ಟ ಮಾತಿಗೆ ತಪ್ಪುವುದು ಮಹಾಪಾಪ. ಈ ಸಂದರ್ಭದಲ್ಲಿ ಜಾನನಿಗೆ ಏನೂ ತೋರಲಿಲ್ಲ. ಆದರೆ ಅವನು ಪೋಪರಿಗೆ ತನ್ನ ಸಂಕಟವನ್ನು ಹೇಳಿಕೊಂಡನು. ವಾಗ್ದಾನಕ್ಕೆ ತಪ್ಪಿದರೂ ಅವನು

ಪಾಪವನ್ನಾಚರಿಸಿದಂತಾಗಲಿಲ್ಲವೆಂದು ಅವರು ಉತ್ತರಕೊಟ್ಟರು. ಅವನಿಗೆ ಬೇಕಾಗಿದ್ದುದೂ ಇದೇ. ಜಾನನ ಮನಸ್ಸು ಹೊರ್ಪಟ್ಟುದನ್ನು ಕೇಳಿ, ಬ್ಯಾರನರೆಲ್ಲರೂ ಕೋಪಗೊಂಡರು; ಅಲ್ಲದೆ, ಸೈನ್ಯವನ್ನು ಜೊತೆಗೊಳಿಸಿ ದೊರೆಗೆ ಪ್ರತಿಭಟಿಸಿ ನಿಲ್ಲಬೇಕೆಂದು ಬಗೆದು, ತಮಗೆ ಸಹಾಯ ಮಾಡಬೇಕೆಂದು ಫ್ರಾನ್ಸಿನ ದೊರೆಗೆ ಬಿನ್ನವಿಸಿದರು. ಅಷ್ಟರಲ್ಲಿ, ಜಾನನು ಮೃತನಾದನು; ಅವರ ಕೋಪವು ಇಳಿದುಹೋಯಿತು. ಅವನೊಬ್ಬನ ಮೇಲೆ ಮಾತ್ರವೇ ಅವರಿಗೆ ದ್ವೇಷವಿತ್ತು. ಅವನ ಮರಣದಿಂದ ಆ ಹಗೆತನವು ಮಾಯವಾಯಿತು. ಬಳಿಕ, ಅವರೆಲ್ಲರೂ ಆದರದಿಂದಲೂ, ಸಡಗರದಿಂದಲೂ ಅವನ ಮಗನಾದ ಹೆನ್ರಿಯೆಂಬ ಬಾಲಕನನ್ನು ಪಟ್ಟಕ್ಕೆ ತಂದರು. ಅವನು ಪ್ರಾಪ್ತವಯಸ್ಕನಾಗುವವರೆಗೂ, ಮುಖ್ಯರಾದ ಕೆಲವು ಮಂದಿ ಅಧಿಕಾರಿಗಳು ಸೇರಿ ಹೆನ್ರಿಯ ಹೆಸರಿನಲ್ಲಿ ಪ್ರಭುತ್ವವನ್ನು (Regency) ನಡೆಯಿಸತೊಡಗಿದರು. ಈ ಆಡಳಿತವು ಚೆನ್ನಾಗಿಯೇ ಸಾಗಿತು. ಕಾಲಾನುಕ್ರಮದಲ್ಲಿ, ಹೆನ್ರಿಯೇ ಸ್ವತಃ ರಾಜ್ಯಭಾರವನ್ನು ವಹಿಸಿದನು. ಬಳಿಕ ಕಾರ್ಯಗಳು ಹದಗೆಟ್ಟುವು.

ಜಾನನಲ್ಲಿದ್ದಂತೆಯೇ ಈ ಮೂರನೆಯ ಹೆನ್ರಿದೊರೆಯಲ್ಲಿಯೂ ಕೊಟ್ಟ ಭಾಷೆಗೆ ತಪ್ಪುವುದೇ ಮುಂತಾದ ಕೆಲವು ದುರ್ಗುಣಗಳು ಇದ್ದುವು. ಇದರ ಜೊತೆಗೆ ಅವನು ದುಂದುಗಾರ; ಅಸಮರ್ಥ; ಕೃತಘ್ನ. ಇಪ್ಪತ್ತಾರು ವರುಷ ಕಾಲ (೧೨೩೨—೧೨೫೮) ಅವನ ಸ್ವಂತಪ್ರಭುತ್ವವು ಸಾಗಿತು; ಆಗ ಸಂಭವಿಸಿದ ದುರ್ದೆಶೆಗಳಿಗೆ ಪಾರವೇ ಇರಲಿಲ್ಲ. ಅವುಗಳಲ್ಲಿ ಮೂರು ಅಂಶಗಳನ್ನು ಪರ್ಯಾಲೋಚಿಸುವುದು ಅವಶ್ಯವಾಗಿರುತ್ತದೆ: (೧) ಪೋಪರು ಮತಾಧಿಕಾರಿಗಳ ಮೇಲೆ ತೆರಿಗೆಗಳನ್ನು ಹಾಕಿದರು. ದೊರೆಯು ಅದಕ್ಕೆ ಸಮ್ಮತಿಸಿದನು. ತೆರಿಗೆಗಳನ್ನು ತೆತ್ತು ತೆತ್ತು ಮತಾಧಿಕಾರಿಗಳ ಕೈ ಬರಿದಾಯಿತು; ಸಂಪತ್ತು ಹೋದ ಬಳಿಕ ಅವರೆಲ್ಲರೂ ದುರ್ಬಲರಾದರು. (೨) ಆಸ್ಥಾನದಲ್ಲಿ ವಿದೇಶೀಯರು ತುಂಬಿಹೋದರು. ಅವರಿಗೆ ವಿಶೇಷ ಮನ್ನಣೆಯೂ, ಧನಸಹಾಯವೂ, ದೊರೆಯುವಂತಾಯಿತು. ಇದನ್ನು ಕಂಡು ಬ್ಯಾರನರೆಲ್ಲರಿಗೂ ಅಸಮಾಧಾನವಾಯಿತು. (೩) ದೊರೆಯು ಕಡೆಗಿದ್ದ ಕೆಲವು ಮಂದಿ ಪ್ರಮುಖರಾದ ಬ್ಯಾರನರು, ಪ್ರಜೆಗಳಿಗೆ ಹೊಸದಾಗಿ ತೆರಿಗೆಯನ್ನು ಹಾಕಿ, ಅದರಿಂದ ದೊರೆಗೆ ವಿಶೇಷ ಹಣವು ಬರುವಂತೆ ಮಾಡಿದರೆ ತಮಗೂ ಧನಲಾಭವಾಗಬಹುದೆಂಬ ಆಶೆಯಿಂದ ಜಾನನ ಸನ್ನದನ್ನು ತಿದ್ದುಪಾಟು ಮಾಡುವ ನೆವದಿಂದ ತೆರಿಗೆಗಳನ್ನು ಹಾಕುವ ವಿಚಾರದಲ್ಲಿಯೂ, ಗ್ರೇಟ್‌ಕೌನ್ಸಿಲನ್ನು ಕ್ರಮತಪ್ಪದೆ ಸಭೆ ಸೇರಿಸುವ ವಿಷಯದಲ್ಲಿಯೂ, ಸನ್ನದಿನಲ್ಲಿದ್ದ ಮುಖ್ಯವಾದ ಅಂಶಗಳನ್ನು ಬಿಟ್ಟು ೧೨೧೬ ರಲ್ಲಿ ಮತ್ತೆ ಸನ್ನದನ್ನು ಪ್ರಚಾರ ಪಡಿಸಿದರು.

ಆದುದರಿಂದ, ಹೆನ್ರಿಯು ಅನೇಕ ತೆರಿಗೆಗಳನ್ನು ಹಾಕಲು ಅನುಕೂಲವಾಯಿತು. ಅವನ ಸುಲಿಗೆಯ ದೆಸೆಯಿಂದ ಪ್ರಜೆಗಳ ಸಂಖ್ಯೆವು ತೊಡೆದು ಹೋಯಿತು.

ಸೈಮನ್ ಡಿ ಮೊಂಟ್‌ಫರ್ಟ್ (Simon de Montfort) ಎಂಬಾತನು ಪ್ರಜೆಗಳ ಕಷ್ಟಕ್ಕಾಗಿ ಮರುಕಗೊಂಡು, ದೊರೆಗೆ ಪ್ರತಿಭಟಿಸಿನಿಂತನು ಆತನು ಲೀಸ್ಟರಿನ (Leicester) ಅರ್ಲನಾಗಿದ್ದುದರಿಂದಲೂ, ಆತನಿಗೆ ದೊರೆಯು ಸಹೋದರಿಯನ್ನು ಕೊಟ್ಟು ವಿವಾಹವಾಗಿದ್ದುದರಿಂದಲೂ, ಆತನು ಬಹಳ ಪ್ರಮುಖನಾಗಿದ್ದನು. ರಾಜ್ಯದಲ್ಲಿ ನಡೆಯುತ್ತಿದ್ದ ಅವ್ಯವಸ್ಥೆಗಳನ್ನು ನಿಲ್ಲಿಸ ಬೇಕೆಂದು ಅವನು ಹೆನ್ರಿಗೆ ವಿಜ್ಞಾಪಿಸಿದನು. ಹೆನ್ರಿಯು ಅದಕ್ಕೆ ಕಿವಿಗೊಡಲಿಲ್ಲ. ಅದರಿಂದ ಅವರಿಬ್ಬರಿಗೂ ಜಗಳವಾಯಿತು. ಇಷ್ಟರಲ್ಲಿ, ಗ್ರೇಟ್ ಕೌನ್ಸಿಲ್ ಸಭೆಯವರು, ಮಂತ್ರಿಗಳನ್ನು ಆರಿಸುವ ವಿಚಾರದಲ್ಲಿ ತಮಗೆ ಅಧಿಕಾರವನ್ನು ಕೊಡಬೇಕೆಂದು ಎರಡುಸಾರಿ ದೊರೆಯನ್ನು ಕೇಳಿದ್ದರು. ಇದರಮೇಲೆ ಸೈಮನನೂ ಜಗಳವಾಡಿದನು.

ಈ ಮಧ್ಯದಲ್ಲಿ, ಹೆನ್ರಿಯು ತನಗೆ ಬಂದ ಅಪಾರವಾದ ಧನವನ್ನೆಲ್ಲಾ ವೆಚ್ಚಮಾಡಿ ಸಾಲವನ್ನೂ ಮಾಡಿದ್ದನು. ಈ ಸಾಲವನ್ನು ತೀರಿಸುವುದಕ್ಕಾಗಿ ಸಭೆಯವರಿಂದ ಹಣವನ್ನು ಪಡೆದುಕೊಳ್ಳುವ ಉದ್ದೇಶದಿಂದ ೧೨೫೮ರಲ್ಲಿ ಅವರನ್ನು ಸಭೆಸೇರಿಸಿದನು. ಈ ವೇಳೆಗೆ ಸಾಮಾನ್ಯರಾದ ಬ್ಯಾರನರ ಪ್ರತಿನಿಧಿಗಳೂ ಸಭೆಗೆ ಬರುವಂತಾಗಿದ್ದುದರಿಂದ, ಅದಕ್ಕೆ ಪಾರ್ಲಿಮೆಂಟ್ ಎಂಬ ಹೆಸರು ಸಲ್ಲುವಂತಾಯಿತು. ಸೈಮನ್ ಡಿ ಮಾಂಟ್‌ಫರ್ಟನೂ, ಗ್ಲಾಸ್ಟರಿನ ಅರ್ಲನೂ (Earl of Gloucester) ೧೨೫೮ರಲ್ಲಿ ನಡೆದ ಪಾರ್ಲಿಮೆಂಟ್ ಸಭೆಗೆ ಮುಖ್ಯಸ್ಥರಾಗಿ ನಿಂತು 'ಪ್ರಾವಿಷನ್ಸ್ ಆಫ್ ಆಕ್ಸ್‌ಫರ್ಡ್' (Provisions of Oxford)ಎಂಬ ಅಭಿಧಾನದಿಂದ ಪ್ರಜೆಗಳ ನೆಮ್ಮದಿಗೆ ಸಾಧಕವಾಗಿ ಮಾಡಬೇಕಾಗಿದ್ದ ಏರ್ಪಾಡುಗಳನ್ನು ಸೂಚಿಸಿದರು. ಅವುಗಳಲ್ಲಿ ಮುಖ್ಯವಾದುವು ಮೂರು: (೧) ಹದಿನೈದುಮಂದಿ ಸದಸ್ಯರಿಂದ ಕೂಡಿದ ಒಂದು ಸಭೆಯನ್ನು ಸ್ಥಾಪಿಸಿ, ದೊರೆಯು ಆ ಸಭೆಯವರ ಅನುಮತಿಯಂತೆ ರಾಜ್ಯದ ಆಡಳಿತಗಳನ್ನು ನೆರವೇರಿಸಬೇಕು. (೨) ಈ ಸಭೆಯವರು ಕಾರ್ಯಗಳನ್ನು ಸರಿಯಾಗಿ ನಡೆಯಿಸುತ್ತಿರುವರೋ ಇಲ್ಲವೋ ಎಂಬಂಶವನ್ನು ಪರಿಶೀಲಿಸುವುದಕ್ಕಾಗಿ ಪಾರ್ಲಿಮೆಂಟ್ ಸಭೆಯು ವರುಷಕ್ಕೆ ಮೂರುಬಾರಿ ನೆರೆಯುವಂತಾಗಬೇಕು. (೩) ಇಪ್ಪತ್ತುನಾಲ್ಕು ಮಂದಿ ಸದಸ್ಯರಿಂದ ಕೂಡಿದ ಒಂದು ಸಭೆಯು ಸ್ಥಾಪಿತವಾಗಿ, ಈ ಸಭೆಯವರು ಪ್ರಜೆಗಳಿಗೆ ಒದಗಿದ್ದ ದುರ್ದೆಶೆಗಳನ್ನು ಹೋಗಲಾಡಿಸಲು ಯತ್ನಿಸಬೇಕು. ಈ ಸಭೆಯು ತತ್ಕಾಲಿಕವಾಗಿ ಮಾತ್ರವೇ ಇರತಕ್ಕುದು. ಈ ಏರ್ಪಾಡುಗಳಿಂದ ಹೆನ್ರಿಯ ನಿರಂಕುಶ

ಪ್ರವರ್ತನೆಗೆ ಅಡ್ಡಿಯಾಯಿತು. ಅವನು ಇವುಗಳಿಗೆ ಸಮ್ಮತಿಸಬೇಕೆಂದು ಪಾರ್ಲಿಮೆಂಟಿನವರು ಕೇಳಿದರು. ದೊರೆಯು ಅದಕ್ಕೆ ಒಪ್ಪಿದನು. ಆದರೂ ತನ್ನ ವಾಗ್ದಾನಕ್ಕನುಸಾರವಾಗಿ ನಡೆಯಕೂಡದೆಂಬ ಉದ್ದೇಶದಿಂದ, ಹಿಂದೆ ತನ್ನ ತಂದೆಯಾದ ಜಾನನು ಮಾಡಿದ್ದಂತೆ, ಈ ಸಂದರ್ಭದಲ್ಲಿ ತನ್ನ ಮಾತನ್ನು ನಡೆಯಿಸದೇ ಇರುವುದು ದೋಷವಲ್ಲವೆಂದು ಪೋಪರಿಂದ ಶ್ರೀಮುಖವನ್ನು ತರಿಸಿದನು. ಇದರಿಂದ ಅವನಿಗೂ ಪ್ರಜೆಗಳಿಗೂ ದ್ವೇಷವು ಹುಟ್ಟಿತು. ಫ್ರಾನ್ಸಿನ ದೊರೆಯಾದ ಲೂಯಿ (St. Louis of France) ಯನ್ನು ಮಧ್ಯಸ್ಥಕ್ಕೆ ಬರಮಾಡಿ ತನ್ನ ಕಾರ್ಯವನ್ನು ಗೆಲ್ಲಬೇಕೆಂದು ಅವನು ಪ್ರಯತ್ನಮಾಡಿದನು. ಆದರೆ ಅಷ್ಟರಲ್ಲಿ ಇಂಗ್ಲೆಂಡಿನಲ್ಲಿ ಯುದ್ಧಕ್ಕೆ ಆರಂಭವಾಗಿ, ದೊರೆಯ ಪಕ್ಷದವರು ಲ್ಯೂಯಿಸ್ ಕದನ (Lewes)ದಲ್ಲಿ ಸೋತುಹೋದರು. ಹೆನ್ರಿಯು ಸೆರೆ ಸಿಕ್ಕಿದನು.

ಬಳಿಕ, ಸೈಮನ್ ಡಿ ಮಾಂಟ್‌ಫರ್ಟನು(೧೨೬೫)ರಲ್ಲಿ ಪಾರ್ಲಿಮೆಂಟನ್ನು ಸಭೆ ಸೇರಿಸಿದನು. ಈ ಸಾರಿಯೂ ಇನ್ನುಮುಂದೆಯೂ, ದೊಡ್ಡ ಪಟ್ಟಣಗಳ ಮತ್ತು ಬರೋಗಳ[ ವಿಶೇಷದೊಡ್ಡದಲ್ಲದ ಪಟ್ಟಣಕ್ಕೆ ಬರೋ ಎಂದು ಹೆಸರು] ಪ್ರತಿನಿಧಿಗಳೂ ಸಭೆಗೆ ಬರುವಂತಾಯಿತು. ಸಾಮಾನ್ಯವಾದ ಬ್ಯಾರನರ ಪ್ರತಿನಿಧಿಗಳು (೧೨೫೪) ನೆಯ ಇಸವಿಯಿಂದಲೇ ಸಭೆಗೆ ಬರುವಂತಾಗಿತ್ತು. ಈ ಪ್ರತಿನಿಧಿತ್ವವು ಒಬ್ಬೊಬ್ಬ ದೊರೆಯ ಕಾಲದಲ್ಲಿಯೂ ಸ್ವಲ್ಪ ಸ್ವಲ್ಪ ಅಭಿವೃದ್ಧಿಯಾಗಿ, ಕೊನೆಗೆ ಈ ಸ್ಥಿತಿಗೆ ಬಂತು.

ಪಟ್ಟಣಿಗರು ದಿನದಿನವೂ ಅಭಿವೃದ್ಧಿಯನ್ನು ಹೊಂದಿ ಪ್ರಮುಖರಾಗುತ್ತಿದ್ದರು. ಸೈಮನ್ ಡಿ ಮಾಂಟ್‌ಫರ್ಟನ ಕಾಲದಲ್ಲಿದ್ದಂತಹ ಜನರಂಜಕವಾದ ರಾಜ್ಯಭಾರದಲ್ಲಿ ಅವರ ಪ್ರತಿನಿಧಿಗಳನ್ನು ಪಾರ್ಲಿಮೆಂಟಿಗೆ ಬರಮಾಡಿಕೊಂಡು, ಅವರ ಅನುಮತಿಯಿಂದ ಪಟ್ಟಣಗಳಿಗೆ ಕಂದಾಯವನ್ನು ಹಾಕುವುದು ಅತ್ಯವಶ್ಯವಾಗಿತ್ತು. ಆದುದರಿಂದಲೇ, ೧೨೬೫ರಿಂದ ಅವರು ಪಾರ್ಲಿಮೆಂಟಿಗೆ ಬರುವಂತಾಯಿತು. ಸಣ್ಣ ಸಣ್ಣ ಮತಾಧಿಕಾರಿಗಳ ಪ್ರತಿನಿಧಿಗಳು ಪಾರ್ಲಿಮೆಂಟಿಗೆ ಬರುವಂತಾಗಿರಲಿಲ್ಲ. ಇದೊಂದು ಕೊರತೆಯು ಮಾತ್ರ ಇನ್ನೂ ಉಳಿದುಕೊಂಡಿತ್ತು. ಆದರೂ ಜನಾಂಗದ ಪ್ರತಿನಿಧಿಯಾಗಿ ಪಾರ್ಲಿಮೆಂಟ್ ಸಭೆಯೂ, ಪಾರ್ಲಿಮೆಂಟ್ ಸಭೆಯಿಂದ ಮಂತ್ರಿಗಳ ಚುನಾವಣೆಯೂ ಏರ್ಪಟ್ಟುದರಿಂದ ನಿರಂಕುಶ ಪ್ರವರ್ತನೆಗೆ ಅವಕಾಶವು ತಪ್ಪಿಹೋಯಿತು.

ಹದಿಮೂರನೆಯ ಶತಮಾನದಲ್ಲಿ ಯೂರೋಪ್ ಖಂಡದಲ್ಲೆಲ್ಲಾ ನಿರಂಕುಶಪ್ರವರ್ತನೆಯು ತಪ್ಪುತ್ತಾಬಂದು ಸಾಂಕುಶಪ್ರಭುತ್ವಕ್ರಮವು

ನೆಲೆಗೊಳ್ಳುತ್ತಿತ್ತು; ಇಂಗ್ಲೆಂಡಿನಲ್ಲಾದರೋ, ಹಿಂದಿನಿಂದಲೂ ಇದ್ದು ಈ ಚೀಲಿಚೆಗೆ ತಪ್ಪಿಹೋಗಿದ್ದ ಸಾಂಕುಶಪ್ರಭುತ್ವವು ಹಿಂತಿರುಗುತ್ತಿತ್ತೇ ಹೊರತು, ಹೊಸದಾಗಿ ಯಾವ ಏರ್ಪಾಡೂ ಆದಂತಾಗಲಿಲ್ಲ. ಪಾರ್ಲಿಮೆಂಟ್ ಸಭೆಯು ಹಿಂದಿನ ವಿಟನಾಜಿಮೋಟ್ ಸಭೆಯ ರೂಪಾಂತರವಾಗಿತ್ತು. ತಮಗೆ ಮುಂಚಿನಿಂದಲೂ ಬಂದಿದ್ದು ಕೇಕಾಲ ಕೈಬಿಟ್ಟು ಹೋಗಿದ್ದ ಹಕ್ಕನ್ನು ಮತ್ತೆ ಪಡೆದುಕೊಳ್ಳಬೇಕೆಂಬ ಉದ್ದೇಶದಿಂದ ಪ್ರಜೆಗಳ ಅಭಿಮತಾನುಸಾರ ವಾಗಿ ಪ್ರಭುತ್ವವನ್ನು ನಡೆಯಿಸಬೇಕೆಂದು ಜನರು ಹೋರಾಡತೊಡಗಿದರು.

ಬ್ಯಾರನರಲ್ಲಿ ಅಂತಃಕಲಹಗಳುಂಟಾದುದರಿಂದಲೂ, ರಾಜ್ಯವಾಳುತ್ತಿದ್ದ ಹೆನ್ರಿ ದೊರೆಯನ್ನು ಮೂಲೆಗೆ ಕುಳ್ಳಿರಿಸಿದುದರಿಂದಲೂ, ಸೈಮನ್ ಡಿ ಮೊಂಟ್ ಫರ್ಟಿನ ಉಛ್ರಾಯಸ್ಥಿತಿಯೂ, ಅವನ ಏರ್ಪಾಡುಗಳೂ ಚಿರಕಾಲ ನಿಲ್ಲಲಿಲ್ಲ. ಆತನಿಗೂ, ಮೇಲೆಹೇಳಿದ ಗ್ಲಾಸ್ಟರಿನ ಅರ್ಲಿನ ಮಗನಿಗೂ ಜಗಳವು ಹುಟ್ಟಿತು; ಹೆನ್ರಿಯ ಹಿರಿಯ ಮಗನು ಸೆರೆಮನೆಯಿಂದ ತಪ್ಪಿಸಿಕೊಂಡನು; ಯುದ್ಧವು ಆರಂಭವಾಯಿತು; ಸೈಮನ್ ಡಿ ಮೊಂಟ್‌ಫರ್ಟನು ಇವ್‌ಷ್ಯಾಮ್ ಕದನದಲ್ಲಿ ಸೋತು ರಣರಂಗದಲ್ಲಿ ಮಡಿದುಬಿದ್ದನು; ಹೆನ್ರಿಗೆ ಬಿಡುಗಡೆ ಯಾಗಿ ಅವನ ಪದವಿಯು ಅವನಿಗೆ ದೊರೆಯಿತು.

ಸೈಮನನು ಸಮರಭೂಮಿಯಲ್ಲಿ ಪ್ರಾಣವನ್ನೊಪ್ಪಿಸಿದಮಾತ್ರವೇ ಅವನಜೀವನವು ವ್ಯರ್ಥವಾಯಿತೆಂದು ಹೇಳಲಾಗದು. ಆ ಮಹಾಪುರುಷನ ಪ್ರಯತ್ನಗಳಿಂದ ಅನೇಕ ಫಲಗಳು ದೊರೆತುವು. ಇಂಗ್ಲೆಂಡಿನಲ್ಲಿ ವಿದೇಶೀಯರ ಪ್ರಾಬಲ್ಯವು ಅಡಗಿಹೋಯಿತು, ದೊರೆಯು ಪೋಪರಿಗೆ ಅಧೀನನಾಗಿರುವುದು ತಪ್ಪಿಹೋಯಿತು; ಪಾರ್ಲಿಮೆಂಟ್ ಸಭೆಯ ಅನುಮತಿಯಿಲ್ಲದೆ ತೆರಿಗೆಗಳನ್ನು ಹಾಕುವುದೇಆಗಲಿ, ನ್ಯಾಯನಿಬಂಧನೆಗಳನ್ನು ಮಾಡುವುದೇಆಗಲಿ ಅಥವಾ ಮುಖ್ಯವಾದ ಅಧಿಕಾರಿಗಳನ್ನು ನಿಯಮಿಸುವುದೇ ಆಗಲಿ ಸಂಪೂರ್ಣವಾಗಿ ನಿಂತುಹೋಯಿತು. ಈ ಏರ್ಪಾಡುಗಳು ಹೆಚ್ಚು ಕಾಲ ನಿಲ್ಲಲಿಲ್ಲವೆಂಬುದೇನೋ ನಿಜ; ಆದರೂ, ಹೀಗಾದುದಕ್ಕೆ ಸೈಮನನು ಉತ್ತರವಾದಿಯಲ್ಲ. ಯಾವುದು ಹೇಗಾದರೂ ಇರಲಿ. ಆ ಮಹಾಪುರುಷನು ಸಾಂಕುಶಪ್ರವರ್ತನೆಯನ್ನು ನೆಲೆಗೊಳಿಸುವುದಕ್ಕೆ ಸಾಧಕವಾದ ಮುಖ್ಯಮಾರ್ಗವನ್ನು ತನ್ನ ದೇಶ ಬಾಂಧವರಿಗೆ ತೋರಿಸಿದನು. ಇದಕ್ಕಾಗಿ ಆತನ ಹೆಸರು ಇಂಗ್ಲೆಂಡಿನ ಇತಿಹಾಸದಲ್ಲಿ ಎಂದೆಂದಿಗೂ ಪ್ರಕಾಶಿಸುವುದು.

---

## ಎಂಟನೆಯ ಪ್ರಕರಣ.

### ಮೊದಲಿನ ಮೂವರು ಎಡ್ವರ್ಡ್ ದೊರೆಗಳೂ ಪಾರ್ಲಿಮೆಂಟ್ ಸಭೆಯಸ್ಥಿತಿಯೂ.

ಹೆನ್ರಿಯ ಕಾಲಾನಂತರ ಅವನ ಹಿರಿಯ ಮಗನಾದ ಎಡ್ವರ್ಡನು ಪಟ್ಟಕ್ಕೆ ಬಂದನು. ಈ ಮೊದಲನೆಯ ಎಡ್ವರ್ಡ್ ದೊರೆಯು ಎರಡನೆಯ ಹೆನ್ರಿದೊರೆಯಂತೆಯೇ ಬಹಳ ಸಮರ್ಥನಾಗಿದ್ದನು. ಈತನು ತನ್ನ ಹಕ್ಕುಗಳಿಗೆ ಗಮನಕೊಟ್ಟು, ಅವುಗಳನ್ನು ಕಾಪಾಡಿಕೊಂಡು, ಪ್ರಜೆಗಳ ನೆಮ್ಮದಿಗೆ ಮನಸ್ಸುಕೊಟ್ಟು ಬಹುಚೆನ್ನಾಗಿ ರಾಜ್ಯವಾಳಿದನು. ಈತನ ಕಾಲದಲ್ಲಿ ರಾಜ್ಯವು ಎಲ್ಲಾ ವಿಚಾರಗಳಲ್ಲಿಯೂ ವೃದ್ಧಿಯನ್ನು ಹೊಂದಿತು.

ಎರಡನೆಯ ಹೆನ್ರಿಯು ಕೈಹಾಕಿದ್ದ ಕಾರ್ಯಗಳಿಗೆಲ್ಲಾ ಎಡ್ವರ್ಡ್ ದೊರೆಯೂ ಮನಸ್ಸುಕೊಟ್ಟನು. ಮತಾಧಿಕಾರಿಗಳು ಬಹುಮಟ್ಟಿಗೆ ದೊರೆಯ ವಶವರ್ತಿಗಳಾಗಬೇಕಾಗಿಬಂತು. ಅವರೆಲ್ಲರಿಗೂ ಫಲವತ್ತಾದ ಅನೇಕ ಭೂಪ್ರದೇಶಗಳು ಕೊಡಲ್ಪಟ್ಟಿದ್ದುವು. ಫ್ಯೂಡಲಿಸಮ್ ಪದ್ಧತಿಗೆ ಸಂಬಂಧಪಟ್ಟ ಬ್ಯಾರನರೇ ಮುಂತಾದವರು ದೊರೆಗೆ ಕ್ಲೃಪ್ತವಾದ ತೆರಿಗೆಗಳನ್ನು ಕೊಡುತ್ತಿದ್ದುದು ಮಾತ್ರವೇ ಅಲ್ಲದೆ, ಮದುವೆಯ ತೆರಿಗೆಯನ್ನು ಕೊಡುವುದು, ಕಷ್ಟಕಾಲದಲ್ಲಿ ಸಹಾಯ ಮಾಡುವುದು, ಇವೇ ಮುಂತಾದ ಹಲವು ಪ್ರತಿಫಲಗಳನ್ನು ಉಂಟುಮಾಡಿಕೊಡುತ್ತಿದ್ದರು. ಆದರೆ ಮತಾಧಿಕಾರಿಗಳಿಂದ ಮಾತ್ರ ಇವುಗಳಾವುವೂ ದೊರೆಯುತ್ತಿರಲಿಲ್ಲ. ಧಾರ್ಮಿಕರಾದವರು ಕಾಣಿಕೆಯಾಗಿ ಭೂಪ್ರದೇಶಗಳನ್ನು ಕೊಡುತ್ತಿದ್ದುದರಿಂದ, ಮತಾಧಿಕಾರಿಗಳಿಗೆ ಮೊದಲೇ ಹೆಚ್ಚಾಗಿದ್ದ ಆಸ್ತಿಯು ಮತ್ತಷ್ಟು ವೃದ್ಧಿಯಾಯಿತು; ಇವರ ಪ್ರಾಬಲ್ಯವು ಹೆಚ್ಚುತ್ತಾ ಬಂತು. ಇದನ್ನು ತಪ್ಪಿಸುವುದಕ್ಕಾಗಿ ಎಡ್ವರ್ಡ್‌ದೊರೆಯು ರಾಜನ ಅಪ್ಪಣೆಯಿಲ್ಲದೆ ಧರ್ಮಾರ್ಥವಾಗಿ ಮತಾಧಿಕಾರಿಗಳಿಗೆ ಯಾರೂ ಭೂಮಿಯನ್ನೊಪ್ಪಿಸಕೂಡದೆಂದು ಸ್ಟ್ಯಾಚ್ಯೂಟ್ ಆಫ್ ಮಾರ್ಟಮೇನ್ (Statute of Mortmain) ಎಂಬ ನಿಬಂಧನೆಯಿಂದ ಅಪ್ಪಣೆಮಾಡಿದನು. ಮತಾಧಿಕಾರಿಗಳ ಪ್ರಾರ್ಥನೆಯ ಮೇರೆ ಅವರಿಗೆ ಸ್ವಾತಂತ್ರ್ಯವನ್ನು ಕಲ್ಪಿಸುವ ಉದ್ದೇಶದಿಂದ ಪೋಪರು, ಮತಾಧಿಕಾರಿಗಳು ತೆರಿಗೆಯನ್ನು ಕೊಡಬೇಕಾದುದಿಲ್ಲವೆಂದು ಅಪ್ಪಣೆಮಾಡಿದರು. ಯಾವಾಗಅವರು ಕಂದಾಯವನ್ನು ಕೊಡಲಿಲ್ಲವೋ, ಆಗ ಸರಕಾರದವರು ಅವರ ಆಸ್ತಿಯನ್ನು ರಕ್ಷಿಸುವುದು,

ದುಷ್ಟರ ಹಾವಳಿಯಿಂದ ಅವರಿಗೆ ಬಿಡುಗಡೆಯನ್ನು ಮಾಡುವುದು ಮುಂತಾದ ಉಪಕಾರಗಳನ್ನು ಮಾಡುವುದಕ್ಕೆ ಕಾರಣವಿಲ್ಲವೆಂದು ಎಡ್ವರ್ಡ್ ದೊರೆಯು ಉತ್ತರಕೊಟ್ಟನು. ಹೀಗಾಗುವುದಾದರೆ, ತಮಗೆ ತಪ್ಪದೆ ಅನರ್ಥಗಳು ಸಂಭವಿಸುವುವೆಂದು ನಿರ್ಧರಿಸಿ ಪೋಪರ ಅಪ್ಪಣೆಗೆ ವಿರೋಧವಿಲ್ಲದಂತೆಯೂ, ದೊರೆಗೆ ಅಸಮಾಧಾನವಾಗದಂತೆಯೂ, ನಡೆದುಕೊಳ್ಳಬೇಕೆಂದೆಣಿಸಿ, ದೊರೆಗೆ ಕಂದಾಯವನ್ನು ಕೊಡುವುದಕ್ಕೆ ಬದುಲಾಗಿ ಪಾರಿತೋಷಿಕಗಳೆಂಬ ಹೆಸರಿನಿಂದ ಹಣವನ್ನು ಕೊಡಲೊಪ್ಪಿದರು. ಹಣವು ಬಂದುದು ಮುಖ್ಯವೇಹೊರತು ಹೆಸರು ಮುಖ್ಯವಲ್ಲವೆಂದರಿತು ಎಡ್ವರ್ಡ್ ದೊರೆಯು ಸುಮ್ಮನಾದನು.

ಎರಡನೆಯ ಹೆನ್ರಿ ದೊರೆಯ ಕಾಲದಂತೆಯೇ ನ್ಯಾಯಾಧಿಪತಿಗಳು ಸಂಚಾರ ಹೊರಟು ಮೊಕದ್ದಮೆಗಳನ್ನು ವಿಚಾರಣೆ ಮಾಡಬೇಕೆಂದು ಎಡ್ವರ್ಡ್ ದೊರೆಯು ಅಪ್ಪಣೆಮಾಡಿದನು. ಮೊದಲು, ಅವರು ಕ್ರಿಮಿನಲ್ ಮೊಕದ್ದಮೆಗಳನ್ನು ಮಾತ್ರವೇ ವಿಚಾರಣೆ ಮಾಡಬೇಕೆಂದು ಏರ್ಪಾಡಾಗಿತ್ತು. ಸ್ವಲ್ಪ ಕಾಲವು ಕಳೆದ ಬಳಿಕ, ಅವರು ಸಿವಿಲ್ ಮೊಕದ್ದಮೆಗಳನ್ನೂ ವಿಚಾರಣೆ ಮಾಡತಕ್ಕುದೆಂದು ಗೊತ್ತಾಯಿತು. ಈ ಪದ್ಧತಿಗಳು ಈಗಲೂ ನಡೆದು ಬರುತ್ತಿವೆ. ಎಡ್ವರ್ಡ್ ದೊರೆಯು ಮತ್ತೊಂದು ಪರಿಷ್ಕರಣವನ್ನು ಮಾಡಿದನು. ಡಿಸ್ಟ್ರಿಕ್ಟ್‌ಗಳಲ್ಲಿ ಕೆಲಸಕಾರ್ಯಗಳನ್ನು ಸರಿಯಾಗಿ ನೆರವೇರಿಸಿ ಅಲ್ಲಿ ಸಮಾಧಾನವು ನೆಲೆಗೊಳ್ಳುವಂತೆ ಮಾಡಲು ನ್ಯಾಯಾಧಿಪತಿಗಳಿಗೆ ಸಹಾಯ ಮಾಡುವುದಕ್ಕಾಗಿ ಕೆಲವು ಅಧಿಕಾರಿಗಳು ನಿಯಮಿತರಾಗಿದ್ದರು. ಅವರ ಅಧಿಕಾರವೇ ಇಂದಿನ 'ಜಸ್ಟಿಸ್ ಆಫ್ ದಿ ಪೀಸ್' (Justice of the peace) ಎಂಬ ರೂಪಾಂತರವನ್ನು ಹೊಂದಿರುತ್ತದೆ.

ಯುದ್ಧಕಾಲದಲ್ಲಿ ಅನುಕೂಲವಾಗುವಂತೆ (ಎರಡನೆಯ ಹೆನ್ರಿಯ ಕಾಲದಂತೆಯೇ) ಸೈನ್ಯವು ಪರಿಷ್ಕೃತವಾಯಿತು.

ಎಡ್ವರ್ಡ್ ದೊರೆಯ ಕಾಲದಲ್ಲಿ ನಡೆದ ಕೆಲಸಗಳಲ್ಲೆಲ್ಲಾ, ಪಾರ್ಲಿಮೆಂಟ್ ಸಭೆಯ ವಿಷಯಕವಾದುದೇ ಅತಿಮುಖ್ಯವಾದುದು. ಈತನ ಕಾಲದಲ್ಲಿ ಸದಸ್ಯರು ಮೊದಲಿಗಿಂತಲೂ ಹೆಚ್ಚು ಮಂದಿಗಳಾದರು. ಆದರೂ ಸದಸ್ಯರ ಸಂಖ್ಯೆಯು ಈಗಿನಷ್ಟಿರಲಿಲ್ಲ; ಅಲ್ಲದೆ ಪಾರ್ಲಿಮೆಂಟ್ ಸಭೆಯು ಪ್ರತಿನಿಧಿಸಭೆ (House of Commons) ಯೆಂದೂ, ಶ್ರೀಮಂತರಸಭೆ (House of Lords) ಯೆಂದೂ ಎರಡು ವಿಭಾಗವಾಗಿರಲಿಲ್ಲ. ಡ್ಯೂಕ್, ಅರ್ಲ್, ಬ್ಯಾರನ್, ಆರ್ಚ್‌ಬಿಷಪ್, ಬಿಷಪ್ ಮುಂತಾದ ದೊಡ್ಡಮನುಷ್ಯರೂ ಸಾಮಾನ್ಯರಾದ ಇತರಪ್ರತಿ

ನಿಧಿಗಳೂ, ಒಟ್ಟಿಗೆ ಕಲೆತುಬಿಡುತ್ತಿದ್ದರು. ಒಂದೊಂದು ವೇಳೆ, ಸದಸ್ಯರು ಕುಳಿತುಕೊಳ್ಳುವುದಕ್ಕೆ ಅವರವರ ಯೋಗ್ಯತೆಯಂತೆ ಸ್ಥಾನಗಳು ಏರ್ಪಡಿಸಲ್ಪಡುತ್ತಿದ್ದುವು.

ಹಿಂದೆ ವಿಟಾನ್ ಸಭೆಗಿದ್ದ ಅಧಿಕಾರಗಳೇ ಈ ಪಾರ್ಲಿಮೆಂಟ್ ಸಭೆಗೂ ಇದ್ದುವು: (೧) ದೊರೆಯನ್ನು ಆರಿಸುವ ಅಧಿಕಾರವು ಜಾನನ ಕಾಲದಿಂದಲೂ ಅವರ ಕೈಬಿಟ್ಟುಹೋಗಿತ್ತು. ಆದರೂ ಮೊದಲನೆಯ ಎಡ್ವರ್ಡ್ ದೊರೆಯ ಮಗನಾದ ಎರಡನೆಯ ಎಡ್ವರ್ಡ್ ದೊರೆಯು ಪಟ್ಟಕ್ಕೆ ಬರಬೇಕಾದಾಗ ಆ ಅಧಿಕಾರವು ಮತ್ತೆ ದೊರಕಿತು. ದೊರೆಯನ್ನು ಆರಿಸಿದಮೇಲೆ ಅವನು ಸಿಂಹಾಸನವನ್ನೇರಿದಾಗ, ಪಾರ್ಲಿಮೆಂಟ್ ಸಭೆಯವರು ತಾವು ರಾಜಭಕ್ತಿಯಿಂದ ಕೂಡಿ ರಾಜನಲ್ಲಿ ವಿಶ್ವಾಸಯುಕ್ತರಾಗಿರುವುದಾಗಿ ಪ್ರಮಾಣ ಮಾಡುತ್ತಿದ್ದರು. (೨) ದೊರೆಯು ನಿಯಮಿಸಿದ್ದ ನ್ಯಾಯಾಧಿಪತಿಗಳು ಮುಖ್ಯರಾಗಿದ್ದುದೇನೋ ನಿಜ. ಆದರೂ ಶ್ರೀಮಂತಸಭೆಯು ಉಚ್ಚನ್ಯಾಯಾಧಿಸತ್ಯಸ್ಥಾನವನ್ನಾಕ್ರಮಿಸಿತ್ತು. (೩) ತೆರಿಗೆಗಳನ್ನು ಹಾಕುವ ವಿಚಾರದಲ್ಲಿ ಪಾರ್ಲಿಮೆಂಟಿನವರ ಸಮ್ಮತಿಯ ಪ್ರಕಾರ ನಡೆಯಬೇಕೆಂಬ ಸಿದ್ಧಾಂತವಿತ್ತು. ಜಾನನ ಸನ್ನದಿನಲ್ಲಿ ಕೂಡ ಈ ವಿಷಯವು ಕಾಣಿಸಿತ್ತು. ಆದರೂ, ಈವಿಚಾರದಲ್ಲಿ ಸಭೆಯವರಿಗೆ ಇನ್ನೂ ಪೂರ್ಣಾಧಿಕಾರವು ಬಂದಿರಲಿಲ್ಲ. ಅದು ಬರುವುದಕ್ಕೆ ಹೆಚ್ಚು ಕಾಲಬೇಕಾಗಿಯೂ ಇರಲಿಲ್ಲ. (೪) ಪಾರ್ಲಿಮೆಂಟ್ ಸಭೆಯು ರಾಜ್ಯದ ಉಚ್ಚನ್ಯಾಯವಿಧಾಯಕಸ್ಥಾನ (Legislative body) ಎಂಬುದು ನಿಸ್ಸಂದೇಹವಾಗಿ ಎಲ್ಲರಿಗೂ ಗೊತ್ತಾಗಿತ್ತು.

೧೨೯೭ನೆಯ ಇಸವಿಯಲ್ಲಿ ಫ್ರಾನ್ಸ್‌ದೇಶಕ್ಕೂ ಇಂಗ್ಲೆಂಡಿಗೂ ಯುದ್ಧವು ಸಂಭವಿಸಿತು. ಎಡ್ವರ್ಡ್ ದೊರೆಯು ತಾನು ಸೈನ್ಯದೊಡನೆ ಫ್ಲ್ಯಾಂಡರ್ಸ್ಸಿಗೆ (Flanders) ಹೋಗುವುದಾಗಿಯೂ ಹೆರ್‌ಫರ್ಡಿನ ಅರ್ಲ್ (Earl of Hereford) ಮೊದಲಾದ ಕೆಲವರು ಗಿಯನ್ನಿಗೆ (Guienne) ಸೈನ್ಯವನ್ನು ತೆಗೆದುಕೊಂಡು ಹೋಗಬೇಕೆಂದೂ ಹೇಳಿದನು. ಅವರು ಅದಕ್ಕೆ ಒಪ್ಪಲಿಲ್ಲ; ಫ್ಯೂಡಲಿಸಮ್ ಪದ್ಧತಿಯ ಪ್ರಕಾರ ತಾವು ದೊರೆಯ ಹಿಂದೆ ಮಾತ್ರವೇ ಹೋಗಬೇಕಾಗಿತ್ತೇ ಹೊರತು ದೊರೆಯು ಒಂದು ಕಡೆಗೆ ಹೋಗಿ ತಾವು ಮತ್ತೊಂದು ಕಡೆಗೆ ಹೊಗತಕ್ಕುದಿಲ್ಲವೆಂದು ಉತ್ತರ ಹೇಳಿದರು. ದೊರೆಯು ವರ್ತಕರ ಉಣ್ಣೆಯ ಸಾಮಾನುಗಳನ್ನೆಲ್ಲಾ ಹಿಡಿದು, ಒಡನೆಯೇ ಸೈನ್ಯವು ಒದಗಬೇಕೆಂದು ಹಟ ಹಿಡಿದನು. ಅನೇಕಮಂದಿ ಬ್ಯಾರನ್ ಮುಂತಾದವರು ಮುಂದುವರಿದು ಬಂದು ಸನ್ನದುಗಳಲ್ಲಿದ್ದ ಪ್ರತಿಯೊಂದು ಅಂಶವನ್ನೂ ಆಚರಣೆಗೆ ತರುವುದಾದರೆ ತಾವು

ಸೈನ್ಯವನ್ನೊದಗಿಸಿ ಸಹಾಯಮಾಡುವುದಾಗಿ ಹೇಳಿದರು. ಸಮಯವು ಸಂದಿಗ್ಧವಾಗಿದ್ದುದರಿಂದ ದೊರೆಯು ಏನನ್ನೂ ಮಾಡಲಾರದವನಾಗಿದ್ದನು. ಅತ್ತ ಸ್ಕಾಟ್ಲೆಂಡಿನ ದೊರೆಯು ಇದಿರುಬಿದ್ದು ಕ್ಯಾಂಬಸ್‌ಕೆನೆತ್ ಕದನದಲ್ಲಿ ಜಯಶಾಲಿಯಾಗಿದ್ದನು. ಫ್ರಾನ್ಸಿನದೊರೆಯು ಯುದ್ಧಕ್ಕೆ ಸಿದ್ಧವಾಗಿದ್ದನು. ಆದುದರಿಂದ, ಎಡ್ವರ್ಡ್ ದೊರೆಯು ತನ್ನ ಮಗನಿಗೆ ಪಾರ್ಲಿಮೆಂಟ್ ಸಭೆಯನ್ನು ಸೇರಿಸಿ, ಆದಷ್ಟು ಮಟ್ಟಿಗೆ ಅನುಕೂಲವಾದ ಒಡಂಬಡಿಕೆಗಳನ್ನು ಮಾಡಿಕೊಳ್ಳುವಂತೆ ಆಜ್ಞಾಪಿಸಿ ತಾನು ಫ್ಲ್ಯಾಂಡರ್ಸಿಗೆ ಹೊರಟುಹೋದನು. ಪಾರ್ಲಿಮೆಂಟ್ ಸಭೆಯನ್ನು ಸೇರಿಸಿದುದಾಯಿತು. ಸನ್ನದುಗಳಲ್ಲಿದ್ದ ಅಂಶಗಳನ್ನು ಪೂರ್ಣವಾಗಿ ಆಚರಣೆಗೆ ತಂದು, ಉಣ್ಣೆಯಮೇಲಿದ್ದ ತೆರಿಗೆಯನ್ನು ಹಾಕಿದ ಹೊರತು ಯಾವ ಪ್ರಯೋಜನವೂ ಇರಲಾರದೆಂಬುದು ಗೊತ್ತಾಯಿತು. ದೊರೆಯು ಪ್ರಜೆಗಳ ಸಮ್ಮತಿಯಿಲ್ಲದೆ ಯಾವತೆರಿಗೆಯನ್ನೂ ಹಾಕಕೂಡದೆಂದೂ, ಯಾವ ವಿಧವಾದ ಹೊಸಸಹಾಯವನ್ನಾಗಲೀ ನಜರನ್ನಾಗಲೀ ಪಡೆಯಕೂಡದೆಂದೂ, ಹಿಂದಿನಿಂದ ಪದ್ಧತಿಯು ಇದ್ದು ಅದಕ್ಕನುಸಾರವಾಗಿ ಬರುತ್ತಿದ್ದ ಆದಾಯವನ್ನು ಮಾತ್ರವೇ ತೆಗೆದುಕೊಂಡು, ಅದನ್ನು ಪ್ರಜೆಗಳ ಹಿತಕ್ಕಾಗಿ ವೆಚ್ಚಮಾಡಬೇಕೆಂದೂ, ಪಾರ್ಲಿಮೆಂಟಿನವರು ಮುಷ್ಕರ ಹಿಡಿದರು. ಎಡ್ವರ್ಡ್ ದೊರೆಯು ಬೆಲ್ಜಿಯಮಿನಲ್ಲಿ ಘೆಂಟ್ (Ghent) ನಗರದಲ್ಲಿದ್ದನು. ತಾನು ಪಾರ್ಲಿಮೆಂಟಿನವರ ಕೋರಿಕೆಯನ್ನು ನೆರವೇರಿಸುವುದಾಗಿ ಅಲ್ಲಿಂದಲೇ ಉತ್ತರವನ್ನು ಕಳುಹಿಸಿದನು. ಮತ್ತೆ ೧೩೦೧ ರಲ್ಲಿ ಲಿಂಕನ್ ನಗರದಲ್ಲಿ ಪಾರ್ಲಿಮೆಂಟ್ ಸಭೆಯು ನೆರೆದಾಗ ಅವನು ತನ್ನ ವಾಗ್ದಾನವನ್ನು ನೆರವೇರಿಸಿದನು. ೧೩೬೦ ರಲ್ಲಿ ವಿಧಿಸಿದ ನಿಬಂಧನೆಯಿಂದ ವರ್ತಕರಾಗಲಿ ಇತರರಾಗಲಿ ಉಣ್ಣೆಯ ಮೇಲೆ ತೆರಿಗೆಯನ್ನು ಹಾಕುವುದಕ್ಕೆ ಓಟನ್ನು (Vote) ಎಂದರೆ ಸಮ್ಮತಿಪತ್ರವನ್ನು ಕೊಡಕೂಡದೆಂದು ಗೊತ್ತಾಯಿತು. ಮೂರನೆಯ ರಿಚರ್ಡಿನ ಕಾಲದವರೆಗೂ ತೆರಿಗೆಯ ವಿಚಾರದಲ್ಲಿ ಈ ನಿಬಂಧನೆಗಳೆಲ್ಲಾ ಆಚರಣೆಯಲ್ಲಿದ್ದುವು.

ಹೀಗೆ, ಪಾರ್ಲಿಮೆಂಟ್ ಸಭೆಗೆ ಮುಖ್ಯವಾದ ಅಧಿಕಾರಗಳೆಲ್ಲಾ ಬಂದುವು. ಮೊದಲನೆಯ ಎಡ್ವರ್ಡ್ ದೊರೆಯ ಕಾಲದಲ್ಲಿ ರಾಜ್ಯದ ಆಳಿತದ ವಿಚಾರಗಳಲ್ಲಿ ಪಾರ್ಲಿಮೆಂಟ್ ಸಭೆಗೆ ವಿಶೇಷ ಪುರಸ್ಕಾರವು ದೊರೆಯಿತು. ಆತನು ನಿಬಂಧನೆಗಳನ್ನು ಮಾಡುವಾಗಲೂ, ದೇಶೀಯವಿದೇಶೀಯವಿಚಾರಗಳಲ್ಲಿ ತಾನು ಹೇಗೆ ವರ್ತಿಸಬೇಕಾಗಿತ್ತೆಂಬುದನ್ನು ನಿರ್ಧರಿಸುವಾಗಲೂ, ಆ ಸಭೆಯವರನ್ನೇ ನಿಯಮಿಸುತ್ತಿದ್ದನು. ತೆರಿಗೆಗಳನ್ನು ವಿಧಿಸುವವಿಚಾರದಲ್ಲಿ ಮಾತ್ರ ಸಭೆಯವರಿಗೆ ಅಧಿಕಾರವನ್ನು ಕೊಡಲು ಅವನಿಗೆ ಇಷ್ಟವಿರಲಿಲ್ಲ. ಆದರೂ ಅವನು ಹಾಗೆ ನಡೆದುಕೊಳ್ಳಬೇಕಾಯಿತು. ಯಾವದೊರೆಯೂ ಸುಲಭವಾಗಿ ಇದಕ್ಕೆ

ಬರುತ್ತಿರಲಿಲ್ಲ. ಇದೊಂದು ಹೊರತು ಉಳಿದ ವಿಚಾರಗಳಲ್ಲೆಲ್ಲಾ ಎಡ್ವರ್ಡ್ ದೊರೆಯೂ, ಪಾರ್ಲಿಮೆಂಟ್ ಸಭೆಯವರೂ ಪರಸ್ಪರವಾಗಿ ಎಷ್ಟೋ ವಿಶ್ವಾಸ ವನ್ನಿಟ್ಟುಕೊಂಡು ಸರಾಗವಾಗಿ ಕಾರ್ಯಗಳನ್ನು ನೆರವೇರಿಸುತ್ತಾ ಹೋದರು. ಎಡ್ವರ್ಡ್ ದೊರೆಯು ಹೀಗೆಮಾಡಿದುದರಿಂದ ಸ್ಕಾಟ್ಲೆಂಡಿನ ವಿಚಾರದಲ್ಲಿಯೂ, ವೇಲ್ಸಿನ ವಿಚಾರದಲ್ಲಿಯೂ ಅವನ ಅಭಿಪ್ರಾಯಗಳು ನೆರವೇರುವುದಕ್ಕೂ, ಪೋಪರ ಯಾಜಮಾನ್ಯಕ್ಕೆ ಅವನು ಪ್ರತಿಭಟಿಸಿ ನಿಲ್ಲುವುದಕ್ಕೂ, ಪಾರ್ಲಿಮೆಂ ಟನವರು ಅವನಿಗೆ ಬೆಂಬಲವಾಗಿ ನಿಂತರು.

ಮೊದಲನೆಯ ಎಡ್ವರ್ಡ್ ದೊರೆಯು ಮೃತನಾದಬಳಿಕ, ಅವನ ಮಗ ನಾದ ಎರಡನೆಯ ಎಡ್ವರ್ಡ್ ದೊರೆಯು ಪಟ್ಟಕ್ಕೆ ಬಂದನು. ಅವನು ರೂಪಿ ನಲ್ಲಿ ಸುಂದರ; ಪ್ರಜೆಗಳ ನೆಮ್ಮದಿಯವಿಷಯದಲ್ಲಿ ಅಲಕ್ಷ್ಯಮಾಡುವವನು; ನಂಬಿಕೆಗೆ ಅರ್ಹನಲ್ಲ; ಆಡಿದ ಮಾತನ್ನು ನಡೆಯಿಸುವುದಕ್ಕೂ ಅವನಿಗೂ ಸ್ವಲ್ಪದೂರ.

ಪಾರ್ಲಿಮೆಂಟ್ ಸಭೆಯವರು ತೆರಿಗೆಯವಿಚಾರದಲ್ಲಿ ಪೂರ್ಣಾಧಿಕಾರ ವನ್ನು ಪಡೆದಿದ್ದುದರಿಂದ ದೊರೆಯು ಅವರ ಅಭಿಮತವನ್ನು ಅನುಸರಿಸಿ ನಡೆ ಯದೇ ಇದ್ದರೆ ಯತ್ನವಿರಲಿಲ್ಲ. ದೊರೆಯೂ ಪಾರ್ಲಿಮೆಂಟನವರೂ ಒಂದೇ ಅಭಿಪ್ರಾಯವುಳ್ಳವರಾಗಿರುವವರೆಗೂ ಯಾವ ತೊಂದರೆಯೂ ಇರುತ್ತಿರಲಿಲ್ಲ. ಆದರೆ, ಅವರಿಗೆ ಪರಸ್ಪರವಾಗಿ ಭಿನ್ನಾಭಿಪ್ರಾಯವು ಹುಟ್ಟಿದಾಗ ಮಾತ್ರ ಬಹಳ ತೊಂದರೆಯಾಗುತ್ತಿತ್ತು. ಇಂತಹ ವೇಳೆಯಲ್ಲಿ ದೊರೆಯು ಪಾರ್ಲಿಮೆಂಟನವ ರಿಗೆ ವಶವರ್ತಿಯಾಗಬೇಕು; ಇಲ್ಲವೇ ಪಾರ್ಲಿಮೆಂಟನವರು ದೊರೆಗೆ ಅಧೀನ ರಾಗಬೇಕು. ಇವುಗಳನ್ನು ಬಿಟ್ಟು ಬೇರೆಮಾರ್ಗವೇ ಇರಲಿಲ್ಲ; ಇವುಗಳನ್ನು ಅನುಸರಿಸದೇಇದ್ದರೆ ವಿರೋಧವು ಸಿದ್ಧವಾಗಿಯೇ ಇತ್ತು.

ಎರಡನೆಯ ಎಡ್ವರ್ಡ್ ದೊರೆಯು ಸಮರ್ಥನಾದ ಪೈಯರ್ಸ್ ಗೇವ್‌ಸ್ಟನ್ (Piers Gaveston) ಎಂಬ ಆಪ್ತನೊಡನೆ ಸೇರಿಕೊಂಡು ಆತನಿಗೆ ಬೇಕಾ ದಷ್ಟು ಸನ್ಮಾನಮಾಡಿ ಅವನ ಸಲಹೆಗಳಂತೆ ಕಾರ್ಯವನ್ನು ನಡೆಯಿಸುತ್ತಾ ಪಾರ್ಲಿಮೆಂಟ್ ಸಭೆಯನ್ನು ಸ್ವಾಧೀನಮಾಡಿಕೊಳ್ಳಲು ಪ್ರಯತ್ನಮಾಡಿದನು. ವಿದೇಶಿಯನಾದ ಈ ಆಪ್ತನಾದರೋ, ದೊರೆಯಿಂದ ಬೇಕಾದಷ್ಟು ಧನವನ್ನೂ ಮನ್ನಣೆಯನ್ನೂ ಪಡೆದುಕೊಂಡು ಬ್ಯಾರನ್ ಮುಂತಾದ ದೊಡ್ಡಮನುಷ್ಯರಿ ಗೆಲ್ಲಾ ಕುಚೋದ್ಯವಾದ ಅಡ್ಡಹೆಸರುಗಳನಿಟ್ಟು ಕರೆದು, ಅವರ ಮನಸ್ಸಿಗೆ ವ್ಯಥೆ ಯನ್ನುಂಟುಮಾಡತೊಡಗಿದನು. ಮೊದಲನೆಯ ಎಡ್ವರ್ಡ್ ದೊರೆಯ ತಮ್ಮನ ಮಗನೂ ಲ್ಯಾಂಕಾಸ್ಟರಿನ (Lancaster) ಅರ್ಲನೂ ಆದ ಥಾಮಸ್ ಎಂಬಾತನು

ಇದನ್ನೆಲ್ಲಾ ಸೈರಿಸಲಾರದೆ, ಬ್ಯಾರನರೇ ಮೊದಲಾದವರಿಗೆ ಮುಂದಾಳಾಗಿ ನಿಂತು ಹೋರಾಡಿ, ೧೩೧೦ ರಲ್ಲಿ ಅಡಳಿತಗಳನ್ನು ಲಾರ್ಡ್‌ಆರ್ಡೇನರ್ಸ್ ಎಂಬ ಸಭೆಗೆ ದೊರೆಯು ವಹಿಸುವಂತೆ ಮಾಡಿದನು. ಈ ಸಭೆಯವರು ಪಾರ್ಲಿಮೆಂಟಿನ ಅನುಮತಿಯಿಂದ ಒಂದು ವರುಷಕಾಲ ಆಡಳಿತಗಳನ್ನು ನೆರವೇರಿಸಿದರು. ದೊರೆಯ ಆಪ್ತನಾದ ಗೇವ್‌ಸ್ಟನ್ನನಿಗೆ ಗಡೀಪಾರಾಯಿತು. ಆದರೂ ಎಡ್ವರ್ಡನು ಸಮಯ ನಿರೀಕ್ಷಣೆಯಿಂದಿದ್ದು ಅವನನ್ನು ಮತ್ತೆ ಬರಮಾಡಿಕೊಂಡನು. ಆದರೆ, ಈ ಸಾರಿ ಅವನು ಬ್ಯಾರನರ ಕೈಗೆ ಸಿಕ್ಕಿಬಿದ್ದನು; ಅವರು ಅವನ ತಲೆಯನ್ನು ಕಡಿದುಹಾಕಿದರು. ಕೆಲವು ವರುಷಗಳು ಕಳೆದಮೇಲೆ ಬ್ಯಾನಕ್‌ಬರ್ನ್ (Bannockburn) ಕದನದಲ್ಲಿ ಸಂಪೂರ್ಣವಾಗಿ ಸೋಲಿಸಲ್ಪಟ್ಟನು. ಬಳಿಕ, ಲ್ಯಾಂಕಾಸ್ಟರಿನ ಅರ್ಲನು ಕೋರಿದವರನ್ನು ಮುಖ್ಯಾಧಿಕಾರಿಗಳನ್ನಾಗಿ ಮಾಡಿ ಕೊಂಡು ಎಡ್ವರ್ಡ್ ದೊರೆಯು ಪ್ರಭುತ್ವ ಮಾಡಬೇಕಾಗಿಬಂತು. ದೊರೆಯು ಕೆಲವು ವರುಷಗಳ ವರೆಗೆ ಸುಮ್ಮನಿದ್ದು ಬಳಿಕ ತಂದೆಮಕ್ಕಳಾದ, ಡಿಸ್ಪೆನ್ಸರ್ಸ್ ಎಂಬ ಇಬ್ಬರು ಆಪ್ತರನ್ನು (Despensers) ನಿಯಮಿಸಿಕೊಂಡನು. ಬ್ಯಾರನರೇ ಮೊದಲಾದವರಿಗೆ ಇದು ಸರಿಬೀಳದೆ, ಅವರಿಬ್ಬರಿಗೂ ಗಡೀಪಾರಾಯಿತು. ಆದರೂ, ಎಡ್ವರ್ಡನು ಮತ್ತೆ ಅವರನ್ನು ಬರಮಾಡಿಕೊಂಡು ಸೈನ್ಯವನ್ನು ಜೊತೆಗೂಡಿಸಿ, ಬರೋಬ್ರಿಡ್ಜ್ ಕದನದಲ್ಲಿ ಲ್ಯಾಂಕಾಸ್ಟರಿನ ಅರ್ಲನನ್ನು ಸೋಲಿಸಿ ಅವನ ಶಿರಚ್ಛೇದನ ಮಾಡಿಸಿದನು. ಪ್ರಜೆಗಳಲ್ಲಿ ಬಹು ಜನರು ಎಡ್ವರ್ಡಿನ ಪಕ್ಷವನ್ನು ಬಿಟ್ಟರು; ರಾಣಿಯುಕೂಡ ಲ್ಯಾಂಕಾಸ್ಟರಿನ ಅರ್ಲಿನ ಪಕ್ಷದವನಾದ ರೋಜರ್ ಮಾರ್ಟಿಮರ (Roger Mortimer) ನೊಡನೆ ಸೇರಿದಳು. ದೊರೆಯನ್ನು ಕಂಡರೆ ಯಾರಿಗೂ ಆಗದಂತಾಯಿತು: ಡಿಸ್ಪೆನ್ಸರ್ಸ್ ಎಂಬಿಬ್ಬರು ಆಪ್ತರೂ ಕೊಲ್ಲಲ್ಪಟ್ಟರು; ಎಡ್ವರ್ಡನು ದೇಶವನ್ನು ಬಿಟ್ಟು ಹೋಗಲು ಯತ್ನಿಸಿದನು; ಆದರೆ ಅದು ಸಾಧ್ಯವಾಗಲಿಲ್ಲ. ಕೊನೆಗೆ, ಅವನ ಮಗನಾದ ಮೂರನೆಯ ಎಡ್ವರ್ಡನಿಗೆ ಪಟ್ಟವಾಗತಕ್ಕುದೆಂದೂ, ಎರಡನೆಯಎಡ್ವರ್ಡ್ ದೊರೆಗೆ ವಹಿಸಿದ್ದ ಅಧಿಕಾರವನ್ನೂ, ಫ್ಯೂಡಲಿಸಮ್ ಪದ್ಧತಿಗೆ ಅನುಸಾರವಾಗಿ ಅವನಿಗೆ ಕೊಟ್ಟದ್ದ ಪ್ರಮಾಣವಚನಗಳನ್ನೂ ಮೀರಿ, ಅವನನ್ನು ಸಿಂಹಾಸನ ಚ್ಯುತನನ್ನಾಗಿ ಮಾಡಬೇಕೆಂದು ನಿಷ್ಕರ್ಷೆಯಾಯಿತು. ಯಾವ ಪ್ರಜೆಗಳು ಹಿಂದೆ ಸಿಜ್‌ಬರ್ಟ್ ಮತ್ತು ಎಥೆಲ್‌ರೆಡ್ ದೊರೆಗಳ ಪ್ರಭುತ್ವವನ್ನು ವಿರಾಮಗೊಳಿಸಿದರೋ, ಅದೇ ಪ್ರಜೆಗಳೇ ಪಾರ್ಲಿಮೆಂಟ್ ಸಭೆಯ ಮೂಲಕವಾಗಿ ಎಡ್ವರ್ಡ್ ದೊರೆಯ ದೊರೆತನವನ್ನು ಮುಕ್ತಾಯಗೊಳಿಸಿ, ಅವನ ಮಗನಿಗೆ ಪಟ್ಟವನ್ನು ಕಟ್ಟಿದರು.

ಲ್ಯಾಂಕಾಸ್ಟರಿನ ಅರ್ಲಿನ ಮರಣಾನಂತರ, ಪಾರ್ಲಿಮೆಂಟ್ ಸಭೆಯುವರು ಒಟ್ಟು ರಾಜ್ಯಕ್ಕೆ ಸಂಬಂಧಪಟ್ಟ ವಿಚಾರಗಳನ್ನು ತಾವು ಮಾತ್ರವೇ ಚರ್ಚಿಸತಕ್ಕುದೆಂದು ನಿಬಂಧನೆಯನ್ನು ಮಾಡಿದರು. ಇದರಿಂದ, ಬ್ಯಾರನ್ ಮುಂತಾದವರು ಒಟ್ಟುಗೂಡಿಕೊಂಡು ಈ ವಿಚಾರಗಳಿಗೆ ತಲೆಹಾಕಿ ಯುದ್ಧಮಾಡದಂತಾಯಿತು; ಅಲ್ಲದೆ ರಾಜಕೀಯ ವಿಚಾರಗಳನ್ನು ಪ್ರಜೆಗಳೆಲ್ಲರೂ ತಮ್ಮ ಪ್ರತಿನಿಧಿಗಳ ಮೂಲಕವಾಗಿ ಪಾರ್ಲಿಮೆಂಟ್ ಸಭೆಯಲ್ಲಿ ಚರ್ಚೆಮಾಡುವಂತಾಗಿ ನ್ಯಾಯವಿಧಾಯಕಕಾರ್ಯದಲ್ಲಿ ಸರಿಯಾದ ಭಾಗವು ದೊರೆಯಿತು.

ಮೂರನೆಯ ಎಡ್ವರ್ಡ್ ದೊರೆಯ ಕಾಲದಲ್ಲಿ ಪಾರ್ಲಿಮೆಂಟ್ ಸಭೆಯು, ಜನಸಾಮಾನ್ಯರ ಪ್ರತಿನಿಧಿ ಸಭೆಯೆಂದೂ(House of Commons)ಶ್ರೀಮಂತ ಸಭೆ (House of Lords) ಯೆಂದೂ ಎರಡು ವಿಭಾಗವಾಯಿತು. ಡ್ಯೂಕ್, ಅರ್ಲ್, ಬ್ಯಾರನ್ ಮುಂತಾದ ದೊಡ್ಡಮನುಷ್ಯರೂ, ಆರ್ಚ್‌ಬಿಷಪ್, ಬಿಷಪ್ ಮುಂತಾದ ದೊಡ್ಡ ಮತಾಧಿಕಾರಿಗಳೂ, ಶ್ರೀಮಂತ ಸಭೆಯಲ್ಲಿ ಕುಳಿತುಕೊಳ್ಳುತ್ತಿದ್ದರು. ಪಟ್ಟಣಗಳ ಮತ್ತು ಬರೋಗಳ ಪ್ರತಿನಿಧಿಗಳೇ ಮುಂತಾದವರು ಪ್ರತಿನಿಧಿ ಸಭೆಯಲ್ಲಿ ಕುಳ್ಳಿರುತ್ತಿದ್ದರು. ವಿಶೇಷ ಪ್ರಮುಖರಲ್ಲದ ಬ್ಯಾರನರ ಪ್ರತಿನಿಧಿಗಳು ಶ್ರೀಮಂತ ಸಭೆಯಲ್ಲಿ ಕುಳ್ಳಿರಬಹುದೆಂದು ಸಿದ್ಧಾಂತವಿತ್ತಾದರೂ, ಅವರೇನೋ ಪ್ರತಿನಿಧಿ ಸಭೆಯಲ್ಲಿಯೇ ಕುಳ್ಳಿರುತ್ತಿದ್ದರು. ಅರ್ಲ್ ಮೊದಲಾದ ದೊಡ್ಡಮನುಷ್ಯರ ಕಿರಿಯ ಮಕ್ಕಳಿಗೆ ತಂದೆಯ ಮರಣಾನಂತರ ಆತನ ಪದವಿಯು ದೊರೆಯದೇ ಇದ್ದುದರಿಂದ ಅವರು ಪ್ರತಿನಿಧಿ ಸಭೆಯಲ್ಲಿ ಸೇರುತ್ತಿದ್ದರು; ಹಿರಿಯ ಮಕ್ಕಳಿಗೆ ಅವರತಂದೆಯ ಮರಣಾನಂತರ ಮಾತ್ರವೇ ಆತನ ಪದವಿಯು ಲಭಿಸುತ್ತಿದ್ದುದರಿಂದ, ಅದುವರೆಗೆ ಅವರು ಪ್ರತಿನಿಧಿ ಸಭೆಯಲ್ಲಿ ಕುಳಿತುಕೊಳ್ಳಬಹುದೆಂದೂ ಅವರನ್ನು ಪ್ರತಿನಿಧಿಗಳಾಗಿ ಆರಿಸಬಹುದೆಂದೂ ನಿಷ್ಕರ್ಷೆಯಾಗಿತ್ತು. ಹೀಗೆ ಶ್ರೀಮಂತ ಸಭೆಯಲ್ಲಿದ್ದವರ ಮಕ್ಕಳು ಪ್ರತಿನಿಧಿ ಸಭೆಯಲ್ಲಿದ್ದುದರಿಂದ ಈ ಎರಡು ಸಭೆಗಳಿಗೂ ಪರಸ್ಪರವಾಗಿ ಸೌಹಾರ್ದಭಾವವಿತ್ತು. ತೆರಿಗೆಯು ಜನಸಾಮಾನ್ಯಕ್ಕೆ ಹೆಚ್ಚಾಗಿ ಅನ್ವಯಿಸುತ್ತಿದ್ದುದರಿಂದ, ಈ ವಿಚಾರದಲ್ಲಿ ಪ್ರತಿನಿಧಿ ಸಭೆಯುವರು ಸರ್ವಾಧಿಕಾರವನ್ನು ವಹಿಸಿದ್ದರು. ಅವರು ಹಾಕಿದ ತೆರಿಗೆಗಳನ್ನು ಶ್ರೀಮಂತ ಸಭೆಯುವರು ಅನುಮೋದಿಸಬೇಕಾಗಿತ್ತು. ಪ್ರತಿನಿಧಿ ಸಭೆಯುವರ ಅಧಿಕಾರವು ಬಹಳ ಹೆಚ್ಚಾಗಿತ್ತು. ಆದುದರಿಂದ ಅರ್ಲ್ ಮುಂತಾದ ದೊಡ್ಡಮನುಷ್ಯರು ತಮಗೆ ಪ್ರತಿನಿಧಿಸಭೆಯುವರ ಬಲದಿಂದ ಮಾತ್ರವೇ ಪ್ರಾಬಲ್ಯವುಂಟಾಗುವಂತಿತ್ತೆಂದು ನಿರ್ಧರಿಸಿದರು. ಈ ಕಾರ್ಯವು

ಸಾಗುವುದಕ್ಕಾಗಿ ತಮ್ಮ ಮಕ್ಕಳೂ, ಆಶ್ರಿತರೂ ಪ್ರತಿನಿಧಿಗಳಾಗಿ ಆರಿಸಲ್ಪಡು ವಂತೆ ಏರ್ಪಾಡುಮಾಡಲು ಯತ್ನಿಸಿದರು. ಅವರು ಪ್ರತಿನಿಧಿಗಳಾದರೆ ಆ ದೊಡ್ಡ ಮನುಷ್ಯರ ಮನೋಗತವು ನೆರವೇರುವುದು ಸುಲಭವಾಗುತ್ತಿತ್ತು.

ಫ್ರಾನ್ಸಿನೊಡನೆ ಯುದ್ಧವು ಸಂಭವಿಸಿತು. ಆಗ ದೊರೆಗೆ ಬಹಳ ಧನವು ಬೇಕಾಯಿತು. ಆದರೆ ಪಾರ್ಲಿಮೆಂಟಿನವರು ಸುಮುಖರಾಗಿದ್ದ ಹೊರತು ಹಣವು ದೊರೆಯದು. ಆದಕಾರಣ, ಅವರ ಮನಸ್ಸಿಗೆ ತೃಪ್ತಿಯಾಗಲೆಂದು ಬಗೆದು ದೊರೆಯು ಎಲ್ಲಾ ಕಾರ್ಯಗಳಲ್ಲಿಯೂ ಅವರ ಅನುಮತಿಯನ್ನು ಕೇಳುತ್ತಾ ಬಂದನು. ಪ್ರತಿನಿಧಿ ಸಭೆಯವರು ಇದನ್ನು ವಿಪರೀತವಾಗಿ ಭಾವಿಸಿ ಸಮಸ್ತ ವಿಚಾರಗಳಿಗೂ ತಲೆಹಾಕುತ್ತಾ ಬಂದರು. ಅದರಿಂದ ಕೆಲವು ವೇಳೆ ಕೆಡುಕುಗಳು ಆದುವು. ಯಾವುದು ಹೇಗಾದರೂ ಇರಲಿ ಪಾರ್ಲಿಮೆಂಟ್ ಸಭೆಯವರ ಅಧಿಕಾರಗಳು ಬಹಳ ಹೆಚ್ಚುತ್ತಾ ಬಂದುವು.

ಪಾರ್ಲಿಮೆಂಟ್ ಸಭೆಯವರು ಮೂರು ವಿಚಾರಗಳಿಗೆ ಗಮನಕೊಟ್ಟರು: (೧) ತೆರಿಗೆಯನ್ನು ಹಾಕುವ ವಿಚಾರದಲ್ಲಿ ಮಾತ್ರವೇ ಅಲ್ಲದೆ, ರಾಜ್ಯದ ಆದಾಯವನ್ನು ವೆಚ್ಚಮಾಡುವುದರಲ್ಲಿಯೂ ಪಾರ್ಲಿಮೆಂಟ್ ಸಭೆಗೆ ಅಧಿಕಾರವಿರ ತಕ್ಕುದು. (೨) ಮಂತ್ರಿಗಳನ್ನು ಸಭೆಯವರೇ ಆರಿಸಬೇಕು. (೩) ಹಾಗೆ ಚುನಾಯಿಸಲ್ಪಟ್ಟ ಮಂತ್ರಿಗಳು ನ್ಯಾಯವರಿತು ನಡೆಯದೇ ಇದ್ದಾಗ ಅವರನ್ನು ವಿಚಾರಣೆಮಾಡಲು ಸಭೆಗೆ ಅಧಿಕಾರವಿರಬೇಕು.

೧೩೪೧ ನೆಯ ಇಸವಿಯಲ್ಲಿ ಇವುಗಳನ್ನು ಪಡೆದುಕೊಳ್ಳುವುದಕ್ಕೆ ಸಮಯವು ಸಿಕ್ಕಿತು. ಆವರುಷ, ಆಡಳಿತಗಳು ಸಮರ್ಪಕವಾಗಿ ನಡೆಯಲಿಲ್ಲ ವೆಂದು ದೊರೆಗೆ ಬಹಳ ಬೇಸರವಾಯಿತು. ತೆರಿಗೆಗಳಿಂದ ಬಂದ ಬಹಳ ಹಣವೂ ಕೂಡ ಅವನ ವೆಚ್ಚಕ್ಕೆ ಸಾಲದೆಹೋಯಿತು. ಆದುದರಿಂದ ಅವನು ಒಡನೆಯೇ ಫ್ಲ್ಯಾಂಡರ್ಸಿನಿಂದ (Flanders) ಹಿಂತಿರುಗಿಬಂದು, ಕೋಶಾಧ್ಯಕ್ಷ ನಾಗಿದ್ದ ಕ್ಯಾಂಟರ್‌ಬರಿಯ ಆರ್ಚ್‌ಬಿಷಪ್ಪನಾದ ಜಾನ್ ಸ್ಟ್ರ್ಯಾಟ್‌ಫರ್ಡ್ (John Stratford) ಎಂಬಾತನ ಮೇಲೆ ಆಗ್ರಹಗೊಂಡು, ತನ್ನ ಹಣವನ್ನೆಲ್ಲಾ ಸಿಕ್ಕಿದಂತೆ ವೆಚ್ಚಮಾಡಿ ಹಾಳುಮಾಡಿದ ಅಪರಾಧಕ್ಕಾಗಿ ಅವನು ಕೋರ್ಟ್ ಆಫ್ ಎಕ್ಸ್‌ಚೆಕರ್ ಎಂಬ ನ್ಯಾಯಸ್ಥಾನದ ವಿಚಾರಣೆಗೊಳಗಾಗತಕ್ಕುದೆಂದು ನಿರ್ಬಂಧಿಸಿದನು. ಆತನು ಅದಕ್ಕೆ ಒಪ್ಪಲಿಲ್ಲ. ಅದನ್ನು ಕಂಡು ಶ್ರೀಮಂತ ರೆಲ್ಲರೂ ಆತನ ಪಕ್ಷವನ್ನು ವಹಿಸಿ ಶ್ರೀಮಂತನಾಗಿದ್ದ ಆತನನ್ನು ಶ್ರೀಮಂತರು ವಿಚಾರಣೆಮಾಡಬೇಕೇ ಹೊರತು, ಎಕ್ಸ್‌ಚೆಕರ್ ನ್ಯಾಯಸ್ಥಾನದವರೆಂದಿಗೂ ವಿಚಾರಣೆ ಮಾಡತಕ್ಕುದಲ್ಲವೆಂದು ವಾದಿಸಿದರು. ಅವರ ಹಟವೇ ಸಾಗಿತು.

ಶ್ರೀಮಂತರನ್ನು ಶ್ರೀಮಂತರೇ ವಿಚಾರಣೆ ಮಾಡತಕ್ಕದೆಂದು ನಿಷ್ಕರ್ಷೆಯಾಯಿತು. ಈ ಮಧ್ಯದಲ್ಲಿ ಪಾರ್ಲಿಮೆಂಟ್ ಸಭೆಯವರು, ದೊರೆಯು ದುಡ್ಡಿಲ್ಲದೆ ಪೇಚಾಡುತ್ತಿದ್ದ ವೇಳೆಯನ್ನು ಬಿಟ್ಟರೆ ತಮ್ಮ ಉದ್ದೇಶಸಾಧನೆಗೆ ಸಮಯವು ಸಿಕ್ಕದೆಂದು ತಿಳಿದು, ಅವಕ್ಕನುಸಾರವಾಗಿ ನಡೆದುಕೊಂಡು ದೊರೆಯಿಂದ ಮೂರು ಹಕ್ಕುಗಳನ್ನು ಪಡೆದುಕೊಂಡರು: (೧) ದೇಶದ ಆದಾಯವೆಚ್ಚಗಳ ಲೆಕ್ಕಗಳನ್ನು ಪಾರ್ಲಿಂಟ್ ಸಭೆಯಲ್ಲಿ ಆರಿಸಿದ ಅಧಿಕಾರಿಗಳು ಪರೀಕ್ಷಿಸತಕ್ಕದು. ಇದರಿಂದ ಸಭೆಯವರಿಗೆ ತೆರಿಗೆಗಳ ಮೇಲೂ, ಅವುಗಳನ್ನು ವೆಚ್ಚಮಾಡುವುದರಲ್ಲಿಯೂ ಪೂರ್ಣಾಧಿಕಾರವು ದೊರೆತಂತಾಯಿತು. (೨) ದೊರೆಯೂ ಶ್ರೀಮಂತರೂ ಸೇರಿ ಪರಸ್ಪರವಾದ ಒಪ್ಪಿಗೆಯಿಂದ ಮಂತ್ರಿಗಳನ್ನು ನೇಮಿಸಬೇಕು. ಹಾಗೆ ಆರಿಸಲ್ಪಟ್ಟವರು ಪಾರ್ಲಿಮೆಂಟ್ ಸಭೆಯ ಇದಿರಿಗೆ ನಿಂತು ನ್ಯಾಯಾನುಸಾರವಾಗಿ ವರ್ತಿಸುವಂತೆ ಪ್ರಮಾಣಮಾಡಬೇಕು. ಇದರಿಂದ ಮಂತ್ರಿಗಳನ್ನು ನಿಯಮಿಸುವ ವಿಷಯದಲ್ಲಿ ಸಭೆಯವರಿಗೆ ಅಧಿಕಾರವು ಬಂದಂತಾಯಿತು; ಅಲ್ಲದೆ ಮಂತ್ರಿಗಳ ಉತ್ತರವಾದಿತ್ವವೆಂಬ ತತ್ವವು ಇದರೊಡನೆ ಅಡಗಿಕೊಂಡಿತ್ತು. (೩) ಪಾರ್ಲಿಮೆಂಟ್ ಸಭೆಯು ಸೇರಿದ ಪ್ರತಿಯೊಂದು ಸಾರಿಯೂ ಮಂತ್ರಿಗಳು ತಮ್ಮ ಅಧಿಕಾರವನ್ನು ತತ್ಕಾಲಿಕವಾಗಿ ರಾಜನ ವಶಕ್ಕೊಪ್ಪಿಸಿ ತಮ್ಮ ಮೇಲೆ ಹೊತ್ತ ದೂರುಗಳಿಗೆ ಸಮಾಧಾನವನ್ನು ಹೇಳಬೇಕು.

ಈ ಹಕ್ಕುಗಳು ಶಾಶ್ವತವಾಗಿ ನಡೆದುಬಂದಿದ್ದರೆ ಪಾರ್ಲಿಮೆಂಟ್ ಸಭೆಯವರ ಅಧಿಕಾರಕ್ಕೆ ಎಲ್ಲೆಯೇ ಇರುತ್ತಿರಲಿಲ್ಲ. ಆದರೆ ಎಡ್ವರ್ಡ್ ದೊರೆಯು ಆ ಹಕ್ಕುಗಳು ಆಚರಣೆಗೆಬಾರದಂತೆ ಮಾಡಿದನು. ಆದರೂ ಪಾರ್ಲಿಮೆಂಟ್ ಸಭೆಯವರು ಅವುಗಳನ್ನು ಮತ್ತೆ ಪಡೆದುಕೊಳ್ಳಲು ಸಮಯವನ್ನು ನಿರೀಕ್ಷಿಸುತ್ತಿದ್ದರು. ಆ ಕಾಲವೂ ಶೀಘ್ರವಾಗಿಯೇ ಬರುವುದರಲ್ಲಿತ್ತು.

ರಾಜನು ಛಾನ್ಸೆಲರ್ ಮೊದಲಾದ ಅಧಿಕಾರಗಳಿಗೆ ಬಿಷಪ್ಪು ಮುಂತಾದ ಮತಾಧಿಕಾರಿಗಳನ್ನು ನಿಯಮಿಸಿ ಅವರ ಬುದ್ಧಿವಾದವನ್ನು ಗ್ರಹಿಸುತ್ತಿದ್ದನಷ್ಟೆ. ಪಾರ್ಲಿಮೆಂಟ್ ಸಭೆಯವರು ಇದನ್ನು ತಪ್ಪಿಸಲಿಚ್ಛಿಸಿದರು. ಮತಾಧಿಕಾರಿಗಳು ಅಪರಾಧಿಗಳಾದಾಗ, ಅವರನ್ನು ವಿಚಾರಣೆಗೆ ಗುರಿಮಾಡುವುದು ಅತಿಕಷ್ಟವಾಗಿದ್ದದ್ದೂ, ಅವರಲ್ಲಿ ಜನರಿಗೆ ಅಸಂತುಷ್ಟತೆಯುಂಟಾಗುತ್ತಾಬಂದುದೂ, ಇದಕ್ಕೆ ಕಾರಣಗಳಾಗಿರುತ್ತವೆ. ಪಾರ್ಲಿಮೆಂಟಿನವರ ಉದ್ದೇಶವು ನೆರವೇರಿತು; ಛಾನ್ಸೆಲರ್ ಮುಂತಾದ ಪದವಿಗಳಿಗೆ ಮತಾಧಿಕಾರಿಗಳು ಬಾರದಂತಾಗಿ, ಅವುಗಳು ಇತರರಿಗೆ ದೊರಕಲಾರಂಭವಾಯಿತು. ಆದರೆ, ಇವರ ನಡೆವಳಿಕೆಯು ಸರಿಯಾಗಿಲ್ಲದೇ ಇದ್ದುದರಿಂದ, ರಾಜ್ಯದಆಡಳಿತಗಳು ಹದಗೆಟ್ಟುವು.

ಇದಕ್ಕಾಗಿ ಪ್ರತಿನಿಧಿಸಭೆಯವರು ಇಂತಹ ಅಧಿಕಾರಿಗಳನ್ನು ಶ್ರೀಮಂತರ ಸಭೆಯಲ್ಲಿ ವಿಚಾರಣೆಗೆ ಗುರಿಮಾಡಲಾರಂಭಿಸಿದರು. ಶ್ರೀಮಂತಸಭೆಯು ನ್ಯಾಯಸ್ಥಾನವಾಯಿತು. ನ್ಯಾಯಕ್ಕೆ ವಿರೋಧವಾಗಿ ನಡೆದ ಮಂತ್ರಿಗಳಿಗೆಲ್ಲಾ ಶಿಕ್ಷೆಯಾಯಿತು. ಇದರಿಂದ, ಮಂತ್ರಿಗಳೆಲ್ಲರೂ ನ್ಯಾಯಕ್ಕೆ ಅನುಸಾರವಾಗಿ ನಡೆಯುತ್ತಾ ಪಾರ್ಲಿಮೆಂಟಿನವರಿಗೆ ಉತ್ತರವಾದಿಗಳಾಗಿರುವಂತಾಯಿತು. ಪಾರ್ಲಿಮೆಂಟಿನವರಿಗೆ ಎಡ್ವರ್ಡ್ ದೊರೆಯ ಕಾಲದಲ್ಲಿ ಅನೇಕ ಅಧಿಕಾರಗಳು ಬಂದುವು. ಆತನ ಕಾಲದಲ್ಲಿ ಪಾರ್ಲಿಮೆಂಟ್ ಸಭೆಗೆ ಉಂಟಾದ ಅಭಿವೃದ್ಧಿಯಲ್ಲಿ ಮಂತ್ರಿಗಳನ್ನು ನಿಯಮಿಸಿ, ಅವರು ಸರಿಯಾಗಿ ವರ್ತಿಸದೇಇರುವಪಕ್ಷಕ್ಕೆ ಅವರನ್ನು ಶಿಕ್ಷಿಸುವ ಅಧಿಕಾರವು ಬಂದುದೇ ಕೊನೆಯ ಮೆಟ್ಟಲಾಗಿತ್ತು.

---

## ಒಂಬತ್ತನೆಯ ಪ್ರಕರಣ.

### ಹದಿಮೂರು ಹದಿನಾಲ್ಕನೆಯ ಶತಮಾನಗಳಲ್ಲಿ ಪಾರ್ಲಿಮೆಂಟಿನ ಸ್ಥಿತಿ

ಹಿಂದೆ ಹೇಳಿದಂತೆ ಮೂವರು ಎಡ್ವರ್ಡ್ ದೊರೆಗಳ ಕಾಲದಲ್ಲಿಯೂ, ಪಾರ್ಲಿಮೆಂಟ್ ಸಭೆಯು ಬಹಳವಾಗಿ ಅಭಿವೃದ್ಧಿಯಾಯಿತು. ಈಗಿನ ಪಾರ್ಲಿಮೆಂಟನ್ನು ನಾಲ್ಕು ವಿಚಾರದಲ್ಲಿ ಅದು ಹೋಲುತ್ತಿತ್ತು: (೧) ಸಭೆಯು ಎರಡು ವಿಭಾಗವಾಗಿ ವಿಂಗಡಿಸಲ್ಪಟ್ಟಿತು. (೨) ತೆರಿಗೆಗಳನ್ನು ಹಾಕುವ ವಿಚಾರದಲ್ಲಿ ಪಾರ್ಲಿಮೆಂಟಿನವರಿಗೆ ಅಧಿಕಾರವು ಬಂತು. (೩) ತೆರಿಗೆಯಿಂದ ಬಂದ ಹಣವನ್ನು ವೆಚ್ಚಮಾಡುವ ವಿಚಾರವು ಪಾರ್ಲಿಮೆಂಟಿನವರ ಮೇಲ್ವಿಚಾರಣೆಗೆ ಒಳಪಟ್ಟಿತು. (೪) ಮಂತ್ರಿಗಳನ್ನು ನಿಯಮಿಸುವ ವಿಷಯದಲ್ಲಿಯೂ, ಹಾಗೆ ನಿಯಮಿಸಲ್ಪಟ್ಟ ಮಂತ್ರಿಗಳು ನ್ಯಾಯತಪ್ಪಿ ನಡೆದಾಗ ಅವರನ್ನು ಶಿಕ್ಷಿಸುವ ವಿಷಯದಲ್ಲಿಯೂ, ಸಭೆಯವರಿಗೆ ಅಧಿಕಾರವು ಬಂತು. ಆದರೂ, ಆಗಿನ ಪಾರ್ಲಿಮೆಂಟ್ ಸಭೆಯ ಅಧಿಕಾರಗಳು ಈಗಿನಂತೆ ದೃಢವಾಗಿರಲಿಲ್ಲ. ತಳಹದಿ ಸರಿಯಾಗಿಲ್ಲದೆ ಇದ್ದುದರಿಂದ ಸ್ವಲ್ಪ ತಳ್ಳಿದರೂ ಒಟ್ಟುಕಟ್ಟಡವೇ ಕಳಚಿ ಬಿದ್ದು ನೆಲಸಮವಾಗುವಂತಿತ್ತು.

ಮೊದಲನೆಯ ವಿಲಿಯಂ ದೊರೆಯ ಕಾಲಾನಂತರ ಬ್ಯಾರನರ್, ಮುಂತಾದವರು ಪ್ರಬಲರಾಗುತ್ತಾ ಬಂದುದನ್ನೂ, ಎರಡನೆಯ ಹೆನ್ರಿ ದೊರೆಯು ಪ್ರಜೆಗಳ ಮತ್ತು ಅಧಿಕಾರಿಗಳ ಸಹಾಯದಿಂದ ಅವರನ್ನು ಮೂಲೆಗೆ ಕುಳ್ಳಿರಿಸಿದುದನ್ನೂ ವಿಚಾರಮಾಡಿದುದಾಯಿತು. ಜಾನನ ಕೆಟ್ಟನಡತೆಯಿಂದ

ಪ್ರಜೆಗಳೂ, ಅಧಿಕಾರಿಗಳೂ, ಬ್ಯಾರನರೂ ಬಂದಾಗಿ, ದೊರೆಗೆ ಇದಿರುಬಿದ್ದರು. ಹದಿನಾಲ್ಕನೆಯ ಶತಮಾನದ ಕೊನೆಯುವರೆಗೂ ಈ ಐಕಮತ್ಯವು ಸಾಗಿತು. ಪಾರ್ಲಿಮೆಂಟ್ ಸಭೆಯಲ್ಲಿ ಬ್ಯಾರನರೇ ಮುಂತಾದವರು ಸದಸ್ಯರಾಗಿದ್ದುದರಿಂದ ಅದಕ್ಕೆ ಬಹಳ ಪ್ರಾಮುಖ್ಯತೆಯೂ, ಸದಸ್ಯರ ಅಭಿಪ್ರಾಯಕ್ಕೆ ಪುರಸ್ಕಾರವೂ ದೊರೆತುವು; ದೊರೆಯು ಪಾರ್ಲಿಮೆಂಟಿನವರ ಅಭಿಮತವನ್ನು ಅನುಸರಿಸಿ ನಡೆಯಬೇಕಾಯಿತು. ಬ್ಯಾರನರ ಬೆಂಬಲವಿಲ್ಲದೆ ಪ್ರತಿನಿಧಿಗಳು ಏನನ್ನೂ ಮಾಡಲಾರದವರಾಗಿದ್ದರು. ಆದುದರಿಂದ, ದೊರೆಯು ತನ್ನ ಪದವಿಗೆ ಹೆಚ್ಚು ಪ್ರಾಮುಖ್ಯತೆಯುಂಟಾಗುವಂತೆ ಮಾಡಿಕೊಳ್ಳಬೇಕಾಗಿದ್ದರೆ, ಪ್ರತಿನಿಧಿಗಳಿಗೂ ಬ್ಯಾರನರೇ ಮುಂತಾದ ದೊಡ್ಡಮನುಷ್ಯರಿಗೂ ಇದ್ದ ಐಕಮತ್ಯವನ್ನು ತಪ್ಪಿಸುವುದೊಂದೇ ದಾರಿಯಾಗಿತ್ತು. ಈ ವಿಚಾರದಲ್ಲಿ ಮೂರನೆಯ ಎಡ್ವರ್ಡ್ ದೊರೆಯು ಅಂಕುರಾರ್ಪಣವನ್ನು ಮಾಡಿದನು.

ಮೊದಲನೆಯ ವಿಲಿಯಂ ದೊರೆ (William the Conqueror) ಯ ಕಾಲವು ಕಳೆದು ಮುನ್ನೂರು ವರುಷಗಳಾದುವು. ಕಾಲವು ಕಳೆದಂತೆಯೇ ಬ್ಯಾರನರೇ ಮುಂತಾದವರ ಸ್ಥಿತಿಯೂ ಬದಲಾಯಿಸಿತು. ವಿಲಿಯಂ ದೊರೆಯು ಈ ದೊಡ್ಡಮನುಷ್ಯರ ಪ್ರಾಬಲ್ಯವನ್ನು ತಗ್ಗಿಸುವುದಕ್ಕೋಸ್ಕರವಾಗಿ, ಅವರಿಗೆ ಒಂದೇ ಕಡೆಯಲ್ಲಿ ಭೂಪ್ರದೇಶಗಳನ್ನು ಕೊಡದೆ, ಅವರ ಭೂಸ್ಥಿತಿಯು ಅಲ್ಲಲ್ಲಿ ಇರುವಂತೆ, ಮಾಡಿದ್ದನಷ್ಟೆ. ಈ ದೊಡ್ಡಮನುಷ್ಯರಾದರೋ ತಮ್ಮ ತಮ್ಮಲ್ಲಿ ವಿವಾಹವನ್ನು ಬೆಳಯಿಸುವುದರಿಂದಲೂ, ದೌಹಿತ್ರಬಾಧ್ಯತೆಯಿಂದ ಇತರ ದೊಡ್ಡಮನುಷ್ಯರ ಆಸ್ತಿಯನ್ನು ಪಡೆಯುವುದರಿಂದಲೂ, ತಮಗೆ ಸೇರಿದ್ದ ಭೂಪ್ರದೇಶಗಳು ಚದಿರಿರದೆ ಒಟ್ಟಾಗಿರುವಂತೆ ಮಾಡಿಕೊಂಡು, ಬಲಿಷ್ಠರಾಗುತ್ತ ಬಂದರು. ಅದೂಅಲ್ಲದೆ ಅವರ ಕೈಯಲ್ಲಿ ವಿಶೇಷ ಹಣವೂ ಕೂಡಿತು. ಅವರಿಗೆ ಅಷ್ಟೊಂದು ಹಣವು ಲಭಿಸಿದುದಕ್ಕೆ ಕಾರಣವನ್ನು ತಿಳಿದುಕೊಳ್ಳೋಣ. ೧೩೪೭ನೆಯ ಇಸವಿಯುವರೆಗೂ ಇಂಗ್ಲೆಂಡಿನಲ್ಲಿ ವ್ಯವಸಾಯವು ಬಹಳ ಚೆನ್ನಾಗಿ ಸಾಗುತ್ತಿತ್ತು. ಆದರೆ, ಅಲ್ಲಿಂದ ಮುಂದೆ ಸಂಭವಿಸಿದ 'ಬ್ಲ್ಯಾಕ್ ಡೆತ್' (Black Death) ಎಂಬ ಅಂಟುರೋಗದ ಹಾವಳಿಯಿಂದ ಬಹುಮಂದಿ ರೈತರು ಮೃತರಾದರು. ಆದುದರಿಂದ, ಮೊದಲಿನಂತೆ ಅಲ್ಪವಾದ ಕೂಲಿಗೆ ಕೆಲಸಗಾರರು ಸಿಕ್ಕುವುದು ಕಷ್ಟವಾಗಿ ಕೃಷಿಯು ಮೂಲೆಗೆಬಿತ್ತು. ಉಪಾಯಾಂತರವು ತೋರದೆ, ಬ್ಯಾರನರೇ ಮುಂತಾದವರೆಲ್ಲರೂ ಕುರಿಯ ದೊಡ್ಡಿಗಳನ್ನಿಡಿಸಿ, ಫ್ಲ್ಯಾಂಡರ್ಸಿಗೆ ಉಣ್ಣೆಯನ್ನು ಕಳುಹಿಸಿ, ಮಾರಾಟಕ್ಕೆ ಆರಂಭಿಸಿದರು. ಆ ವ್ಯಾಪಾರವು ಬಹಳ ಉಛ್ರಾಯಸ್ಥಿತಿಗೆ ಬಂತು. ಬ್ಯಾರನರೆಲ್ಲರೂ ಬಹಳ ಧನಿಕರಾದರು. ಹೀಗೆ ಅವರಿಗೆ ಭೂಸ್ಥಿತಿಯು ಒಟ್ಟಗೆ

ದೊರೆಯಿತು. ಅದರ ಜೊತೆಗೆ ಕೈಯಲ್ಲಿ ಹಣವು ಕೂಡಿತು. ಇನ್ನು ಅವರು ಪ್ರಮುಖರಾಗಲು ಬೇಕಾಗಿದ್ದುದು ಸೈನ್ಯವೊಂದೇ. ಕಾಲಕ್ರಮದಲ್ಲಿ ಅದಕ್ಕೂ ಅನುಕೂಲವಾಯಿತು. ಎಡ್ವರ್ಡ್ ದೊರೆಯು (Edward III) ಫ್ರಾನ್ಸಿಗೆ ಯುದ್ಧಕ್ಕೆ ಹೋದಾಗಲೆಲ್ಲಾ ಸೈನ್ಯವನ್ನೊದಗಿಸುವುದನ್ನು ಬ್ಯಾರನರಿಗೆ ಒಪ್ಪಿಸಿ ಸೈನಿಕರ ವೇತನಗಳನ್ನು ಅವರ ಮೂಲಕವಾಗಿಯೇ ಸಲ್ಲಿಸುತ್ತಿದ್ದನು. ಅವರು ಇದರಲ್ಲಿ ಸ್ವಲ್ಪ ಹಣವನ್ನುಳಿಸಿಕೊಂಡು, ಯುದವು ಮುಗಿದಮೇಲೆ ದೊರೆಯು ಮನೆಗೆ ಕಳುಹಿಸಿದ ಸೈನಿಕರಲ್ಲಿ ಅನೇಕರನ್ನು ತಮ್ಮ ಕೈಕೆಳಗೆ ಇಟ್ಟುಕೊಂಡು, ತಾವು ಇಷ್ಟಪಟ್ಟಾಗ ಯುದ್ಧಮಾಡಲು ಅನುಕೂಲಪಡಿಸಿ ಕೊಂಡಿದ್ದರು. ಫ್ಯೂಡಲಿಸಮ್ ಪದತಿಯ ಪ್ರಕಾರ ತಮ್ಮ ಕೈಕೆಳಗಿದ್ದವರ ಮೂಲಕವಾಗಿ, ಅವರು ಸೈನ್ಯವನ್ನೊದಗಿಸುವುದು ನಿಧಾನವಾಗುತ್ತಿತ್ತು. ಆದರೆ, ಅವರು ಹೂಡಿದ ಹೊಸ ಉಪಾಯದಿಂದ ಅವರಲ್ಲಿ ಯಾವಾಗಲೂ ಸೈನ್ಯವು ಸಿದ್ಧವಾಗಿರುವಂತಾಯಿತು. ಇದರಿಂದ ಅವರು ಬಹಳಬಲಿಷ್ಠರಾದರು. ಬ್ಯಾರನರ ದುರ್ಗಗಳು ಕೂಡ ಹೆಚ್ಚಿ ಅವರ ಸ್ವಾಧೀನದಲ್ಲಿಯೇ ಇರುವಂತಾಯಿತು. ಬಹಳ ಬಲಶಾಲಿಗಳಾಗಿದ್ದ ಬ್ಯಾರನರನ್ನು ತನ್ನ ಕಡೆಗೆ ಸೇರಿಸಿ ಕೊಳ್ಳುವುದಕ್ಕಾಗಿ, ಎಡ್ವರ್ಡ್ ದೊರೆಯು ತನ್ನ ಮಕ್ಕಳಿಗೆ ಅವರ ಮನೆಯ ಹೆಣ್ಣುಗಳನ್ನು ತಂದು ವಿವಾಹ ಮಾಡಿದನು. ಈ ವಿಧವಾದ ಬಾಂಧವ್ಯವನ್ನು ಬೆಳೆಯಿಸಿದುದರಿಂದ ಬಲಿಷ್ಠರಾದ ಬ್ಯಾರನರೆಲ್ಲರೂ ಅವನ ಪಕ್ಷವನ್ನೇ ವಹಿಸಿ ನಿಂತರು. ಆದರೂ, ಅವನ ಮಕ್ಕಳು ಪರಸ್ಪರವಾಗಿ ಮಾತ್ಸರ್ಯಯುಕ್ತ ರಾಗಿದ್ದುದರಿಂದ, ಮೊದಲಿನಲ್ಲಿ ಸ್ವಲ್ಪ ಕಾಲ ಆತನ ಪ್ರಯತ್ನಗಳಿಗೆ ಪೂರ್ಣವಾದ ಫಲವು ದೊರೆಯಲಿಲ್ಲ.

ಎಡ್ವರ್ಡ್ ದೊರೆಯು ಮರಣಾನಂತರ (ಅವನ ಮಗನಾದ ಬ್ಲ್ಯಾಕ್‌ಪ್ರಿನ್ಸ್ ಎಂಬವನು ಮೊದಲೇ ಸತ್ತು ಹೋಗಿದ್ದುದರಿಂದ) ಅವನ ಮೊಮ್ಮಗನಾದ ರಿಚರ್ಡ್ ಎಂಬಾತನು ಪಟ್ಟಕ್ಕೆ ಬಂದನು. ಈ ಎರಡನೆಯ ರಿಚರ್ಡ್ ದೊರೆಯು ಇನ್ನೂ ಹನ್ನೊಂದು ವರುಷ ವಯಸ್ಸಿನ ಬಾಲಕನಾಗಿದ್ದುದರಿಂದ ಅವನು ಪ್ರಾಪ್ತವಯಸ್ಕನಾಗುವವರೆಗೂ ರಾಜ್ಯದ ಆಡಳಿತಗಳನ್ನು ನಡೆಯಿಸುವುದಕ್ಕಾಗಿ ಒಂದು ಸಭೆಯು ಏರ್ಪಟ್ಟಿತು. ಸದಸ್ಯರನ್ನು ಪಾರ್ಲಿಮೆಂಟಿನವರೇ ನೇಮಿಸಿದರು. ಅಲ್ಲದೆ ಪಾರ್ಲಿಮೆಂಟಿನವರು ಸದಸ್ಯರ ಕಾರ್ಯಗಳನ್ನು ಪರಿಶೀಲಿಸುತ್ತಾ, ಅವಶ್ಯವಾದಾಗ ಹೊಸ ತೆರಿಗೆಗಳನ್ನು ವಿಧಿಸಿ, ಅವುಗಳನ್ನು ತಮ್ಮಿಂದ ನಿಯಮಿತರಾದ ಅಧಿಕಾರಿಗಳ ವಶಕ್ಕೆ ಕೊಡತಕ್ಕುದೆಂದು ಗೊತ್ತುಮಾಡಿ, ಹಾಗೆ ಬಂದ ಹಣವು ದುರುಪಯೋಗವಾಗದಂತೆ

ನೋಡಿಕೊಳ್ಳಲಾರಂಭಿಸಿದರು. ಈಗ, ಪಾರ್ಲಿಮೆಂಟಿನವರ ಅಧಿಕಾರವು ಮೊದಲಿಗಿಂತಲೂ ಹೆಚ್ಚಾಯಿತು.

ಆದರೂ, ಮೇಲೆ ಹೇಳಿದ ಸಭೆಯ ವಿಷಯದಲ್ಲಿ ಸ್ವಲ್ಪ ಕಾಲದಲ್ಲಿಯೇ ಪಾರ್ಲಿಮೆಂಟಿನವರಿಗೆ ಬೇಸರವು ಹುಟ್ಟಿತು. ಈ ಸಭೆಯ ಸದಸ್ಯರಲ್ಲೊಬ್ಬನಾಗಿಯೂ, ಮುಖ್ಯಮಂತ್ರಿಯಾಗಿಯೂ, ಇದ್ದ ಮಿಕೇಲ್ ಎಂಬಾತನು, ಬಹುಕಾಲದಿಂದಲೂ ಫ್ರಾನ್ಸಿನೊಡನೆ ಯುದ್ಧವು ನಡೆಯುತ್ತಿದ್ದುದರಿಂದ, ರಾಜ್ಯದಲ್ಲಿ ಇನ್ನು ಮುಂದೆ ಶಾಂತತೆಯು ನೆಲೆಗೊಳ್ಳುವುದು ಅವಶ್ಯವೆಂದು ನಂಬಿ, ಸಮಾಧಾನ ಮಾಡಿಕೊಳ್ಳಲಿಚ್ಛಿಸಿದನು. ಆದರೆ, ಪಾರ್ಲಿಮೆಂಟ್‌ಸಭೆಯಲ್ಲಿ ಪ್ರಮುಖರಾಗಿದ್ದ ಬ್ಯಾರನರೆಲ್ಲರೂ, ಯುದ್ಧವು ನಡೆಯುತ್ತಿದ್ದಾಗ ತಮಗೆ ವಿಶೇಷ ಧನವು ದೊರೆಯುತ್ತಿದ್ದುದೂ, ಯುದ್ಧಕಾಲದಲ್ಲಿ ತಮಗಿದ್ದ ಪ್ರಾಬಲ್ಯವೂ, ತಪ್ಪಿಹೋಗುವುವೆಂಬ ಭಯದಿಂದ ಯುದ್ಧವನ್ನು ನಿಲ್ಲಿಸಕೂಡದೆಂದು ಹೇಳಿದರು. ಅಲ್ಲದೆ, ಮಿಕೇಲನನ್ನು ಮಂತ್ರಿಪದವಿಯಿಂದ ತಪ್ಪಿಸಬೇಕೆಂದು ಕೋರಿದರು. ಬಾಲಕನಾಗಿದ್ದರೂ ರಿಚರ್ಡನು ಮಿಕೇಲನನ್ನು ಕೆಲಸದಿಂದ ತೆಗೆಯಲಾಗುವುದಿಲ್ಲವೆಂದು ಹೇಳಿದನು. ಒಡನೆಯೇ ಪ್ರತಿನಿಧಿಸಭೆಯವರು ಹಿಂದೆ ಎರಡನೆಯ ಎಡ್ವರ್ಡ್ ದೊರೆಯನ್ನು ದೊರೆತನದಿಂದ ತಪ್ಪಿಸಿ, ಅವನ ಮಗನನ್ನು ಪಟ್ಟಕ್ಕೆ ತಂದಾಗಿನ ನಿಬಂಧನೆಯನ್ನು ತರಿಸಿ ಓದಿಸಿದರು. ಇದು ರಿಚರ್ಡಿನ ಕಿವಿಗೆ ಬಿತ್ತು. ಕೂಡಲೆ, ತಮ್ಮ ಮುತ್ತಾತನ ಗತಿಯೇ ತನಗೂ ಬರಬಹುದೆಂದೂ ಅದನ್ನು ಸೂಚಿಸುವುದಕ್ಕಾಗಿಯೇ ಪಾರ್ಲಿಮೆಂಟಿನವರು ಹಾಗೆ ಮಾಡಿರಬಹುದೆಂದೂ, ಯೋಚಿಸಿ ರಿಚರ್ಡನು ಮಿಕೇಲನನ್ನು ಕೆಲಸದಿಂದ ತೆಗೆದು ಹಾಕಿದನು. ದೊರೆಯು ಇನ್ನೂ ಬಾಲಕನಾಗಿದ್ದುದರಿಂದ ರಾಜ್ಯದ ಆಡಳಿತಗಳನ್ನು ನಡೆಯಿಸುವುದಕ್ಕೆ ಪಾರ್ಲಿಮೆಂಟಿನವರು ಸ್ಥಾಪಿಸಿದ್ದ ಸಭೆಯಲ್ಲಿ, ಮೊದಲಿದ್ದ ಸದಸ್ಯರನ್ನೆಲ್ಲಾ ತೆಗೆದು ಬೇರೇ ಸದಸ್ಯರನ್ನು ನಿಯಮಿಸಬೇಕೆಂದು ಪ್ರಯತ್ನವು ನಡೆಯಲಾರಂಭವಾಯಿತು. ರಿಚರ್ಡನು ಇದನ್ನು ಸಹಿಸಲಾರದೆ ಹೀಗೆ ಮಾಡುವುದು ಅನ್ಯಾಯವೆಂದು ನ್ಯಾಯಾಧಿಪತಿಗಳೊಡನೆ ಹೇಳಿಸಿದನು. ಇದನ್ನು ಕೇಳಿ, ಸದಸ್ಯರನ್ನು ಬದಲಾಯಿಸುವ ವಿಷಯದಲ್ಲಿ ಪಾರ್ಲಿಮೆಂಟ್‌ಸಭೆಯ ಮೂಲಕವಾಗಿ ಹೋರಾಡುತ್ತಿದ್ದ ಗ್ಲಾಸ್ಟರಿನ ಡ್ಯೂಕನೇ ಮುಂತಾದವರಿಗೆ ಕೋಪಬಂದು ಬಂದು ದಂಗೆಯಾಯಿತು. ದೊರೆಯ ಕಡೆಯವರಿಗೆ ಅಪಜಯವಾಯಿತು. ಗ್ಲಾಸ್ಟರಿನ ಡ್ಯೂಕನೇ ಮುಂತಾದವರು ಆಡಳಿತಗಳನ್ನು ನಡೆಯಿಸುವಂತಾಯಿತು. ಬಳಿಕ ಸ್ವಲ್ಪ ಕಾಲದಲ್ಲಿಯೇ ರಿಚರ್ಡನು

ಪ್ರಾಪ್ತವಯಸ್ಕನಾದುದರಿಂದ, ಇವರ ಆಧಿಪತ್ಯವು ತಪ್ಪಿಹೋಯಿತು. ರಿಚರ್ಡನು ಪ್ರಭುತ್ವಮಾಡಲಾರಂಭಿಸಿ, ಕೆಲಕಾಲ ಅವನು ದರ್ಪದಿಂದ ರಾಜ್ಯವಾಳಿದನು. ತನಗೆ ವಿರೋಧವಾಗಿ ದಂಗೆಗೆ ಕಾರಣರಾಗಿದ್ದವರಲ್ಲಿ ಡರ್ಬಿಯ, ಮತ್ತು ನಾಟಿಂಘಾಮಿನ ಅರ್ಲುಗಳು ತನ್ನ ಕಡೆಗಿರುವಂತೆ ಮಾಡಿಕೊಂಡು ಉಳಿದವರನ್ನು ಶ್ರೀಮಂತಸಭೆಯ ವಿಚಾರಣೆಗೆ ಗುರಿಮಾಡಿ, ವಿಚಾರಣೆಗೆ ಆರಂಭವಾಗುವುದಕ್ಕೆ ಮುಂಚೆಯೇ ಗ್ಲಾಸ್ಟರಿನ ಡ್ಯೂಕನನ್ನು ಕೊಲ್ಲಿಸಿ, ಬಳಿಕ ಅರಂಡೇಲಿನ ಅರ್ಲಿಗೆ ಮರಣದಂಡನೆಯೂ, ವಾರ್ವಿಕ್ಕಿನ ಅರ್ಲಿಗೆ ದೇಶಾಂತರವಾಸವೂ, ವಿಧಿಸಲ್ಪಡುವಂತೆ ಮಾಡಿದನು. ಅಲ್ಲಿಗೆ ಪ್ರಮುಖರಾಗಿದ್ದ ದೊಡ್ಡಮನುಷ್ಯರ ಪ್ರಾಬಲ್ಯವು ಅಡಗಿಹೋಯಿತು. ಆದಕಾರಣ ಪಾರ್ಲಿಮೆಂಟಿನವರು ದೊರೆಗೆ ಪ್ರತಿಭಟಿಸದಂತಾಯಿತು. ರಿಚರ್ಡನು ಪಾರ್ಲಿಮೆಂಟ್ ಸಭೆಯನ್ನು ಸೇರಿಸಿ, ತನ್ನವೆಚ್ಚಕ್ಕೆ ಆಗಾಗ ಹಣವನ್ನು ಕೊಡುವಪದ್ಧತಿಯನ್ನು ನಿಲ್ಲಿಸಿ, ಒಟ್ಟಿಗೆ ತನ್ನ ಜೀವನಪರ್ಯಂತವೂ ಯಾವ ಯಾವ ತೆರಿಗೆಗಳಿಂದ ತನಗೆ ಹಣವು ಬರಬೇಕೆಂಬುದನ್ನು ಗೊತ್ತುಮಾಡಬೇಕೆಂದೂ, ಪಾರ್ಲಿಮೆಂಟಿನವರು ಆಡಳಿತಗಳನ್ನು ಹದಿನೆಂಟು ಮಂದಿ ಸದಸ್ಯರಿಂದ ಕೂಡಿದ ಉಪಸಭೆಗೆ ವಹಿಸಬೇಕೆಂದೂ, ಪಾರ್ಲಿಮೆಂಟಿನವರನ್ನು ನಿರ್ಬಂಧಿಸಿದನು. ಈ ಉಪಸಭೆಯಲ್ಲಿದ್ದ ಸದಸ್ಯರೆಲ್ಲರೂ ದೊರೆಗೆ ಬೇಕಾಗಿದ್ದವರೇ ಆಗಿದ್ದರು; ಮಿಕೇಲನೇ ಮುಂತಾದವರಿಗೆ ವಿರೋಧವಾಗಿ ವಿಧಿಸಿದ್ದ ನಿಬಂಧನೆಗಳನ್ನು ತೆಗೆದುಹಾಕಬೇಕೆಂದೂ ಗೊತ್ತುಮಾಡಿಕೊಂಡನು. ಹೀಗೆ ಕ್ಷಣಮಾತ್ರದಲ್ಲಿ ಪಾರ್ಲಿಮೆಂಟಿನವರ ಹಕ್ಕುಗಳೆಲ್ಲಾ ಹೊರಟುಹೋದುವು.

ಬಳಿಕ ರಿಚರ್ಡನು ನಿರಂಕುಶಪ್ರವರ್ತನೆಗೆ ಮೊದಲುಮಾಡಿದನು. ತನ್ನ ಕಡೆಯವರಿಂದ ತುಂಬಿದ್ದ ಉಪಸಭೆಯು ನ್ಯಾಯವನ್ನು ತೀರ್ಮಾನ ಮಾಡುವಂತೆಯೂ, ನಿಬಂಧನೆಗಳನ್ನು ಮಾಡುವಂತೆಯೂ, ಏರ್ಪಡಿಸಿದನು; ಪ್ರಜೆಗಳು ತನಗೆ ಸಾಲವಾಗಿ ಹಣವನ್ನು ಕೊಡಬೇಕೆಂದು ನಿರ್ಬಂಧಿಸಿದನು; ಹಣವನ್ನು ತೆಗೆದುಕೊಂಡು ಅಪರಾಧಿಗಳನ್ನು ಬಿಡುಗಡೆ ಮಾಡಿದನು; ಪ್ರಬಲರಾಗಿದ್ದ ದೊಡ್ಡಮನುಷ್ಯರಲ್ಲಿ ಶಿಕ್ಷೆಯಾಗದೆ ಉಳಿದುಕೊಂಡಿದ್ದ ಹರ್ಫರ್ಡಿನ ಅರ್ಲ್ ಆದ ಹೆನ್ರಿಯನ್ನೂ (Henry, Earl of Hereford) ನಾರ್ಫಕ್ಕಿನ ಅರ್ಲನ್ನೂ (Earl of Norfolk) ಗಡೀಪಾರು ಮಾಡಿದನು.

ಈ ವಿಧವಾದ ನಡೆವಳಿಕೆಯಿಂದ ಅನೇಕ ಅನರ್ಥಗಳುಂಟಾದುವು. ದೊರೆಯ ನಿರಂಕುಶ ಪ್ರವರ್ತನೆಯಿಂದ ಬ್ಯಾರನರೆಲ್ಲರಿಗೂ ಬೇಸರವುಂಟಾಯಿತು. ಅರಂಡೇಲಿನ ಅರ್ಲಿನ ತಮ್ಮನಾಗಿದ್ದ ಕ್ಯಾಂಟರ್‌ಬರಿಯ

ಆರ್ಚ್‌ಬಿಷಪ್ಪನನ್ನು ರಿಚರ್ಡನು ಗಡೀಪಾರುಮಾಡಿದುದರಿಂದ, ಮತಾಧಿಕಾರಿಗ
ಳೆಲ್ಲರಿಗೂ ಅವನನ್ನು ಕಂಡರೆ ಆಗದಂತಾಯಿತು. ಹೊಸದಾಗಿ ತೆರಿಗೆಗಳನ್ನು
ಹಾಕುವುದೇ ಮುಂತಾದುವುಗಳಿಂದ, ರಿಚರ್ಡನು ಪ್ರಜೆಗಳಿಗೆ ತೊಂದರೆಯ
ನ್ನುಂಟುಮಾಡಿದ್ದುದರಿಂದ ಅವರಿಗೆ ಅವನಲ್ಲಿ ದ್ವೇಷವು ಹುಟ್ಟಿತು. ಇದನ್ನೆಲ್ಲಾ
ಅರಿತುಕೊಂಡಿದ್ದ ಹೆರ್‌ಫರ್ಡಿನ ಅರ್ಲ್ ಆದ ಹೆನ್ರಿಯು, ದೊರೆಯು ಐರ್ಲೆಂಡಿಗೆ
ಹೋಗಿದ್ದಾಗ, ಇಂಗ್ಲೆಂಡಿನಲ್ಲಿ ಆತನಿಗೆ ವಿರೋಧವಾಗಿದ್ದ ಪಂಗಡಕ್ಕೆ ಮುಖ್ಯಸ್ಥ
ನಾಗಿ ನಿಂತನು. ಜನಾಂಗವೇ ಈ ಪಂಗಡದವರಿಗೆ ಸಹಾಯ ಮಾಡಲು
ಸಿದ್ಧವಾಗಿತ್ತು. ರಿಚರ್ಡನು ಹಿಂದಿರುಗಿ ಬಂದೊಡನೆಯೇ ಬಂದಿಯಾದನು;
ಅಲ್ಲದೆ ಅವನು ದೊರೆತನಕ್ಕೆ ರಾಜೀನಾಮೆಯನ್ನು ಕೊಟ್ಟು ಅದಕ್ಕಾಗಿ
ತಾನು ಬರೆದಿದ್ದ ಪತ್ರವನ್ನು ಪಾರ್ಲಿಮೆಂಟ್ ಸಭೆಗೆ ಕಳುಹಿಸಿದನು. ಸಭೆಯ
ವರು ಆತನ ಕೆಟ್ಟನಡತೆಗಳನ್ನೆಲ್ಲಾ ಹೇಳಿ, ಸಿಂಹಾಸನವು ಖಾಲಿಯಾಗಿದ್ದುದಾಗಿ
ನಿರ್ಧರಿಸಿದರು. ಲ್ಯಾಂಕ್ಯಾಸ್ಟರ್ ಮನೆತನಕ್ಕೆ ಸೇರಿದ ಹೆನ್ರಿಯು ಪಟ್ಟಕ್ಕೆ
ಬಂದನು. ರಿಚರ್ಡನು ಕಾರಾಗೃಹದಲ್ಲಿ ಮೃತನಾದನು.

ರಿಚರ್ಡ್ ದೊರೆಯ ಆಳಿಕೆಯ ಮೂರು ಮುಖ್ಯಸಂಗತಿಗಳನ್ನು ನೆನಪಿ
ನಲ್ಲಿಡಬೇಕು: (೧) ಪ್ರತಿನಿಧಿಸಭೆಗೆ ಇನ್ನೂ ಸರಿಯಾದ ಚೈತನ್ಯವು ಬಂದಿರ
ಲಿಲ್ಲವಾದುದರಿಂದ, ದೊರೆಯು ಪ್ರಬಲನಾಗಿದ್ದರೆ ದೊರೆಯೂ, ಬ್ಯಾರನರು
ಪ್ರಬಲರಾಗಿದ್ದರೆ ಬ್ಯಾರನರೂ, ಸಭೆಯ ಸಹಾಯವನ್ನು ಪಡೆಯ ಬಹುದಾ
ಗಿತ್ತು. (೨) ತಮಗೆ ತಕ್ಕ ಮುಖ್ಯಸ್ಥರು ಮಾರ್ಗದರ್ಶಿಗಳಾಗಿ ನಿಲ್ಲುವು
ದಾದರೆ, ದೊರೆಯ ನಿರಂಕುಶ ಪ್ರವರ್ತನೆಗೆ ಇಂಗ್ಲಿಷ್ ಜನರು ಪ್ರತಿಭಟಿಸು
ತ್ತಿದ್ದರು. ಆದರೆ ಬ್ಯಾರನರಲ್ಲಿ ಪ್ರಮುಖರಾಗಿದ್ದವರು ಮಾತ್ರವೇ ಹೀಗೆ
ಮುಖ್ಯಸ್ಥರಾಗಿ ನಿಲ್ಲುತ್ತಿದ್ದರು. ಅವರು ದುರ್ಬಲರಾಗಿದ್ದು ಪ್ರಜೆಗಳಿಗೆ
ಮಾರ್ಗದರ್ಶಿಗಳು ದೊರೆಯದೆ ಇದ್ದಾಗ, ಅವರು ದೊರೆಗೆ ಪ್ರತಿಹೇಳ
ಲಾಗುತ್ತಿರಲಿಲ್ಲ. (೩) ಮೂರನೆಯ ಎಡ್ವರ್ಡ್ ದೊರೆಯು ಬಳಯಿಸಿದ
ಸಂಬಂಧಗಳಿಂದ ಹಿಂದೆ ಹೇಳಿರುವಂತೆ ಒಂದು ವಿಧದಲ್ಲಿ ರಾಜಮನೆತನದವರಿಗೆ
ಅನುಕೂಲವಾಗಿದ್ದರೂ ಕೂಡ, ಸಿಂಹಾಸನಕ್ಕೆ ಸರಿಯಾದ ಹಕ್ಕುದಾರರು
ಗೊತ್ತಾಗದೇ ಇರುವ ವೇಳೆಯಲ್ಲಿ ರಾಜಮನೆತನಕ್ಕೆ ಸೇರಿದವರಲ್ಲಿ ಪರಸ್ಪರ
ವಾಗಿ ಜಗಳವು ಬರುವುದಕ್ಕುಪಕ್ರಮವಾಯಿತು.

ನಾಲ್ಕನೆಯ ಹೆನ್ರಿದೊರೆಯು ಪಾರ್ಲಿಮೆಂಟ್ ಸಭೆಯನ್ನು ತನ್ನ ಕಡೆಗೆ
ಬರಮಾಡಿಕೊಂಡು ಅದರ ಮೂಲಕವಾಗಿ ಬ್ಯಾರನರೇ ಮುಂತಾದವರ ಪ್ರಾಬಲ್ಯ

ವನ್ನು ತಡೆದು ನಿಲ್ಲಿಸಲಾರಂಭಿಸಿದನು. ಅವನ ಸ್ಥಾನವು ಇನ್ನೂ ಬಲಪಟ್ಟಿರಲಿಲ್ಲವಾದುದರಿಂದ ಹೀಗೆ ಮಾಡುವುದು ಅವಶ್ಯವಾಗಿತ್ತು. ಮತಾಧಿಕಾರಿಗಳಿಗೂ ಪ್ರತಿನಿಧಿಸಭೆಯುವರಿಗೂ ವಿರುದ್ಧಭಾವವಿತ್ತು. ಹೆನ್ರಿಯು ಲ್ಯಾಂಕ್ಯಾಸ್ಟರ್ ಮನೆತನಕ್ಕೆ ಆಗ ಸೇರಿದ್ದ ಸ್ವತ್ತನ್ನೂ ಹಿಂದೆ ದೊರೆಗೆ ಸೇರಿದ್ದು ತನ್ನವಶಕ್ಕೆದೊರೆತಿದ್ದ ಸ್ವತ್ತನ್ನೂ ತನ್ನ ಕೈಯಲ್ಲಿಯೇ ಇಟ್ಟುಕೊಂಡಿದ್ದನು. ಅಲ್ಲದೆ ತನ್ನ ವಶದಲ್ಲಿ 'ರೀಟೇನರ್ಸ್' (Retainers) ಎಂಬ ಸೇವಕರನ್ನಿಟ್ಟುಕೊಂಡಿದ್ದನು. ಬ್ಯಾರನರಿಗೆ ಉಳಿದಿದ್ದ ಅಲ್ಪ ಸ್ವಲ್ಪ ಪ್ರಾಬಲ್ಯವನ್ನೂ ಮುರಿಯಬೇಕೆಂಬುದೇ ಅವನ ಉದ್ದೇಶವಾಗಿತ್ತು. ಇದಕ್ಕಾಗಿ, ಮತಾಧಿಕಾರಿಗಳು ತನ್ನ ಕಡೆಗಿರುವಂತೆ ಮಾಡಿಕೊಂಡು, ಅವರು ಮತಪದ್ಧತಿಗೆ ವಿರೋಧವಾಗಿ ನಡೆದವರೆಂದು ಹೇಳಿದವರನ್ನೆಲ್ಲಾ ಅವನು ಸುಡಿಸಲಾರಂಭಿಸಿದನು. ಅಲ್ಲದೆ, ಪ್ರತಿನಿಧಿಸಭೆಯುವರಿಗೆ ಅವರು ರಾಜ್ಯದ ಆದಾಯವ್ಯಯದ ಲೆಕ್ಕಗಳನ್ನು ಪರೀಕ್ಷಿಸುವುದೇ ಮುಂತಾದ ಅಧಿಕಾರಗಳನ್ನು ಕೊಟ್ಟು, ಅವರ ಕೋರಿಕೆಯುಪ್ರಕಾರ ತನ್ನ ಸಭೆಗಳನ್ನು ಬರಮಾಡಿಸಿ, ಅವರು ತನ್ನ ಕಡೆಗಿರುವಂತೆ ಮಾಡಿಕೊಂಡನು. ವಸ್ತುತಃ ಇಲ್ಲದೇ ಇದ್ದರೂ ಹೊರಗ್ಗೆ ನೋಡುವವರಿಗೆ ಮಾತ್ರ ಪ್ರತಿನಿಧಿಸಭೆಯುವರು ಬಹಳ ಬಲಿಷ್ಠರಾಗಿದ್ದಂತೆ ಕಾಣಬರುತ್ತಿತ್ತು. ಒಟ್ಟಿನಲ್ಲಿ ಹೆನ್ರಿಯು ದರ್ಪದಿಂದ ರಾಜ್ಯವಾಳಿದನು. ಅವನ ಮಗನಾದ ಐದನೆಯ ಹೆನ್ರಿ ದೊರೆಗೆ ರಾಜ್ಯವು ಬಂದಾಗ ರಾಜ್ಯವು ಬಹಳ ಸಮಾಧಾನಸ್ಥಿತಿಯಲ್ಲಿತ್ತು.

ಐದನೆಯ ಹೆನ್ರಿ ದೊರೆಯು ಪರರಾಜರ ಮೇಲೆ ಯುದ್ಧಮಾಡುವುದರಲ್ಲೇ ಕಾಲವನ್ನು ಕಳೆದನು; ಬ್ಯಾರನರೆಲ್ಲರಿಗೂ ಯುದ್ಧವು ಬಹಳ ಪ್ರಿಯವಾಗಿತ್ತು. ಆದುದರಿಂದ ಅವರೆಲ್ಲರೂ ಹೆನ್ರಿಯ ಕಡೆಗೆ ಸೇರಿದರು. ಈ ದೊರೆಯ ಕಾಲದಲ್ಲಿ ಪಾರ್ಲಿಮೆಂಟ್ ಸಭೆಯುವರು ದುರ್ಬಲರಾಗುತ್ತಾ ಬಂದರು. ಅಜಿನ್‌ಕೋರ್ಟ್ (Agincourt) ಕದನದಲ್ಲಿ ಹೆನ್ರಿಯು ಜಯಶಾಲಿಯಾಗಿ ಬಂದೊಡನೆಯೇ, ಪಾರ್ಲಿಮೆಂಟಿನವರು ಆಜೀವನಪರ್ಯಂತರವೂ ಅವನ ವೆಚ್ಚಕ್ಕಾಗಿ ಯಾವ ತೆರಿಗೆಗಳಿಂದ ಅವನಿಗೆ ಹಣವು ದೊರೆಯತಕ್ಕುದೆಂಬುದನ್ನು ಗೊತ್ತುಮಾಡಿದರು. ಈ ದೊರೆಯ ಕಾಲವು ಯುದ್ಧಮಾಡುವುದರಲ್ಲೇ ಕಳೆದುದರಿಂದ, ಈತನ ಕಾಲದಲ್ಲಿ ಪ್ರಭುತ್ವಕ್ರಮವು ಅಷ್ಟೇನೂ ಅಭಿವೃದ್ಧಿಯಾಗಲಿಲ್ಲ. ಈತನ ಕಾಲಾನಂತರ ಇವನ ಮಗನಾದ ಆರನೆಯ ಹೆನ್ರಿ ದೊರೆಯು ಸಿಂಹಾಸನವನ್ನೇರಿದನು.

ಅವನು ಇನ್ನೂ ಬಾಲಕನಾಗಿದ್ದುದರಿಂದ ರಾಜ್ಯದ ಆಡಳಿತಗಳನ್ನು ನಡೆಯಿಸುವುದಕ್ಕಾಗಿ ಪಾರ್ಲಿಮೆಂಟಿನವರು ಒಂದು ಸಭೆಯನ್ನು ನಿಯಮಿಸಿ

ದರು. ಈ ಸಭೆಯಲ್ಲಿ ಅನೇಕ ದೊಡ್ಡಮನುಷ್ಯರೂ, ದೊರೆಯ ಚಿಕ್ಕಪ್ಪನಾದ ಗ್ಲಾಸ್ಟರಿನ ಡ್ಯೂಕನೂ ಸೇರಿದ್ದುದರಿಂದ, ಈ ಸಭೆಯವರು ಪಾರ್ಲಿಮೆಂಟಿನವರ ಹಕ್ಕುಗಳನ್ನೆಲ್ಲಾ ಕ್ರಮಕ್ರಮವಾಗಿ ತಾವು ಆಕ್ರಮಿಸತೊಡಗಿದರು.

ಈ ಸಭೆಯವರು ಬಲಿಷ್ಠರಾಗುತ್ತಾ ಬಂದಹಾಗೆಲ್ಲಾ ಪಾರ್ಲಿಮೆಂಟಿನವರು ದುರ್ಬಲರಾಗುತ್ತಾ ಬಂದರು. ಪ್ರತಿನಿಧಿ ಸಭೆಯವರು ದೊರೆಯ ವೆಚ್ಚಕ್ಕೆ ಆಗಾಗ ಹಣವನ್ನು ಕೊಡುವುದನ್ನು ಬಿಟ್ಟು ಟನೇಜ್ ಮತ್ತು ಪಾಂಡೇಜ್ (Tonnage and Poundage) ಎಂಬ ತೆರಿಗೆಗಳಿಂದ ದೊರೆಯು ಬದುಕಿರುವವರೆಗೂ ಆತನ ವೆಚ್ಚಕ್ಕೆ ಹಣವು ಬರತಕ್ಕುದೆಂದು ಗೊತ್ತುಮಾಡಿದರು. ಯಾವಾಗ ದೊರೆಯು ವೆಚ್ಚಕ್ಕೆ ಹಣವು ಸಿಕ್ಕಿತೋ ಆಗ ಅವನು ಪಾರ್ಲಿಮೆಂಟಿನವರನ್ನು ಅನುಸರಿಸಬೇಕಾದ ಆವಶ್ಯಕತೆಯು ತಪ್ಪಿಹೋಯಿತು. ಮೂರನೆಯ ಎಡ್ವರ್ಡ್ ದೊರೆಯು ಬ್ಯಾರನರೇ ಮೊದಲಾದವರಲ್ಲಿ ಪ್ರಬಲರಾಗಿದ್ದವರೊಡನೆ ಬಾಂಧವ್ಯವನ್ನು ಬಳೆಯಿಸಿ, ಫ್ರಾನ್ಸಿನೊಡನೆ ನಡೆಯುತ್ತಿದ್ದ ಯುದ್ಧದಲ್ಲಿಯೇ ಉಳಿದವರ ಮನಸ್ಸು ಮಗ್ನವಾಗುವಂತೆ ಮಾಡಿದುದರಿಂದ ಅವರು ದೊರೆಯ ಪಕ್ಷವನ್ನು ಬಿಟ್ಟು ಪಾರ್ಲಿಮೆಂಟಿನವರೊಡನೆ ಸೇರಿ ಕೆಲಸವನ್ನು ನಡೆಯಿಸಲು ಅವಕಾಶವಿರಲಿಲ್ಲ. ಬ್ಯಾರನರ ಸಹಾಯವು ತಪ್ಪಿದುದರಿಂದ, ಪಾರ್ಲಿಮೆಂಟಿನವರು ಸ್ವಲ್ಪಮಟ್ಟಿಗೆ ದುರ್ಬಲರಾಗಿದ್ದರು. ವಾರ್ಸ್ ಆಫ್ ದಿ ರೋಸಸ್ (Wars of the Roses) ಎಂಬ ಯುದ್ಧವು ಆರಂಭವಾದ ಮೇಲೆ ಪಾರ್ಲಿಮೆಂಟಿನವರ ಶಕ್ತಿಯು ಬಹಳ ಕಡಿಮೆಯಾಗಿ ಹೋಯಿತು. ಈ ಯುದ್ಧವು ಯಾರ್ಕ್ (York) ಮನೆತನದವರಿಗೂ, ಲ್ಯಾಂಕ್ಯಾಸ್ಟರ್ (Lancaster) ಮನೆತನದವರಿಗೂ ನಡೆಯಿತು. ತಮಗೆ ಪ್ರಾಮುಖ್ಯತೆಯುಬಂದು ತಮ್ಮ ಮನೆತನದವರಿಗೆ ರಾಜ್ಯವಾಗಬೇಕೆಂದು ಯಾರ್ಕ್‌ಮನೆತನದವರು ಇಚ್ಛೈಸಿದುದೇ ಈ ಯುದ್ಧಕ್ಕೆ ಕಾರಣವಾಗಿರುತ್ತದೆ. ಯುದ್ಧರಂಗದಲ್ಲಿ ಪರಸ್ಪರವಾಗಿ ಒಬ್ಬರನ್ನೊಬ್ಬರು ಗುರುತಿಸುವುದಕ್ಕಾಗಿ, ಒಂದುಸಂಗಡದ ಸೈನಿಕರು ಬಿಳಿಯ ಗುಲಾಬಿಯ ಹೂಗಳ ಅಂಕಿತವುಳ್ಳ 'ದವಾಲಿ' ಗಳನ್ನೂ, ಮತ್ತೊಂದು ಸಂಗಡದ ಸೈನಿಕರು ಕೆಂಪುಗುಲಾಬಿಯ ಹೂಗಳ ಅಂಕಿತವುಳ್ಳ ದವಾಲಿಗಳನ್ನೂ ಧರಿಸಿದ್ದುದರಿಂದ ಈ ಯುದ್ಧಕ್ಕೆ "ವಾರ್ಸ್ ಆಫ್ ದಿ ರೋಸಸ್" (ಎಂದರೆ ಗುಲಾಬಿ ಹೂಗಳ ಯುದ್ಧ) ಎಂಬ ಹೆಸರು ಬಂತು. ಬ್ಯಾರನರೆಲ್ಲರೂ ಈ ಯುದ್ಧದಲ್ಲಿಯೇ ಆಸಕ್ತರಾಗಿದ್ದುದರಿಂದ ಪಾರ್ಲಿಮೆಂಟ್ ಸಭೆಯು ಅವರ ಸಹಾಯವನ್ನು ಪಡೆದು ಪ್ರಾಬಲ್ಯವನ್ನು ಹೊಂದುವುದು ಕಷ್ಟವಾಯಿತು. ಈ ಯುದ್ಧವು ಮುಗಿಯುವ ವೇಳೆಗೆ ಅನೇಕ ಬ್ಯಾರನರು ಸತ್ತುಹೋದರು; ಉಳಿದವರು ಸಂಪತ್ತನ್ನು ಕಳೆದುಕೊಂಡು ಬಹಳ ದುರ್ಬಲ

ರಾದರು. ಆದುದರಿಂದ ಈ ಯುದ್ಧವು ಮುಗಿದ ಮೇಲೆ ನಿರಂಕುಶ ಪ್ರವರ್ತನೆಯು ನೆಲೆಗೊಳ್ಳುವಂತಾಯಿತು. ಹೀಗಾಗುವುದಕ್ಕೆ ಮತ್ತೆ ಕೆಲವು ಕಾರಣಗಳೂ ಇದ್ದುವು. (೧) ಹದಿನೈದನೆಯ ಶತಮಾನದಲ್ಲಿ ಯೂರೋಪಿನಲ್ಲಿ ಆಧುನಿಕ ಕಾಲದ ಆಗಮನವನ್ನು ಸೂಚಿಸುವ ಅನೇಕ ಬದಲಾವಣೆಗಳಾಗುತ್ತಿದ್ದುವು: (೨) ಫ್ಯೂಡಲಿಸಮ್ ಪದ್ಧತಿಯು ನಾಶವಾಗುತ್ತಾ ಬಂದು ಹೊಸ ವಿಧದ ಸಮಾಜವು ಏರ್ಪಡುತ್ತಿತ್ತು. (೩) ನಾಗರಿಕತೆಯು ಹೆಚ್ಚುತ್ತಿತ್ತು. (೪) ಪ್ರಾಣವೂ, ಸ್ವತ್ತೂ ಸುರಕ್ಷಿತವಲ್ಲವೆಂದು ಜನರೆಲ್ಲರಿಗೂ ತೋರಿತು. ಸಾಂಕುಶ ಪ್ರಭುತ್ವವಾದರೂ ಇರಲಿ ಇಲ್ಲವೇ ನಿರಂಕುಶ ಪ್ರಭುತ್ವವಾದರೂ ಇರಲಿ, ತಾವು ನೆಮ್ಮದಿಯಾಗಿರುವಂತಾದರೆ ಸಾಕೆಂದು ಜನರೆಲ್ಲರೂ ಬಯಸಿದರು. (೫) ಯುದ್ಧವು ನಡೆದು ನಡೆದು ಪ್ರಜೆಗಳಿಗೆಲ್ಲಾ ಬೇಸರವಾಗಿತ್ತು. ನ್ಯಾಯವಾಗಿ ರಾಜ್ಯವನ್ನಾಳಿ, ಯುದ್ಧಕ್ಕೆ ಅವಕಾಶ ಕೊಡದೆ ಇರುವ ಯಾವ ದೊರೆಗಾದರೂ ಬೆಂಬಲವಾಗಿ ನಿಲ್ಲಲು ಅವರು ಸಿದ್ಧವಾಗಿದ್ದರು. ಆದುದರಿಂದಲೇ ನಾಲ್ಕನೆಯ ಎಡ್ವರ್ಡ್ ದೊರೆಯ ಮತ್ತು ಏಳನೆಯ ಹೆನ್ರಿ ದೊರೆಯ ನಿರಂಕುಶ ಪ್ರಭುತ್ವವು ಸಾಗಿತು. (೬) ಜನರು ಹಣಗಾರರಾಗಬೇಕೆಂದು ಇಚ್ಛಿಸುತ್ತಾ ಅದಕ್ಕೆ ಬೇಕಾದ ಸ್ವಾಸ್ಥ್ಯವನ್ನೂ, ಸಮಾಧಾನಸ್ಥಿತಿಯನ್ನೂ ಬಯಸುತ್ತಿದ್ದರು. ರಾಜ್ಯದಲ್ಲಿ ಶಾಂತಿಯು ಇಲ್ಲದೆ ಯುದ್ಧವು ನಡೆಯುತ್ತಿದ್ದರೆ ವಾಣಿಜ್ಯವು ವೃದ್ಧಿಯಾಗದು. ವಾಣಿಜ್ಯವಿಲ್ಲದೆ ಪ್ರಜೆಗಳು ಧನಿಕರಾಗುವುದು ಅಸಾಧ್ಯ. ಆದುದರಿಂದ ಪ್ರಜೆಗಳು ಯಾವ ಪ್ರಭುತ್ವವಿದ್ದರೂ ಸರಿ; ರಾಜ್ಯದಲ್ಲಿ ಶಾಂತತೆಯು ನೆಲಸಿದರೆ ಸಾಕು ಎಂದು ಕೋರುತ್ತಿದ್ದರು. ಆದಕಾರಣ ಮುಂದೆ ಬ್ಯಾರನರ ಅಧಿಕಾರಕ್ಕೇ ಆಗಲಿ ಪಾರ್ಲಿಮೆಂಟಿನ ಆಧಿಪತ್ಯಕ್ಕೇ ಆಗಲಿ, ಒಳಪಡದೆ ನಿರಂಕುಶವಾದ ರೀತಿಯಲ್ಲಿ ದೊರೆಯು ರಾಜ್ಯವಾಳ ತೊಡಗಿದನು. ಪಾರ್ಲಿಮೆಂಟ್ ಸಭೆಯು ದುರ್ಬಲವಾಯಿತು. ಪ್ರಿವಿ ಕೌನ್ಸಿಲ್ ಸಭೆಯು ಬಹಳ ಪ್ರಾಬಲ್ಯವನ್ನು ಹೊಂದಿ ದೊರೆಯ ವಶದಲ್ಲಿಯೇ ಇತ್ತು. ಆದುದರಿಂದ ನಿರಂಕುಶಪ್ರಭುತ್ವಕ್ಕೆ ಅನುಕೂಲವಾಯಿತು.

---

## ಹತ್ತನೆಯ ಪ್ರಕರಣ.

### “ರೆನೇಸಾನ್ಸ್” ಮತ್ತು ಟ್ಯೂಡರ್ ಸಂತತಿಯ ದೊರೆಗಳು ಎಂಬ ವಿಚಾರ.

ಈ ಹದಿನೈದನೆಯ ಶತಮಾನದಲ್ಲಿ ‘ರೆನೇಸಾನ್ಸ್’ (Renaissance) ಎಂಬ ಜ್ಞಾನಪ್ರಸಾರಣಸಂಬಂಧವಾದ ಚಳವಳದಿಂದ ಯೂರೋಪುಖಂಡವು ಅನೇಕ ಪರಿಷ್ಕರಣಗಳನ್ನು ಹೊಂದಿತು. ಕಾನ್ಸ್ಟ್ಯಾಂಟಿನೋಪಲ್

(Constantinople) ಪಟ್ಟಣವು ಶತ್ರುಗಳ ವಶವಾಗಿ ಅಲ್ಲಿದ್ದವರಲ್ಲಿ ಅನೇಕ ಮಂದಿಗಳು ದಿಕ್ಕುಕೆಟ್ಟು ಓಡಿ ಬಂದು ಯೂರೋಪು ಖಂಡದ ಇತರ ದೇಶಗಳಲ್ಲಿ ನೆಲೆಯಾದರು. ಅವರೆಲ್ಲರೂ ಬಹಳ ವಿದ್ಯಾವಂತರಾಗಿದ್ದರು. ಅವರೊಡನೆ ಅನೇಕ ಪುಸ್ತಕಗಳನ್ನು ತಂದಿದ್ದರು. ಇದುವರೆಗೆ ಪುಸ್ತಕಗಳನ್ನೆಲ್ಲಾ ಕೈಯಿಂದಲೆ ಬರೆಯಬೇಕಾಗಿತ್ತು. ಆದುದರಿಂದ ಪುಸ್ತಕಗಳ ಬೆಲೆಯು ಬಹಳ ಹೆಚ್ಚಾಗಿತ್ತು. ಓದುಬರೆಹಗಳನ್ನು ಕಲಿತವರ ಸಂಖ್ಯೆಯು ತೀರ ಕಡಿಮೆಯಾಗಿತ್ತು. ಈ ವೇಳಗೆ ಅಚ್ಚುಹಾಕುವ ಕಲೆಯನ್ನು ಕಂಡುಹಿಡಿದಿದ್ದುದರಿಂದ ಅಚ್ಚುಹಾಕಿದ ಪುಸ್ತಕಗಳು ಸುಲಭಕ್ರಯಕ್ಕೆ ದೊರೆತು ವಿದ್ಯಾಪ್ರಚಾರವಾಗಲು ಅವಕಾಶವಾಯಿತು. ಇದರಿಂದ ಯೂರೋಪಿನವರೆಲ್ಲರೂ ಸತ್ಯವೇದವೇ(Bible) ಮುಂತಾದ ಗ್ರಂಥಗಳನ್ನು ಓದಿಕೊಂಡು ಬಹಳ ಬುದ್ಧಿವಂತರಾದರು. ಈ ಬಟ್ಟು ಬದುಲಾವಣೆಗಳಿಗೆ ರೆನೇಸಾನ್ಸ್ಎಂಬ ಹೆಸರು ಬಂತು. ಜನರು ಮತಸಿದ್ಧಾಂತಗಳನ್ನು ಚೆನ್ನಾಗಿ ಅರಿತುಕೊಂಡು ಪೋಪರೇ ಮುಂತಾದವರೆಲ್ಲರೂ ಶಾಸ್ತ್ರರೀತಿಯಾಗಿ ನಡೆಯದೆ ಇದ್ದುದಕ್ಕಾಗಿ ಪ್ರತಿಭಟಿಸಿ ನಿಂತು, ಮತಪರಿಷ್ಕರಣಗಳಾಗಬೇಕೆಂದು ವಾದಿಸತೊಡಗಿದರು. ಈ ವಿಚಾರಕ್ಕೆ ರೆಫರ್ಮೇಷನ್ ಎಂದು ಹೆಸರು. ರೆಫರ್ಮೇಷನ್ (Reformation) ಎಂಬುದರ ದೆಸೆಯಿಂದ ಪ್ರಾಟೆಸ್ಟೆಂಟ್ ಮತವು ಹುಟ್ಟಿತು. ಈ ವೇಳಗೆ ಅಮೇರಿಕಾ ಖಂಡವು ಕಂಡುಹಿಡಿಯಲ್ಪಟ್ಟು ನ್ಯೂವರ್ಲ್ಡ್ (New World) ಎಂದರೆ ನೂತನಪ್ರಪಂಚವೆಂದು ಪ್ರಖ್ಯಾತವಾಯಿತು. ಇದರಿಂದ ಜನರಿಗೆ ಉತ್ಸಾಹಹೆಚ್ಚಿ ಸಮುದ್ರಯಾನದಲ್ಲಿ ಬಹಳ ಅಭಿಲಾಷೆಯುಂಟಾಯಿತು. ವಾಣಿಜ್ಯವು ಬಹಳ ಅಭಿವೃದ್ಧಿಯಾಗುತ್ತಾ ಬಂತು. ಬಂದೂಕದ ಮದ್ದು, ಬಂದೂಕಗಳೂ ಪ್ರಚಾರಕ್ಕೆಬಂದುವು. ಇವುಗಳ ಮಾಹಾತ್ಮ್ಯದಿಂದ ಬ್ಯಾರನರ ಪ್ರಾಬಲ್ಯವು ಕರಗಿಹೋಯಿತು. ಅವರ ದುರ್ಗಗಳಿಂದ ಬ್ಯಾರನರಿಗೆ ಪ್ರಯೋಜನವಿಲ್ಲದೆ ಹೋಯಿತು. ಫ್ಯೂಡಲಿಸಮ್ ಪದ್ಧತಿಗೊಳಪಟ್ಟು ಬ್ಯಾರನರೇ ಮೊದಲಾದವರು ಕರೆದಾಗ ಯುದ್ಧಭೂಮಿಗೆ ಹೋಗುವುದು ಜನರಿಗೆ ಬೇಡವಾಯಿತು. ಫ್ಯೂಡಲಿಸಮ್ ಪದ್ಧತಿಯು ನಿರ್ಮೂಲವಾಗುವ ಕಾಲವು ಬಂತು. ಜನರು ತಮ್ಮನ್ನು ಕಷ್ಟಗಳಿಂದ ಉದ್ಧಾರಮಾಡಿ ದೇಶದಲ್ಲಿ ಶಾಂತಿಯನ್ನು ನೆಲೆಗೊಳಿಸುವಂತಹ ದೊರೆಗೆ ಸಹಾಯಮಾಡುವುದಕ್ಕೆ ಸಿದ್ಧವಾಗಿದ್ದರು; ಅವನ ಪ್ರಭುತ್ವಕ್ರಮವು ಹೀಗೆಯೇ ಇರಬೇಕೆಂದು ಹೋರಾಡುವುದು ಅವರಿಗೆ ಬೇಕಾಗಿರಲಿಲ್ಲ. ಆತನು ಸಾಂಕುಶ ಪ್ರವರ್ತಕನಾಗಿರಲಿ ಅಥವಾ ನಿರಂಕುಶಪ್ರವರ್ತಕನಾಗಿರಲಿ, ತಮಗೆ ಶಾಂತಿಯು ದೊರೆತರೆ ಸಾಕೆಂಬುದೇ ಅವರ ಕೋರಿಕೆಯಾಗಿತ್ತು.

ಇಂಗ್ಲೆಂಡಿನಲ್ಲಿ ಬ್ಯಾರನರೇ ಮುಂತಾದ ದೊಡ್ಡಮನುಷ್ಯರಲ್ಲಿ ಬಹು ಮಂದಿ 'ವಾರ್ಸ್ ಆಫ್ ದಿ ರೋಸಸ್' ಎಂಬ ಯುದ್ಧದಲ್ಲಿ ಪ್ರಾಣವನ್ನೊಪ್ಪಿಸಿದುದರಿಂದಲೂ, ಉಳಿದವರು ಕೇವಲ ದುರ್ಬಲರಾಗಿದ್ದುದರಿಂದಲೂ ನಿರಂಕುಶ ಪ್ರಭುತ್ವವು ಸಾಗಲು ಅನುಕೂಲವಾಯಿತೆಂದು ಹಿಂದೆಯೇ ಹೇಳಿದೆವಷ್ಟೆ. ನಿರಂಕುಶ ಪ್ರಭುತ್ವವು ನಡೆಯುವುದಕ್ಕೆ ಇದೇ ಮುಖ್ಯಕಾರಣ. ಆರನೆಯ ಹೆನ್ರಿ ದೊರೆಯು ಮೂವತ್ತೊಂದನೆಯ ವಯಸ್ಸಿನಲ್ಲಿ ಶ್ರೀಮಂತ ಸಭೆಯಲ್ಲಿ ಐದುಮಂದಿ ಡ್ಯೂಕರೂ, ಹನ್ನೆರಡು ಮಂದಿ ಅರ್ಲ್‌ಗಳೂ, ಮೂರುಮಂದಿ ವೈಕೌಂಟು (Viscounts) ಗಳೂ, ಮೂವತ್ತಾರು ಮಂದಿ ಬ್ಯಾರನರೂ ಇದ್ದರು. ಮುಂದೆ ನಾಲ್ಕನೆಯ ಎಡ್ವರ್ಡ್ ದೊರೆಯ ಕಾಲದಲ್ಲಿ ಒಬ್ಬ ಡ್ಯೂಕನೂ, ನಾಲ್ವರು ಅರ್ಲ್‌ಗಳೂ, ಒಬ್ಬ ವೈಕೌಂಟನೂ, ಮೂವತ್ತೊಂದು ಮಂದಿ ಬ್ಯಾರನರೂ ಇದ್ದರು. ಅಂತು ಒಟ್ಟು ಮೂವತ್ತೇಳು ಮಂದಿಗಳಿದ್ದರು. ಏಳನೆಯ ಹೆನ್ರಿ ದೊರೆಯ ಕಾಲದಲ್ಲಿ ಇವರ ಸಂಖ್ಯೆಯು ಮತ್ತಷ್ಟು ಕಡಿಮೆಯಾಗಿ ಇಪ್ಪತ್ತೊಂಬತ್ತು ಮಂದಿಗೆ ಇಳಿದುಹೋಯಿತು. ಇದರಿಂದ ಬ್ಯಾರನರೇ ಮುಂತಾದ ದೊಡ್ಡಮನುಷ್ಯರಿಗೆ ಸಂಭವಿಸಿದ್ದ ದುರ್ದೆಶೆಯು ವ್ಯಕ್ತವಾಗುತ್ತದೆ. ಇವರ ಸಂಖ್ಯೆಯು ಕಡಿಮೆಯಾದುದು ಮಾತ್ರವೇ ಅಲ್ಲದೆ ಇವರಿಗೆ ಬಡತನವೂ ಬಂದಿತ್ತು. (ಆದ ಮಾತ್ರವೇ ಪ್ರಜೆಗಳಲ್ಲಿ ಸಾಮಾನ್ಯರಂತೆ ಅವರು ತೀರ ಬಡವರಾಗಿದ್ದರೆಂದು ಅರ್ಥವಲ್ಲ. ಅವರ ಮೊದಲಿನ ಸ್ಥಿತಿಯನ್ನು ಈಗಿನ ಸ್ಥಿತಿಗೆ ಹೋಲಿಸಿದರೆ ಅವರನ್ನು ಬಡವರೆಂದು ಹೇಳಬಹುದಾಗಿತ್ತು.) ಬ್ಯಾರನರೇ ಮುಂತಾದ ದೊಡ್ಡಮನುಷ್ಯರ ಸಂಖ್ಯೆಯು ಬಹಳ ಕಡಿಮೆಯಾಗಿದ್ದುದರಿಂದ ಈ ಕುಂದನ್ನು ಪರಿಹರಿಸುವುದಕ್ಕಾಗಿ ಟ್ಯೂಡರ್ ಸಂತತಿಯ (The Tudors) ಏಳನೆಯ ಹೆನ್ರಿ ದೊರೆಯೇ ಮುಂತಾದ ದೊರೆಗಳು ತಮಗೆ ಬೇಕಾದವರನ್ನು ಹೊಸದಾಗಿ ಬ್ಯಾರನ್, ಅರ್ಲ್, ಡ್ಯೂಕ್ ಮುಂತಾದ ಪದವಿಗಳಿಗೆ ತರಬೇಕಾಯಿತು. ಹೀಗೆ ದೊರೆಯಿಂದ ಪದವಿಯನ್ನು ಪಡೆದುಕೊಂಡವರು ಆತನ ವಶವರ್ತಿಗಳಾಗಿರಬೇಕಾಯಿತು. ಆದುದರಿಂದ ನಿರಂಕುಶ ಪ್ರವರ್ತನೆಗೆ ಅಡ್ಡಿಮಾಡುವುದು ಅವರಿಂದ ಸಾಗದ ಕೆಲಸವಾಗಿತ್ತು.

ಇಂಗ್ಲೆಂಡಿನ ಅದೃಷ್ಟವಶದಿಂದ ಫ್ರಾನ್ಸ್ ಮುಂತಾದ ದೇಶಗಳಂತೆ ಅಲ್ಲಿ ಯಾವಾಗಲೂ ಇರುವ ಎಂದರೆ ಯುದ್ಧವು ನಡೆಯುವಾಗಲೂ, ನಡೆಯದೆ ಇರುವಾಗಲೂ ಇರುವ ಸ್ಟ್ಯಾಂಡಿಂಗ್ ಆರ್ಮಿ (Standing Army) ಎಂಬ ದೊಡ್ಡಸೈನ್ಯವು ಸ್ಥಾಪಿತವಾಗಲಿಲ್ಲ. ಇದಕ್ಕೆ ಮೂರು ಕಾರಣಗಳಿದ್ದುವು: (೧) ಇಂಗ್ಲೆಂಡಿಗೆ ವಿದೇಶೀಯರು ಮುತ್ತಿಗೆ ಹಾಕುವುದು ಅಸಾಧ್ಯವಾಗಿತ್ತು.

ಆದುದರಿಂದ ಇಂತಹ ಸೈನ್ಯವಿರುವುದು ಅವಶ್ಯವಿರಲಿಲ್ಲ. ದೊರೆಯ ಬಳಿಯಲ್ಲಿ ಬಹಳ ಹಣವಿಲ್ಲದೇ ಇದ್ದುದರಿಂದ ಇಷ್ಟೊಂದು ದೊಡ್ಡ ಸೈನ್ಯವನ್ನು ಸ್ಥಾಪಿಸಿ ಸೈನಿಕರಿಗೆ ವೇತನಗಳನ್ನು ಕೊಡುವುದು ಅಸಾಧ್ಯವಾಗಿತ್ತು. ಆಗಾಗ ಬದಗಬಹುದಾದ ಸಣ್ಣ ದಂಗೆಗಳನ್ನು ಸಾಮಾನ್ಯವಾದ ದಳದಿಂದಲೇ ಅಡಗಿಸುತ್ತಿದ್ದರು. ಇಂತಹ ದಳಗಳಿಗಾಗಿ ಹೆಚ್ಚು ಹಣವನ್ನು ವೆಚ್ಚ ಮಾಡಬೇಕಾಗಿರಲಿಲ್ಲ. (೨) ದೊಡ್ಡ ಸೈನ್ಯವನ್ನಿಡುವುದಕ್ಕೂ ಪಾರ್ಲಿಮೆಂಟಿನವರೇ ಹಣವನ್ನು ಒದಗಿಸಬೇಕಾಗಿತ್ತು. ಅವರು ಅಷ್ಟೇನೂ ಅವಶ್ಯವಿಲ್ಲದ ಈ ವಿಚಾರಕ್ಕೆ ಹಣವನ್ನು ಕೊಡುವವರಾಗಿರಲಿಲ್ಲ.

ಪ್ರಭುತ್ವ ಮಾಡುವುದರಲ್ಲಿ ದೊರೆಯು ಐದು ಸಿದ್ಧಾಂತಗಳಿಗೆ ಗಮನ ಕೊಡಬೇಕೆಂದು ಗೊತ್ತಾಗಿತ್ತು: (೧) ಪಾರ್ಲಿಮೆಂಟಿನವರ ಅನುಮತಿಯಿಲ್ಲದೆ ದೊರೆಯು ಯಾವ ವಿಧವಾದ ಹೊಸತೆರಿಗೆಯನ್ನೂ ಹಾಕಕೂಡದು. (೨) ಯಾವ ನಿಬಂಧನೆಯನ್ನು ಮಾಡುವುದಕ್ಕೂ ಪಾರ್ಲಿಮೆಂಟಿನವರ ಒಪ್ಪಿಗೆಯಾಗಬೇಕು. (೩) ಯಾವನನ್ನಾದರೂ ಕಾರಾಗೃಹಕ್ಕೆ ಹಾಕಬೇಕಾದರೆ ಅವನ ಅಪರಾಧವನ್ನು ಕಾಣಿಸಿ ನ್ಯಾಯವಾದ ವಾರಂಟು (warrant)ಹುಟ್ಟಲೇಬೇಕು; ಹಾಗಲ್ಲದೆ ಯಾವನನ್ನೂ ಸೆರೆಯಲ್ಲಿಡಕೂಡದು. ಹೀಗೆ ಸರಿಯಾದ ರೀತಿಯಲ್ಲಿ ಸೆರೆಯಲ್ಲಿಟ್ಟ ಬಳಿಕ, ಅವನನ್ನು ಬೇಗನೆ ವಿಚಾರಣೆಗೆ ಗುರಿಮಾಡಬೇಕು. (೪) ಕ್ರಿಮಿನಲ್ ಅಪರಾಧಿಗಳನ್ನು, ಅಪರಾಧವು ನಡೆದ ಕೌಂಟಿಯಲ್ಲಿ ಹನ್ನೆರಡು ಮಂದಿ ಪಂಚಾಯಿತರು (Jury) ವಿಚಾರಣೆ ಮಾಡಬಹುದು. ಸಿವಿಲ್ ಮೊಕದ್ದಮೆಗಳೂ ಹೀಗೆಯೇ ವಿಚಾರಣೆಯಾಗಬಹುದು. (೫) ಪ್ರಜೆಗಳ ಹಕ್ಕುಬಾಧ್ಯತೆಗಳಿಗೆ ವಿರೋಧವಾಗಿ ನಡೆದ ಅಧಿಕಾರಿಗಳು ನಷ್ಟದ ದಾವೆಗೆ ಗುರಿಯಾಗತಕ್ಕದು. ಪಂಚಾಯಿತರು ನಿಷ್ಕರ್ಷೆ ಮಾಡಿದ ನಷ್ಟಗಳನ್ನು ಅವರು ಕಟ್ಟಿಕೊಡಬೇಕು. ಕೆಲವು ಸಂದರ್ಭಗಳಲ್ಲಿ ಅವರು ಕ್ರಿಮಿನಲ್ ವಿಚಾರಣೆಗೂ ಗುರಿಯಾಗಬೇಕು. ಇಂತಹ ವೇಳೆಯಲ್ಲಿ, ದೊರೆಯ ಸ್ವಂತ ಅಪ್ಪಣೆಯಿಂದಲಾಗಲೀ ಸರಕಾರದವರ ಅಪ್ಪಣೆಯಿಂದಲಾಗಲೀ ತಾವು ವರ್ತಿಸಿದುದಾಗಿ ಅವರು ಹೇಳಿದರೆ ಅದಕ್ಕೆ ಗಮನ ಕೊಡತಕ್ಕದಲ್ಲ.

ಇವುಗಳಲ್ಲಿ ಮೊದಲನೆಯ ಎರಡು ಸಿದ್ಧಾಂತಗಳು ಮಾತ್ರ ಪೂರ್ಣವಾಗಿ ಸ್ಥಾಪಿತವಾದುವು. ಉಳಿದುವುಗಳನ್ನು ನೆರವೇರಿಸುವಂತೆ ಮಾಡುವುದು ಬಹಳ ಕಷ್ಟಸಾಧ್ಯವಾದ ಕೆಲಸವಾಗಿತ್ತು. ಇವುಗಳು ಬಟ್ಟಜನಾಂಗಕ್ಕೆ ಸಂಬಂಧ ಪಡದೆ ಒಬ್ಬೊಬ್ಬರಿಗೆ ಅನ್ವಯಿಸುವಂತಿದ್ದುದರಿಂದ,

ಟ್ಯೂಡರ್ ಮತ್ತು ಸ್ಟ್ಯೂಯರ್ಟ್ ಸಂತತಿಯ ದೊರೆಗಳು ಇವುಗಳಿಗೆ ಗಮನ ಕೊಡದೆ ಇರುವುದು ಸಾಧ್ಯವಾಯಿತು. ಆದರೆ ಒಟ್ಟು ಜನಾಂಗಕ್ಕೆ ಸಂಬಂಧ ಪಟ್ಟ ತೆರಿಗೆಯನ್ನು ಹಾಕುವುದು, ನ್ಯಾಯನಿಬಂಧನೆಗಳನ್ನು ಬದಲಾಯಿಸು ವುದು ಇವೇ ಮುಂತಾದ ವಿಚಾರಗಳಲ್ಲಿ ಹೀಗೆ ಮಾಡಿ ಪ್ರಜೆಗಳ ದ್ವೇಷವನ್ನು ಕಟ್ಟಿಕೊಳ್ಳುವುದು ಮಾತ್ರ ಸಾಗುವಂತಿರಲಿಲ್ಲ.

ಆದರೂ ಟ್ಯೂಡರ್ ಸಂತತಿಯ ದೊರೆಗಳಿಗೆ ಅನೇಕ ಅಧಿಕಾರಗಳಿದ್ದುವು: (೧) ಷೆರೀಫರನ್ನು ವಸ್ತುತಃ ದೊರೆಯೇ ನಿಯಮಿಸುತ್ತಿದ್ದನು. ಆದುದರಿಂದ ಒಂದೊಂದು ಕೌಂಟಿಯಲ್ಲಿಯೂ ದೊರೆಯ ಒಬ್ಬೊಬ್ಬ ಪ್ರತಿನಿಧಿಯು ಇದ್ದಂತಾಯಿತು. (೨) ನ್ಯಾಯಾಧಿಪತಿಗಳನ್ನು ದೊರೆಯೇ ನಿಯಮಿಸುತ್ತಿದ್ದನು. ಅಲ್ಲದೆ ಅವರಲ್ಲಿ ಯಾರನ್ನು ಯಾವಗಳಿಗೆಯಲ್ಲಿ ಬೇಕಾದರೂ ತೆಗೆದು ಹಾಕುತ್ತಿದ್ದನು. (೩) ನ್ಯಾಯಾಧಿಪತಿಗಳನ್ನು ದೊರೆಯು ನಿಯಮಿಸುತ್ತಿದ್ದುದರಿಂದಲೂ, ಈ ನ್ಯಾಯಾಧಿಪತಿಗಳು ಕೌಂಟಿಗಳಲ್ಲಿಯ ಪಂಚಾಯಿತರನ್ನು ಆರಿಸುತ್ತಿದ್ದುದರಿಂದಲೂ, ನ್ಯಾಯಸ್ಥಾನಗಳಲ್ಲಿ ದೊರೆಯ ಅಭಿಮತಕ್ಕೆ ವಿರೋಧವಾಗಿದ್ದ ತೀರ್ಮಾನಗಳು ಆಗಲವಕಾಶವಿರಲಿಲ್ಲ. ಆದುದರಿಂದ, ದೊರೆಯೂ, ಪ್ರಜೆಗಳೂ ಕಕ್ಷಿ ಪ್ರತಿಕಕ್ಷಿಗಳಾಗಿ ನ್ಯಾಯಸ್ಥಾನಕ್ಕೆ ಹೋದಾಗ, ಎಂದಿಗೂ ಪ್ರಜೆಗಳಿಗೆ ಸರಿಯಾದ ನ್ಯಾಯವು ದೊರೆಯುತ್ತಿರಲಿಲ್ಲ. (೪) ತನಗೆ ಬೇಕಾದ ಅಧಿಕಾರಿಗಳನ್ನು ಆರಿಸಿಕೊಳ್ಳಲು ದೊರೆಗೆ ಪೂರ್ಣಾಧಿಕಾರವಿತ್ತು.

ನಾಲ್ಕನೆಯ ಎಡ್ವರ್ಡ್ ದೊರೆಯೂ, ಅವನ ತರುವಾಯ ಪಟ್ಟಕ್ಕೆ ಬಂದವರೂ, ತಮ್ಮ ಸ್ಥಾನವನ್ನು ಬಲಪಡಿಸಿಕೊಳ್ಳುವುದರಲ್ಲೇ ಉದ್ಯುಕ್ತರಾಗಿದ್ದರು. ಈ ವಿಚಾರದಲ್ಲಿ ಅವರು ನಾರ್ಮನ್ ದೊರೆಗಳನ್ನು ಹೋಲುತ್ತಿದ್ದರು.

ಯಾರ್ಕ್ ಮನೆತನಕ್ಕೆ ಸೇರಿದವನಾದ ನಾಲ್ಕನೆಯ ಎಡ್ವರ್ಡ್ ದೊರೆಯು ವಾರ್ವಿಕ್ಕಿನ ಅರ್ಲಿನ (Earl of Warwick) ಸಹಾಯದಿಂದ ಪಟ್ಟಕ್ಕೆ ಬಂದನು. ಈ ಅರ್ಲನು ದೊರೆಯನ್ನು ತನ್ನ ಸ್ವಾಧೀನಪಡಿಸಿಕೊಳ್ಳಬೇಕೆಂದಿದ್ದನು. ಆದರೆ ಎಡ್ವರ್ಡನು ಇದಕ್ಕೆ ಅವಕಾಶ ಕೊಡುವವನಾಗಿರಲಿಲ್ಲ. ಆದುದರಿಂದ, ರಾಜಮನೆತನದಲ್ಲಿ ಮನಸ್ತಾಪವನ್ನು ತಂದುಹಾಕಬೇಕೆಂದೆಣಿಸಿ ಈತನು ಕ್ಲ್ಯಾರೆನ್ಸಿನ ಡ್ಯೂಕ (Duke of Clarence) ನನ್ನು ಎಡ್ವರ್ಡ್ ದೊರೆಯಮೇಲೆ ಎತ್ತಿಕಟ್ಟಿದನು. ಸ್ವಲ್ಪಕಾಲ ಎಡ್ವರ್ಡನು ಈ ಡ್ಯೂಕನ ಸ್ವಾಧೀನದಲ್ಲಿರಬೇಕಾಯಿತು. ಕೂಡಲೇ ಈ ಡ್ಯೂಕನೂ, ಅರ್ಲನೂ,

ದೇಶಾಂತರವಾಸಿಯಾಗಿದ್ದ ಆರನೆಯ ಹೆನ್ರಿ ದೊರೆಯ ಹೆಂಡತಿಯೊಡನೆ ಸೇರಿ, ಆಕೆಯ ಸಹಾಯದಿಂದ ಎಡ್ವರ್ಡ್ ದೊರೆಯನ್ನು ಕೆಲವುಕಾಲ ಸಿಂಹಾಸನಚ್ಯುತನನ್ನಾಗಿಮಾಡಿದರು. ಬಳಿಕ ಎಡ್ವರ್ಡನು ಸೈನ್ಯಸಮೇತನಾಗಿ ಬಂದು ಬಾರ್ನೆಟ್ ಮತ್ತು ಟ್ಯೂಕ್ಸ್‌ಬೆರಿ (Barnet and Tewkesbury) ಕದನಗಳಲ್ಲಿ ಜಯಶಾಲಿಯಾಗಿ ಲ್ಯಾಂಕ್ಯಾಸ್ಟರ್ ಮನೆತನದವರ ಪ್ರಾಶಸ್ತ್ಯವನ್ನು ಮುರಿದು, ಮತ್ತೆ ಸಿಂಹಾಸನವನ್ನೇರಿದನು. ಬಳಿಕ ಜನಗಳ ಕ್ಷೇಮಚಿಂತನೆಯಿಂದ ಕಾರ್ಯಗಳನ್ನು ನಡೆಯಿಸುತ್ತಲೂ, ಆದರೂ ಜನರು ಯಾವ ಕಾರ್ಯದಲ್ಲಿಯೂ ಸ್ವಾತಂತ್ರ್ಯವನ್ನು ವಹಿಸದಂತೆ ನೋಡಿಕೊಳ್ಳುತ್ತಲೂ, ಪ್ರಜೆಗಳೊಡನೆ ಪ್ರೇಮದಿಂದ ಕಲೆತು ಜನಾನುರಾಗವನ್ನು ಸಂಪಾದಿಸಿಕೊಂಡು ದರ್ಪದಿಂದ ರಾಜ್ಯವಾಳತೊಡಗಿದನು. ಆತನು ಪಾರ್ಲಿಮೆಂಟ್ ಸಭೆಯನ್ನು ಅಷ್ಟೇನೂ ಲಕ್ಷ್ಯದಲ್ಲಿಡದೆ, ಎಂಟುವರುಷ ಕಾಲದಲ್ಲಿ ಒಂದೇ ಒಂದು ಸಾರಿ ಸಭೆ ಸೇರುವಂತೆ ಮಾಡಿದನು. ಅಲ್ಲದೆ ತನ್ನ ಉದ್ದೇಶವನ್ನು ಪೂರ್ತಿಯಾಗಿ ಸಫಲಗೊಳಿಸುವುದರಲ್ಲಿದ್ದನು. ಅಷ್ಟರಲ್ಲೇ ಅವನು ಮೃತನಾದನು.

ಬಳಿಕ ರಾಜ್ಯಕ್ಕಾಗಿ ಮೂರು ಪಂಗಡದವರಿಗೆ ಹೋರಾಟವು ಹತ್ತಿತು. ಗ್ಲಾಸ್ಟರಿನ ಅರ್ಲನಾದ ರಿಚರ್ಡನು ಈ ಮೂರು ಪಂಗಡದವರಲ್ಲಿ ಒಂದು ಪಂಗಡದವರ ಮೇಲೆ ಮತ್ತೊಂದು ಪಂಗಡದವರನ್ನು ಎತ್ತಿಕಟ್ಟಿ ತಾನು ಸಿಂಹಾಸನಕ್ಕೆ ಬಂದನು. ರಾಜಕುಮಾರನಾದ ಐದನೆಯ ಎಡ್ವರ್ಡನು ಇನ್ನೂ ಬಾಲಕನಾಗಿದ್ದನು. ರಿಚರ್ಡನು ಅವನನ್ನು ಕೊಲ್ಲಿಸಿಬಿಟ್ಟನು. ಮೊದಲು ರಾಜ್ಯಕ್ಕಾಗಿ ಹೋರಾಡುತ್ತಿದ್ದ ಮೂರು ಪಂಗಡದವರೂ ಸ್ವಲ್ಪ ಕಾಲದಲ್ಲಿಯೇ ಒಕ್ಕಟ್ಟಾಗಿ ನಿಂತು ಬಾಸ್‌ವರ್ತ್ (Bosworth) ಕದನದಲ್ಲಿ ರಿಚರ್ಡನನ್ನು ಸಂಪೂರ್ಣವಾಗಿ ಸೋಲಿಸಿದರು. ಟ್ಯೂಡರ್ ಮನೆತನದವನಾದ ಹೆನ್ರಿಯು ಪಟ್ಟಕ್ಕೆ ಬಂದನು.

ಈ ಏಳನೆಯ ಹೆನ್ರಿ ದೊರೆಯ ಸ್ಥಾನವು ಬಲಪಟ್ಟಿರಲಿಲ್ಲ. ಈತನು ಲ್ಯಾಂಕ್ಯಾಸ್ಟರ್ ಮನೆತನದವನು. ಯಾರ್ಕ್‌ಮನೆತನದವರೂ ಸಿಂಹಾಸನಕ್ಕಾಗಿ ಎಲ್ಲಿ ಹೋರಾಡುವರೋ ಎಂದು ಈತನಿಗೆ ಸಂದೇಹವಿತ್ತು. ಆದುದರಿಂದ, ಸಿಂಹಾಸನಕ್ಕೆ ನಿಜವಾದ ಅಧಿಕಾರಿಣಿಯಾಗಿದ್ದ ಯಾರ್ಕ್‌ಮನೆತನದ ಎಲಿಸಬೆತ್ (Elizabeth) ಎಂಬಾಕೆಯನ್ನು ವಿವಾಹಮಾಡಿಕೊಂಡು ಒಂದು ವಿಧದಲ್ಲಿ ತನ್ನ ಸ್ಥಾನವನ್ನು ಬಲಪಡಿಸಿಕೊಂಡನು. ತಾನೂ ತನ್ನ ವಂಶದವರೂ ರಾಜ್ಯವಾಳತಕ್ಕುದೆಂದು ಪಾರ್ಲಿಮೆಂಟಿನವರಿಂದ ನಿಬಂಧನೆಯನ್ನು ಮಾಡಿಸಿ

ಹೀಗಾಗ ಬಹುದೆಂದು ಪೋಪರವರಿಂದ ಕೂಡ ಅಂಗೀಕಾರಪತ್ರವನ್ನು ತರಿಸಿ ಕೊಂಡು ನಾಲ್ಕನೆಯ ಎಡ್ವರ್ಡಿನ ಪ್ರಭುತ್ವಕ್ರಮವನ್ನೇ ಅನುಸರಿಸಿ ರಾಜ್ಯಭಾರವಮಾಡತೊಡಗಿದನು. ಕಿರೀಟಧಾರಣೆಯು ನಡೆದಾಗ ತನ್ನ ಹೆಂಡ ತಿಯನ್ನೂ ಸಮೀಪದಲ್ಲಿ ಕುಳ್ಳಿರಿಸಿಕೊಂಡನು. ಇದರಿಂದ ಯಾರ್ಕ್ ಮನೆ ತನದವರಿಗೆ ಬಹಳ ಸಂತೋಷವಾಯಿತು.

ಹೆನ್ರಿ ದೊರೆಯು ಮುಖ್ಯವಾಗಿ ಮೂರು ವಿಚಾರಗಳಿಗೆ ಗಮನ ಕೊಟ್ಟನು: (೧) ಅರ್ಲ್ ಮುಂತಾದ ದೊಡ್ಡಮನುಷ್ಯರ ಶಕ್ತಿಯನ್ನಡಗಿ ಸುವುದು. ಮೊದಲನೆಯ ವಿಚಾರ: ತಪ್ಪಿತಸ್ಥರಾದವರ ತಲೆಯನ್ನು ಕಡಿಸಿಹಾ ಕುವುದರಿಂದಲೂ, ಬಹಳ ಹೆಚ್ಚಾದ ದಂಡ ದ್ರವ್ಯವನ್ನು ವಿಧಿಸುವುದರಿಂದಲೂ, ಅವರ ಬಳಿಯಲ್ಲಿದ್ದ "ರೀಟೇನರ್ಸ್" (Retainers) ಎಂಬ ಆಯುಧಪಾಣಿ ಗಳಾದ ಸೇವಕರನ್ನು ನಿವರ್ತಿಮಾಡಿಸುವುದರಿಂದಲೂ, ದೊರೆಯ ಉದ್ದೇಶವು ನೆರವೇರಿತು. ಈ ಸೇವಕರೇ ವಾರ್ಸ್ ಆಫ್ ದಿ ರೋಸಸ್ ಎಂಬ ಯುದ್ಧದಲ್ಲಿ ತಮ್ಮ ಯಜಮಾನರ ಪಕ್ಷವನ್ನು ವಹಿಸಿ ಯುದ್ಧಮಾಡಿದರು. ಇವರನ್ನು ಮನೆಗೆ ಕಳುಹಿಸಬೇಕೆಂದು ದೊರೆಯ ಅಪ್ಪಣೆಯಾಯಿತು; ಬಳಿಕ ಅರ್ಲ್ ಮುಂತಾದವರಿಗೆ ಸೈನ್ಯ ಸಹಾಯವೂ ಯುದ್ಧಮಾಡುವ ಶಕ್ತಿಯೂ ಇಲ್ಲದಂ ತಾದುವು. ಈ ಸೇವಕರನ್ನು ಮನೆಗೆ ಕಳುಹಿಸುವ ವಿಚಾರದಲ್ಲಿ ಪಾರ್ಲಿಮೆಂ ಟಿನವರು ಒಂದು ನಿಬಂಧನೆಯನ್ನು ವಿಧಿಸುವಂತೆ ಮಾಡಿ, ದೊರೆಯು ತಾನೇ ಈ ನಿಬಂಧನೆಯನ್ನು ಆಚರಣೆಗೆ ತರಲಾರಂಭಿಸಿದನು. ಯಾರು ಇದಕ್ಕೊಪ್ಪಿ, ಒಡನೆಯೇ ತಮ್ಮ ಸೇವಕರನ್ನು ಮನೆಗೆ ಕಳುಹಿಸಲಿಲ್ಲವೋ ಅವರೆಲ್ಲರಿಗೂ ಬಹಳ ದಂಡದ್ರವ್ಯವನ್ನು ವಿಧಿಸಿ, ಅವರಿಗೆ ಭಯವುಹುಟ್ಟಿ, ಅವರು ಮತ್ತೊಮ್ಮೆ ಇಂತಹ ಅಪರಾಧಗಳನ್ನು ಮಾಡದಂತೆ ಏರ್ಪಡಿಸಿದನು. ಅರ್ಲ್ ಮುಂತಾದವ ರೆಲ್ಲರೂ ಬದುಲು ಮಾತಾಡದೆ ತಮ್ಮ ಸೇವಕರನ್ನು ಮನೆಗೆ ಕಳುಹಿಸ ಬೇಕಾ ಯಿತು. (೨) ಪ್ರಜೆಗಳ ಅಭಿಮತವನ್ನನುಸರಿಸಿ ನಡೆಯದೇ ಇರುವಷ್ಟು ಸಾಮರ್ಥ್ಯವುಳ್ಳ ನ್ಯಾಯಸ್ಥಾನವನ್ನೇರ್ಪಡಿಸುವುದು ಎರಡನೆಯ ವಿಚಾರ: ಹೆನ್ರಿಯು ಈವಿಧವಾದ ನ್ಯಾಯಸ್ಥಾನವನ್ನೇರ್ಪಡಿಸಿದನು. ಇದೇ ಪ್ರಸಿದ್ಧವಾದ ಸ್ಟಾರ್ ಛೇಂಬರ್ ನ್ಯಾಯಸ್ಥಾನ (The Court of Star Chamber). ಇದನ್ನು ಸ್ಥಾಪಿಸಿದುದಕ್ಕೆ ಮೂರು ಉದ್ದೇಶಗಳಿದ್ದುವು: (೧) ಷೆರೀಫರ ಅಪ್ಪ ಣೆಗೆ ವಿರೋಧವಾಗಿ ನಡೆದವರನ್ನು ಶಿಕ್ಷಿಸುವುದು. (೨) ಷೆರೀಫರು ದೊರೆಯ ಅಭಿಪ್ರಾಯಕ್ಕನುಸಾರವಾಗಿ ನಡೆಯದೆ, ಅವನ ಮೇಲೆ ಕೈಮಾಡುವ ಸಂಭವವು ತಲೆದೋರಿದಾಗ ಅವರನ್ನು ಶಿಕ್ಷಿಸುವುದು. ದಂಗೆಯಾಗುವ ಸೂಚನೆಯು ಕಂಡುಬಂದೊಡನೆಯೇ ಅದರ ತಾಯಿಬೇರನ್ನು ಕತ್ತರಿಸಿ ಅದನ್ನು

ನಾಶಪಡಿಸುವುದು. ಈ ನ್ಯಾಯಸ್ಥಾನದವರು ದಂಡದ್ರವ್ಯವನ್ನೂ, ಕಾರಾಗೃಹ ವಾಸವನ್ನೂ ವಿಧಿಸಬಹುದಾಗಿತ್ತೇ ಹೊರತು ಮರಣದಂಡನೆಯನ್ನು ವಿಧಿಸಲು ಇವರಿಗೆ ಅಧಿಕಾರವಿರಲಿಲ್ಲ. ಈ ನ್ಯಾಯಸ್ಥಾನದಿಂದ ರೆಫರ್ಮೇಷನ್ ಮುಂತಾದ ವಿಪ್ಲವ ಕಾಲಗಳಲ್ಲಿ ಕೂಡ ದೇಶದ ಶಾಂತತೆಯೂ, ಸಮಾಧಾನವೂ, ಕೆಡದಂತೆ ನೋಡಿಕೊಳ್ಳಲು ಅನುಕೂಲವಾಯಿತು. (೩) ದೊರೆಯ ಇಚ್ಛಕ್ಕೆ ಪಾರ್ಲಿಮೆಂಟನವರ ಗೋಜು ಇಲ್ಲದೆಯೇ ಹಣವು ದೊರೆಯುವಂತೆ ಮಾಡಿಕೊಳ್ಳುವುದು ಮೂರನೆಯ ವಿಚಾರ: ಈ ವಿಷಯದಲ್ಲಿ ಪಾರ್ಲಿಮೆಂಟನವರ ಅಧಿಕಾರವು ಬಹುಕಾಲಕ್ಕೆ ಹಿಂದಿನಿಂದಲೂ ಬಂದಿತ್ತು. ಆದರೇನು? ಹೆನ್ರಿಯು, ತನ್ನ ಜೀವಮಾನವು ಇರುವವರೆಗೂ ಯಾವ ವಿಧದಲ್ಲಿ ತನಗೆ ಎಷ್ಟು ಆದಾಯವು ಬರತಕ್ಕದೆಂಬುದನ್ನು ಪಾರ್ಲಿಮೆಂಟ್ ಸಭೆಯವರಿಂದ ಗೊತ್ತುಮಾಡಿಸಿದನು. ಇತರ ಸಮಯಗಳಲ್ಲಿಯೂ ಬಹಳ ಹಣವನ್ನು ಪಡೆದುಕೊಂಡನು. ಅಲ್ಲದೆ ಫ್ಯೂಡಲಿಸಮ್ ಪದ್ಧತಿಗನುಸಾರವಾಗಿ ತನಗೆ ಬರಬೇಕಾಗಿದ್ದ ಹಣದಿಂದಲೂ, ದಂಗೆಗೆ ಯತ್ನಿಸಿದ ಬ್ಯಾರನರ ಆಸ್ತಿಯನ್ನೆಲ್ಲಾ ತನ್ನ ಸ್ವಾಧೀನ ಪಡಿಸಿಕೊಳ್ಳುವುದರಿಂದಲೂ, ನ್ಯಾಯಸ್ಥಾನಗಳಿಂದ ಬಂದ ದಂಡದ್ರವ್ಯಗಳಿಂದಲೂ, ಅವನು ಬಹಳ ಹಣವನ್ನು ಕೂಡಿಟ್ಟನು.

---

## ಹನ್ನೊಂದನೆಯ ಪ್ರಕರಣ.

### ಎಂಟನೆಯ ಹೆನ್ರಿ ದೊರೆಯ ಕಾಲದಲ್ಲಿ ಪಾರ್ಲಿಮೆಂಟ್ ಸಭೆಯ ಸ್ಥಿತಿ.

ಏಳನೆಯ ಹೆನ್ರಿಯ ತರುವಾಯ ಅವನ ಮಗನಾದ ಎಂಟನೆಯ ಹೆನ್ರಿಯು ಪಟ್ಟಕ್ಕೆ ಬಂದನು. ಆತನು ಸುಂದರನಾಗಿಯೂ ಶೂರನಾಗಿಯೂ, ಯುವಕನಾಗಿಯೂ ಇದ್ದನು. ಅವನಲ್ಲಿ ಇವುಗಳ ಜೊತೆಗೆ ಇತರರ ಮನಸ್ಸನ್ನು ತನ್ನ ಕಡೆಗೆ ಆಕರ್ಷಿಸುವ ಶಕ್ತಿಯು ಇತ್ತು.

ಎಂಟನೆಯ ಹೆನ್ರಿ ದೊರೆಯಲ್ಲಿ ತಾಯಿಯ ಕಡೆಯಿಂದ ಯಾರ್ಕ್ ಸಂತತಿಯೂ, ತಂದೆಯ ಕಡೆಯಿಂದ ಲ್ಯಾಂಕ್ಯಾಸ್ಟರ್ ಸಂತತಿಯೂ, ಮಿಳಿತವಾಗಿದ್ದುದರಿಂದ ಆ ಪಂಗಡಗಳಿಗಿದ್ದ ವೈಷಮ್ಯವು ತಪ್ಪಿ ಆತನ ಸ್ಥಾನವು ಬಹಳ ಬಲವಾದುದಾಗಿತ್ತು. ಯಾರ್ಕು ಮನೆತನದ ಗಂಡುಸಂತತಿಯಲ್ಲಿ ಹತ್ತಿರದ ಬಾಧ್ಯಸ್ಥನಾಗಿದ್ದವನು ಸಫಕ್ಕಿನ (Suffolk) ಆರ್ಲನೊಬ್ಬನೇ, ಇವನೂ ಕಾರಾಗೃಹದಲ್ಲಿದ್ದನು. ಬಲಿಷ್ಠರಾದ ಬ್ಯಾರನರೆಲ್ಲರೂ ಮೃತ

ರಾಗಿದ್ದರು. ಉಳಿದವರು ಬಡತನದಿಂದ ದುರ್ಬಲರಾಗಿದ್ದರು. ಸ್ಟಾರ್ ಛೇಂಬರ್ ನ್ಯಾಯಸ್ಥಾನದ ಸಹಾಯದಿಂದ ದೊರೆಯು ಪ್ರಜೆಗಳನ್ನೆಲ್ಲಾ ತನ್ನ ವಶವರ್ತಿಗಳನ್ನಾಗಿ ಮಾಡಿಕೊಂಡನು. ಹೀಗೆ ಅವನ ಸ್ಥಾನವು ಬಹಳ ಬಲವಾಯಿತು.

ಪಾರ್ಲಿಮೆಂಟಿನವರು ದೊರೆಯ ವೆಚ್ಚಕ್ಕೆ ಹಣವನ್ನು ಕೊಟ್ಟರು. ಹೆನ್ರಿಯ ಕಾಲದಲ್ಲಿ ಅವನ ಆಳಿಕೆಯ ಮೊದಲಿನ ಇಪ್ಪತ್ತು ವರುಷಗಳು ಕಳೆಯುವ ವರೆಗೂ ಪಾರ್ಲಿಮೆಂಟಿಗೆ ಪ್ರಾಮುಖ್ಯತೆಯು ಇರಲಿಲ್ಲ. ದೊರೆಯು ಯಾವಾಗಲೋ ಒಂದೊಂದು ಸಲ ಪಾರ್ಲಿಮೆಂಟಿನವರನ್ನು ಸಭೆಸೇರಿಸುತ್ತಿದ್ದನು. ಆದರೆ ಅವನಿಗೂ ಪೋಪರಿಗೂ ಜಗಳವು ಬಂದು ಅವನು ಬಟ್ಟು ಜನಾಂಗದ ಬೆಂಬಲವನ್ನು ಪಡೆಯಬೇಕಾದಾಗ ಮಾತ್ರ ಹೀಗೆ ಮಾಡದೆ ಪ್ರತಿನಿಧಿಸಭೆಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟನು. ಹೆನ್ರಿಯು ಹಿಂದೆಯೇ ಮೃತನಾಗಿದ್ದ ತಮ್ಮ ಅಣ್ಣನಾದ ಆರ್ಥರನ ಹೆಂಡತಿಯಾದ ಆರಗಾನಿನ ಕ್ಯಾಥರೀನ್ (Katherine of Aragon) ಎಂಬಾಕೆಯನ್ನು ವಿವಾಹ ಮಾಡಿಕೊಂಡನು. ಆಕೆಯು ಸ್ಪೇನಿನ ದೊರೆಗೆ ಸಂಬಂಧಿಯಾಗಿದ್ದುದರಿಂದ ಈ ವಿವಾಹದಮೂಲಕ ಸ್ಪೇನಿನ ದೊರೆಯು ಹೆನ್ರಿಯ ಕಡೆಗಿರುವಂತಾಯಿತು.

ಹೆನ್ರಿಯು ಪಟ್ಟಕ್ಕೆ ಬಂದೊಡನೆಯೇ ಬಹಳ ಸಮರ್ಥನಾದ ಥಾಮಸ್ ವುಲ್ಸಿ (Thomas Wolsey) ಎಂಬಾತನನ್ನು ಛಾನ್ಸೆಲರ್ ಪದವಿಗೆ ತಂದು ತನ್ನ ಮುಖ್ಯ ಮಂತ್ರಿಯನ್ನಾಗಿ ಮಾಡಿಕೊಂಡನು. ಮಂತ್ರಿತ್ವ ಮಾಡಿದವರಲ್ಲಿ ಆತನು ಅಗ್ರಗಣ್ಯನಾದವರಲ್ಲೊಬ್ಬನು. ಅವನು ದೊಡ್ಡ ವಂಶದಲ್ಲಿ ಹುಟ್ಟಿದವನಲ್ಲವಾದರೂ, ವಿದ್ಯೆಯೆಂಬ ಐಶ್ವರ್ಯವು ಮಾತ್ರ ಅವನಲ್ಲಿ ತುಂಬಿತುಳುಕುತ್ತಿತ್ತು. ವುಲ್ಸಿಯು ಮತಾಧಿಕಾರಿಯಾಗಿಯೂ ಇದ್ದನು. ಅವನು ಪೋಪ್ ಪದವಿಗೆ ಬರಬೇಕೆಂದಿದ್ದನು. ಆದರೆ ಅದು ಸಾಧ್ಯವಾಗಲಿಲ್ಲ. ದೊರೆಯ ಪ್ರಾಬಲ್ಯವನ್ನು ಹೆಚ್ಚಿಸಬೇಕೆಂದೂ, ಮತಾಧಿಕಾರಿಗಳ ಪ್ರಾಮುಖ್ಯತೆಯನ್ನು ಪರಿಷ್ಕರಿಸಬೇಕೆಂದೂ, ಅವನಿಗೆ ಅಭಿಪ್ರಾಯವಿತ್ತು. ಇಷ್ಟರಲ್ಲಿ ಅವನಿಗೆ ಪೇಪಲ್ ಲೆಗೇಟ್ (Papal Legate) ಎಂಬ ಮತಾಧಿಕಾರವಾಯಿತು. ಇಂಗ್ಲೆಂಡಿನಲ್ಲಿದ್ದ ಮತಾಧಿಕಾರಗಳಲ್ಲೆಲ್ಲಾ ಅದೇ ದೊಡ್ಡದು. ರಾಜಕೀಯ ವಿಚಾರದಲ್ಲಿ ಛಾನ್ಸೆಲರ್‌ಪದವಿಯೇ ಅತಿ ದೊಡ್ಡದೆಂದು ಭಾವಿಸಲ್ಪಟ್ಟಿತ್ತು. ಅಂತು, ವುಲ್ಸಿಯು, ಲೌಕಿಕವಾದ ಅಧಿಕಾರದಲ್ಲಿಯೂ ಮತಾಧಿಕಾರದಲ್ಲಿಯೂ ಅತ್ಯುಚ್ಚವಾದ ಪದವಿಯಲ್ಲಿದ್ದನು.

ಎಂಟನೆಯ ಹೆನ್ರಿ ದೊರೆಯು ತಮ್ಮ ತಂದೆಗಿಂತಲೂ ಹೆಚ್ಚಾಗಿ ಆಸ್ಥಾನ ವೈಭವಗಳಿಗೆ ಹಣವನ್ನು ವೆಚ್ಚಮಾಡುತ್ತಿದ್ದನು. ಇದರಿಂದ ಅವನಿಗೆ ಬಹಳ ಹಣವುಬೇಕಾಗಿತ್ತು. ಅಲ್ಲದೆ ಅವನು ಪರರಾಜರಲ್ಲಿ ಬಹಳ ದರ್ಪದಿಂದಿರಬೇಕೆಂದು ಯತ್ನಿಸಿದುದರಿಂದ ಅನೇಕ ಯುದ್ಧಗಳು ಸಂಭವಿಸಿದುವು. ಇದರಿಂದ ವೆಚ್ಚವು ಮತ್ತಷ್ಟು ಹೆಚ್ಚಿತು. ಈ ವಿಷಯದಲ್ಲಿ ವುಲ್ಸಿಯು ದೊರೆಗೆ ಸಹಾಯಮಾಡಲು ಸಿದ್ಧವಾಗಿ ನಿಂತನು; ಪಾರ್ಲಿಮೆಂಟನಿಂದ ಹಣವನ್ನು ಕೊಡಿಸುತ್ತಲೂ, ನಜರಾಗಿಯೂ, ಸಾಲವಾಗಿಯೂ, ಜನರಿಂದ ಹಣವನ್ನು ಬರಮಾಡುತ್ತಲೂ ದೊರೆಗೆ ಬಹಳ ಅನುಕೂಲ ಮಾಡಿದನು. ಎರಡು ವೇಳೆ ಮಾತ್ರ ಜನರು ಇದಕ್ಕಾಗಿ ಪ್ರತಿಭಟಿಸಿದರು. ಉಳಿದ ವೇಳೆಗಳಲ್ಲಿ ಬಹಳ ಹಣವು ಬಂತು. ಪಾರ್ಲಿಮೆಂಟಿನವರು ಅನೇಕ ತಡವೆ ದೊರೆಯ ವೆಚ್ಚಕ್ಕಾಗಿ ಹಣವನ್ನೊದಗಿಸಿದುದೂ ಅಲ್ಲದೆ, ಎರಡು ಸಾರಿ ದೊರೆಯ ಸಾಲವನ್ನು ಕೂಡ ತೀರಿಸಿದರು.

ವುಲ್ಸಿಯ ಮರಣಾನಂತರ ಪಾರ್ಲಿಮೆಂಟಿನ ಪ್ರಾಬಲ್ಯವು ಹೆಚ್ಚಾಗುವ ಸೂಚನೆಗಳು ತಲೆದೋರಿದುವು. ಸಭೆಯು ಏಳು ಸಾರಿ ನೆರೆದು ಅನೇಕ ಮಹತ್ಕಾರ್ಯಗಳನ್ನು ಸಾಧಿಸಿತು. ಪ್ರಜೆಗಳೆಲ್ಲರೂ ಪಾರ್ಲಿಮೆಂಟ್ ಸಭೆಯು ಬಹಳ ಪ್ರಾಮುಖ್ಯತೆಗೆ ಬಂತೆಂದು ಗೊತ್ತುಮಾಡಿಕೊಂಡರು. ಅಲ್ಲಿಂದೀಚೆಗೆ ಸಭೆಯು ಯಾವಾಗಲೂ ಹಿಂದೆ ಬೀಳದೆ ಕ್ರಮವಾಗಿ ಅಭಿವೃದ್ಧಿಯನ್ನು ಹೊಂದಿ, ಈಗಿನ ಸ್ಥಿತಿಗೆ ಬಂದಿರುತ್ತದೆ.

ಎಂಟನೆಯ ಹೆನ್ರಿ ದೊರೆಯ ಕಾಲದಲ್ಲಿ ಕೊನೆಕೊನೆಗೆ ಪಾರ್ಲಿಮೆಂಟಿಗೆ ಹೀಗೆ ಪ್ರಾಮುಖ್ಯತೆಯು ಬರಲು ಮುಖ್ಯವಾಗಿ ಮೂರು ಕಾರಣಗಳಿದ್ದುವು:- (೧) ಹಿಂದೆ ಇದ್ದಂತೆ ಸಭೆಯು ಯಾವಾಗಲೋ ಎಲ್ಲೋ ಸ್ವಲ್ಪ ಕಾಲದ ವರೆಗೆ ಸೇರುವ ಪದ್ಧತಿಯು ತಪ್ಪಿ; ಅದು ಕ್ರಮವಾಗಿ ಸಭೆಸೇರಿ ಕಾರ್ಯಗಳೆಲ್ಲಾ ಸಮರ್ಪಕವಾಗಿ ಸಾಗುವ ವರೆಗೂ, ಬಿಡದೆ ಕೂಡಿದ್ದು ಕೆಲಸ ಮಾಡುವಂತಾಯಿತು. (೨) ಹೆನ್ರಿಗೂ, ಪೋಪರಿಗೂ, ಪರಸ್ಪರವಾಗಿ ಮನಸ್ತಾಪವು ಬಂದಾಗ, ಪಾರ್ಲಿಮೆಂಟ್ ಸಭೆಯೂ, ಅದರೊಡನೆ ಪ್ರಜೆಗಳೂ, ತನ್ನ ಕಡೆಗೆ ಬತ್ತಾಸೆಯಾಗಿರಲೆಂಬ ಉದ್ದೇಶದಿಂದ ಪಾರ್ಲಿಮೆಂಟಿನವರಿಗೆ ಪ್ರಾಮುಖ್ಯತೆಯನ್ನು ಕೊಟ್ಟನು. ಅನೇಕ ನಿಬಂಧನೆಗಳಾದುವು. ಇವುಗಳಿಂದ ಇಂಗ್ಲೆಂಡಿನ ಮೇಲೆ ಪೋಪರ ಆಧಿಪತ್ಯವು ಸಾಗದಂತಾಯಿತು; ಮತಾಧಿಕಾರಿಗಳು ಸದ್ವರ್ತನೆಯಿಂದಿರಬೇಕಾಯಿತು. ರಾಷ್ಟ್ರೀಯವಾದ ಮತ್ತು ಸಾಮಾಜಿಕವಾದ ವಿಚಾರಗಳು ಪರಿಷ್ಕರಿಸಲ್ಪಟ್ಟುವು. (೩) ಮೊನಾಸ್ಟರಿಗಳೆಂಬ ಮಠಗಳನ್ನು

ತೆಗೆದುಹಾಕಿದುದು. ಹೆನ್ರಿಯು ಸಿಂಹಾಸನಕ್ಕೆ ಬಂದಾಗ ಶ್ರೀಮಂತ ಸಭೆಯಲ್ಲಿ ಎಂಬತ್ತುನಾಲ್ಕು ಮಂದಿ ಸದಸ್ಯರಿದ್ದರು. ಆದರೆ ಅವರಲ್ಲಿ ಮೂವತ್ತಾರು ಮಂದಿಗಳು ಮಾತ್ರವೇ ಡ್ಯೂಕ್, ಅರ್ಲ್, ವೈಕೌಂಟ್, ಬ್ಯಾರನ್ ಮುಂತಾದ ಲೌಕಿಕ ಶ್ರೀಮಂತರಾಗಿದ್ದರು. ಉಳಿದವರೆಲ್ಲರೂ ಮತಾಧಿಕಾರಿಗಳೇ ಆಗಿದ್ದರು. ಆದುದರಿಂದ ಲೌಕಿಕರಿಗೆ ಹೆಚ್ಚು ಪ್ರಾಮುಖ್ಯತೆಯು ಇರಲಿಲ್ಲ. ಪಾರ್ಲಿಮೆಂಟಿನಲ್ಲಿ ಮೊನಾಸ್ಟರಿಗಳಿಗೆ ಸಂಬಂಧಪಟ್ಟ ಮತಾಧಿಕಾರಿಗಳು ಬಹುಮಂದಿಗಳು ಇದ್ದುದರಿಂದ ಹೀಗಾಯಿತು. ಆರ್ಚ್‌ಬಿಷಪ್ ಮತ್ತು ಬಿಷಪ್ಪುಗಳೆಂಬ ದೊಡ್ಡ ಮತಾಧಿಕಾರಿಗಳು ಮಾತ್ರವೇ ಇದ್ದಿದ್ದರೆ ಪಾರ್ಲಿಮೆಂಟಿನಲ್ಲಿ ಮತಾಧಿಕಾರಿಗಳ ಸಂಖ್ಯೆಯು ಅಷ್ಟೊಂದು ಹೆಚ್ಚಾಗುತ್ತಿರಲಿಲ್ಲ, ಇದನ್ನು ತಪ್ಪಿಸುವುದಕ್ಕಾಗಿ ಹೆನ್ರಿಯು ಮೊನಾಸ್ಟರಿಗಳನ್ನು ಒಂದೊಂದಾಗಿ ತೆಗೆದುಹಾಕಲಾರಂಭಿಸಿದನು. ಆರ್ಚ್‌ಬಿಷಪ್ಪುಗಳೂ ಬಿಷಪ್ಪುಗಳೂ ಹೊರತು ಉಳಿದ ಆಬಟ್, ಪ್ರೈಯರ್, ಮುಂತಾದ ಸಣ್ಣ ಸಣ್ಣ ಮತಾಧಿಕಾರಿಗಳು ಶ್ರೀಮಂತಸಭೆಯಲ್ಲಿ ಕುಳ್ಳಿರಲಾಗದೆಂದು ನಿಬಂಧನೆಯಾಯಿತು. ಇದರಿಂದ ಹೆನ್ರಿಯ ಮಗನಾದ ಆರನೆಯ ಎಡ್ವರ್ಡ್ ದೊರೆಯ ಕಾಲದಲ್ಲಿ ಶ್ರೀಮಂತಸಭೆಯಲ್ಲಿ ನಲವತ್ತೇಳು ಮಂದಿ ಲೌಕಿಕರೂ, ಇಪ್ಪತ್ತೇಳು ಮಂದಿ ಮತಾಧಿಕಾರಿಗಳೂ ಇರುವಂತಾಯಿತು. ಹೀಗೆ ಲೌಕಿಕರ ಸಂಖ್ಯೆಯು ಹೆಚ್ಚಾದುದರಿಂದ ಅವರು ಮೊದಲಿಗಿಂತ ಹೆಚ್ಚು ಸ್ವಾತಂತ್ರ್ಯದಿಂದ ವರ್ತಿಸುವಂತಾಯಿತು. ಆದರೂ ಈ ಶ್ರೀಮಂತರಲ್ಲಿ ಅನೇಕರನ್ನು ಹೊಸದಾಗಿ ಆಪದವಿಗೆ ತಂದುದರಿಂದ ಅವರು ದೊರೆಗೆ ಅನುಕೂಲರಾಗಿಯೇ ಇರುತ್ತಿದ್ದರು. ಆದರೆ ಇದು ಹೆಚ್ಚು ಕಾಲ ಸಾಗಲಿಲ್ಲ. ಹೆನ್ರಿಯ ಮಗಳಾದ ಮೇರಿ ರಾಣಿ (Queen Mary) ಯ ಕಾಲದಲ್ಲಿ ಅವಳ ಹೇಳಿಕೆಯಂತೆ ನಡೆಯಲು ಪ್ರತಿಭಟಿಸಿ 'ಹೆರೆಟಿಕ್ಸ್' ಎಂದರೆ ಮತ ಪದ್ಧತಿಗೆ ವಿರೋಧವಾಗಿ ನಡೆದವರನ್ನು ಶಿಕ್ಷಿಸುವುದಕ್ಕಾಗಿ ಅವಳು ವಿಧಿಸಬೇಕೆಂದಿದ್ದ ನಿಬಂಧನೆಯು ನೆರವೇರದಂತೆ ಮಾಡಿದರು. ಮೇರಿ ರಾಣಿಯು ಕ್ಯಾಥೊಲಿಕ್ ಮತಸ್ಥಳು. ಅವಳಿಗೆ ಪ್ರಾಟೆಸ್ಟೆಂಟರಲ್ಲಿ ಬದ್ಧದ್ವೇಷ. ಅವಳು ತನ್ನ ಮತಕ್ಕೆ ವಿರೋಧವಾಗಿ ನಡೆಯುತ್ತಿದ್ದವರನ್ನು ಬಹಳ ಕಠಿನವಾದ ಶಿಕ್ಷೆಗೆ ಗುರಿಮಾಡಬೇಕೆಂದಿದ್ದಳು. ಅದಕ್ಕಾಗಿ ಅವಳು ವಿಧಿಸಬೇಕೆಂದಿದ್ದ ನಿಬಂಧನೆಗೆ ಪ್ರತಿನಿಧಿಸಭೆಯವರು ಒಪ್ಪಿದರು. ಆದರೆ ಶ್ರೀಮಂತಸಭೆಯವರು ಹಾಗೆ ಮಾಡಲಿಲ್ಲ. ಆದುದರಿಂದ ಆ ನಿಬಂಧನೆಯು ತಪ್ಪಿಹೋಯಿತು.

ಮೊನಾಸ್ಟರಿಗಳನ್ನು ತೆಗೆದು ಹಾಕಿದುದರಿಂದ ಅವುಗಳ ಧನವೂ, ಸ್ವತ್ತುಗಳೂ ದೊರೆಗೆ ಸೇರಿದುವು. ಪ್ರಜೆಗಳೆಲ್ಲರೂ ದೊರೆಗೆ ಅಷ್ಟೊಂದು ಧನವು ದೊರೆತುದರಿಂದ ಅವನ ವೆಚ್ಚಕ್ಕಾಗಿ ಇನ್ನು ತಾವು ತೆರಿಗೆಗಳನ್ನು

ಕೊಡುವುದು ತಪ್ಪಿತೆಂದು ಭಾವಿಸಿ, ಸಂತೋಷದಿಂದ ನಲಿಯತೊಡಗಿದರು. ಆದರೂ ಅವರ ಉದ್ದೇಶವು ನೆರವೇರಲಿಲ್ಲ. ದುಂದುಗಾರನಾಗಿದ್ದ ಹೆನ್ರಿಯು ಅಷ್ಟೊಂದು ಹಣವನ್ನೂ ನಾನಾವಿಧದಲ್ಲಿ ವೆಚ್ಚ ಮಾಡಿಬಿಟ್ಟನು. ಹಾಗಿಲ್ಲದೆ, ಅವನು ಧನವನ್ನು ಶೇಖರಿಸಿಟ್ಟುಕೊಂಡಿದ್ದರೆ ಅವನು ಲೇಶವೂ ಪಾರ್ಲಿಮೆಂಟಿನವರ ಹಿಡಿತಕ್ಕೆ ಸಿಕ್ಕಬೇಕಾಗಿರಲಿಲ್ಲ.

ಯೂರೋಪು ಖಂಡದ ಇತರ ದೇಶಗಳಲ್ಲಿ "ರೆಫರ್ಮೇಷನ್" (Reformation) ಎಂಬ ಮತಪರಿಷ್ಕರಣವಿಚಾರದಿಂದ ರೋಮನ್ ಕ್ಯಾಥೊಲಿಕ್ ಮತವೂ, ಪೋಪರ ಆಧಿಕ್ಯವೂ ಮೂಲೆಗೆಬಿದ್ದು, ಪ್ರಾಟೆಸ್ಟ್ಯಾಂಟಿಸಮ್ Protestantism) ಮತವು ಹುಟ್ಟಿ ವೃದ್ಧಿಯಾಗಲಾರಂಭಿಸಿತು. ಆದುದರಿಂದ ಅಲ್ಲಿನ ಪರಿಷ್ಕರಣವು ಮತವಿಚಾರವಾದುದು. ಆದರೆ ಇಂಗ್ಲೆಂಡಿನಲ್ಲಿ ನಡೆದ ಪರಿಷ್ಕರಣವು ರಾಜಕೀಯವಾದುದೇ ಹೊರತು ಮತಕ್ಕೆ ಸಂಬಂಧಪಟ್ಟುದಲ್ಲ. ಹೆನ್ರಿಗೆ ಬೇಕಾಗಿದ್ದುದು ತಾನು ಪೋಪರಿಗೆ ಅಧೀನನಾಗಿರದೆ ಸ್ವತಂತ್ರನಾಗಿರಬೇಕೆಂಬುದೊಂದೇ ವಿಚಾರ. ಅದು ಸಿದ್ಧಿಸಿತು. ಇದರಿಂದ ಅವನು ತೃಪ್ತನಾಗಿ ಮತಪರಿಷ್ಕರಣಕ್ಕೆ ಅವಕಾಶ ಕೊಡದೇ ಹೋದನು. ಆದಕಾರಣ, ಇಂಗ್ಲೆಂಡಿನಲ್ಲಿ ಹೆನ್ರಿಯ ಕಾಲದಲ್ಲಿ ಪ್ರಾಟೆಸ್ಟೆಂಟ್ ಮತವು ತಲೆಯೆತ್ತಲು ಅವಕಾಶವಾಗಲಿಲ್ಲ. ಹೀಗೆ ಪ್ರಾಟೆಸ್ಟೆಂಟ್ ಮತವು ಪ್ರಚುರವಾಗಲು ಅವನು ಅವಕಾಶಕೊಡದೇ ಹೋದುದರಿಂದ ಪೋಪರು ಸುಪ್ರೀತರಾಗಿ, ಅವನಿಗೆ "ಡಿಫೆಂಡರ್ ಆಫ್ ದಿ ಫೆಯ್ತ್" (Defender of the faith) ಎಂದರೆ "ಧರ್ಮರಕ್ಷಕ" ಎಂಬ ಬಿರುದನ್ನು ಕೊಟ್ಟರು.

ಒಟ್ಟಿನಲ್ಲಿ ಹೇಳಬಹುದೇನೆಂದರೆ:— ಪ್ರಜೆಗಳಿಗೆ ಹೆನ್ರಿಯಲ್ಲಿ ಬಹಳ ಪ್ರೀತಿಯೂ, ವಿಶ್ವಾಸವೂ ಇದ್ದುವು. ಇದರಿಂದ ಪಾರ್ಲಿಮೆಂಟಿನವರು ಅವನಿಗೆ ಎರಡು ಹೊಸ ಹಕ್ಕುಗಳನ್ನು ಕೊಡುವಂತಾಯಿತು. ಆ ಹಕ್ಕುಗಳಾವುವೆಂದರೆ:—(೧) ದೊರೆಯ ಪ್ರಸಿದ್ಧ ಪತ್ರಿಕೆಗಳು ನ್ಯಾಯ ನಿಬಂಧನೆಗಳಂತೆಯೇ ಪ್ರಚಾರಕ್ಕೆ ಬರತಕ್ಕುದು. ಇದು ಹೆನ್ರಿಯ ಮರಣಾನಂತರ ತಪ್ಪಿಹೋಯಿತು. (೨) ಹೆನ್ರಿಯು ತನ್ನ ತರುವಾಯ ಸಿಂಹಾಸನಕ್ಕೆ ಯಾರು ಬರಬೇಕೆಂಬ ವಿಚಾರಕ್ಕೆ ಉಯಿಲನ್ನು (will) ಬರೆದಿಡಬಹುದು. ಹೆನ್ರಿಯ ಕಾಲದಲ್ಲಿ ಪಾರ್ಲಿಮೆಂಟ್ ಸಭೆಯು ರಾಜ್ಯದ ಆಡಳಿತದ ವಿಚಾರದಲ್ಲಿ ಹೆಚ್ಚು ಆಧಿಪತ್ಯವನ್ನು ಹೊಂದಿರಲಿಲ್ಲವಾದರೂ, ಇತರ ಅನೇಕ ಕಾರಣಗಳಿಂದ ಅದರ ಪ್ರಾಮುಖ್ಯತೆಯು ವೃದ್ಧಿಯಾಗುತ್ತಿತ್ತು. ಸಭೆಯವರು ಹಿಂದೆ ಬೀಳದೆ ತಮ್ಮ ಕಾರ್ಯಗಳನ್ನು ಸರಿಯಾಗಿ ನೆರವೇರಿಸುತ್ತಿದ್ದರು. ಇದರಿಂದ,

ಮುಂದೆ ಹೆನ್ರಿಯಷ್ಟು ಸಮರ್ಥರಲ್ಲದ ಇತರರು ಸಿಂಹಾಸನಕ್ಕೆ ಬಂದಾಗ ಸಭೆಯವರು ಸ್ವಾತಂತ್ರ್ಯವನ್ನು ವಹಿಸುವುದಕ್ಕನುಕೂಲವಾಯಿತು.

ಎಂಟನೆಯ ಹೆನ್ರಿ ದೊರೆಯ ಬಳಿಕ ಅವನ ಮಗನಾದ ಆರನೆಯ ಎಡ್ವರ್ಡ್ ದೊರೆಯು ಸಿಂಹಾಸನಕ್ಕೆ ಬಂದನು. ಈತನು ಇನ್ನೂ ಬಾಲಕನಾಗಿದ್ದುದರಿಂದ ಈತನು ದೊಡ್ಡವನಾಗುವ ವರೆಗೂ ಪ್ರಿವಿ ಕೌನ್ಸಿಲ್ ಸಭೆಯು ರಾಜನ ಹೆಸರಿನಲ್ಲಿ ಆಡಳಿತಗಳನ್ನು ನಡೆಯಿಸತಕ್ಕುದೆಂದು ಗೊತ್ತಾಯಿತು. ಆ ಸಭೆಯಲ್ಲಿ ಯಾರು ಸದಸ್ಯರಾಗಿರತಕ್ಕುದೆಂಬುದನ್ನು ಹೆನ್ರಿಯೇ ತನ್ನ ಮೃತಶಾಸನಪತ್ರದಲ್ಲಿ ಬರೆದಿದ್ದನು. ದೇಶದ ಆಡಳಿತಗಳೆಲ್ಲಾ ಈ ಸಭೆಯವರ ಕೈಯಲ್ಲಿದ್ದುವು. ಸಭೆಯಲ್ಲಿ ನಾಲ್ವತ್ತು ಮಂದಿ ಸದಸ್ಯರಿದ್ದರು. ಅವರಲ್ಲಿ ಇಪ್ಪತ್ತೆರಡು ಮಂದಿ ಪ್ರತಿನಿಧಿಸಭೆಯವರಾಗಿದ್ದರು. ಈ ಪ್ರಿವಿ ಕೌನ್ಸಿಲ್ ಸಭೆಯು ಮೂರು ಉಪಸಭೆಗಳಾಗಿ ವಿಭಾಗಿಸಲ್ಪಟ್ಟು ಒಂದೊಂದು ಉಪಸಭೆಯೂ ಯಾವ ಯಾವ ಕೆಲಸಗಳನ್ನು ಮಾಡಬೇಕೆಂಬುದು ಗೊತ್ತಾಗಿತ್ತು. ಒಂದೊಂದು ಸಭೆಗೂ ಒಬ್ಬೊಬ್ಬ ಕಾರ್ಯದರ್ಶಿ (Secretary)ಯು ನಿಯಮಿಸಲ್ಪಟ್ಟನು. ಈ ಮೂವರು ಕಾರ್ಯದರ್ಶಿಗಳಲ್ಲಿ ಒಬ್ಬೊಬ್ಬನೂ ಬಹಳ ಪ್ರಾಬಲ್ಯವನ್ನು ಹೊಂದಿ ದೇಶದಲ್ಲೆಲ್ಲಾ ಬಹಳ ಪ್ರಮುಖರಾಗಿದ್ದ ಶ್ರೀಮಂತರನ್ನು ಕೂಡ ಮೀರಿಸುವಂತಾದನು. ಇದುವರೆಗೆ ಶ್ರೀಮಂತರೆಲ್ಲರೂ ಸೆಕ್ರೆಟರಿಯ ಅಧಿಕಾರವು ಅಲ್ಪವಾದುದೆಂದೂ, ತಮ್ಮ ಘನತೆಗೆ ಅದು ತಡೆಯುವಂತಿರಲಿಲ್ಲವೆಂದೂ ಭಾವಿಸಿದ್ದರು. ಅವರೆಲ್ಲರೂ, ಈಗ ಆ ದುರಭಿಮಾನವನ್ನು ಬಿಟ್ಟು, ಆ ಅಧಿಕಾರವು ತಮಗೆ ದೊರೆತರೆ ಸಾಕೆಂದು ಬಯಸುವಂತಾಯಿತು. ಟ್ಯೂಡರ್ ಸಂತತಿಯ ದೊರೆಗಳ ಪ್ರಾಬಲ್ಯವು ಹೆಚ್ಚಿದಂತೆಲ್ಲ ಪ್ರಿವಿ ಕೌನ್ಸಿಲ್ ಸಭೆಯ ಪ್ರಾಮುಖ್ಯತೆಯೂ ಹೆಚ್ಚುತ್ತಾಹೋಯಿತು. ವೇಲ್ಸಿನಲ್ಲಿಯೂ, ಯಾರ್ಕಿನಲ್ಲಿಯೂ, ಈ ಸಭೆಯ ಶಾಖೆಗಳಿದ್ದುವು. ಯಾರ್ಕಿನಲ್ಲಿದ್ದುದಕ್ಕೆ "ಕೌನ್ಸಿಲ್ ಆಫ್ ನಾರ್ತ್" (Council of North) ಎಂಬ ಹೆಸರಿತ್ತು.

ಈ ಮಧ್ಯದಲ್ಲಿ ಸ್ಟಾರ್ ಛೇಂಬರ್ ನ್ಯಾಯಸ್ಥಾನವುಬೇರೇ ಪ್ರಾಬಲ್ಯವನ್ನು ಹೊಂದಿ ಕ್ರಿಮಿನಲ್ ಮೊಕದ್ದಮೆಗಳನ್ನು ವಿಚಾರಣೆ ಮಾಡುವ ನ್ಯಾಯಸ್ಥಾನವಾಗಿ ಪರಿಣಮಿಸಿತು. ಎಡ್ವರ್ಡ್ ದೊರೆಯ ಮತ್ತು ಮೇರಿ ರಾಣಿಯ ಕಾಲದಲ್ಲಿ ಈ ನ್ಯಾಯಸ್ಥಾನದವರು ಎಲ್ಲಾ ವಿಚಾರಗಳಿಗೂ ತಲೆಹಾಕುತ್ತಿದ್ದರು. ಮುಂದೆ, ಹೆನ್ರಿಯ ಮತ್ತೊಬ್ಬ ಮಗಳಾದ ಎಲಿಸೆಬೆತ್ ರಾಣಿಯ ಕಾಲದಲ್ಲಿ "ಕೋರ್ಟ್ ಆಫ್ ಹೈ ಕಮಿಷನ್" (Court of High Commission) ಎಂಬ ನ್ಯಾಯಸ್ಥಾನವು ಸ್ಥಾಪಿಸಲ್ಪಟ್ಟಿತು. ಲೌಕಿಕ ವಿಚಾರ

ಗಳಿಗೆ ಸ್ಟಾರ್ ಛೇಂಬರ್ ನ್ಯಾಯಸ್ಥಾನವು ಹೇಗೋ, ಮತ ವಿಚಾರಗಳಿಗೆ ಹೈ ಕಮಿಷನ್ ನ್ಯಾಯಸ್ಥಾನವು ಹಾಗೆ. ಮತಾಧಿಕಾರಿಗಳ ಮೇಲೆ ಈ ನ್ಯಾಯ ಸ್ಥಾನದವರಿಗೆ ಪೂರ್ಣಾಧಿಕಾರವಿತ್ತು. ರಾಣಿಯು ಮತ್ತು ಪಾರ್ಲಿಮೆಂಟಿನವರ ಸಮ್ಮತಿಯಿಂದ ಈ ನ್ಯಾಯಸ್ಥಾನವು ಸ್ಥಾಪಿಸಲ್ಪಟ್ಟದ್ದರಿಂದ ಹೀಗೆ ಮಾಡಲನುಕೂಲವಾಯಿತು.

ಪ್ರತಿನಿಧಿ ಸಭೆಯು ವರ್ಧಿಸುತ್ತಾ ಬಂತು. ಹೆನ್ರಿಯು, ವೇಲ್ಸಿನಿಂದಲೂ ಪ್ರತಿನಿಧಿಗಳನ್ನು ಬರಮಾಡಿಕೊಂಡು ಜನಾಂಗಕ್ಕೆ ಸರಿಯಾದ ಪ್ರತಿನಿಧಿತ್ವವನ್ನು ಕೊಟ್ಟುದೊಂದು; ಈತನೂ, ಈತನ ಮಕ್ಕಳೂ, ಅನೇಕ ಬರೋಗಳನ್ನು ಏರ್ಪಡಿಸಿ ಅಲ್ಲಿಂದ ಪ್ರತಿನಿಧಿಗಳನ್ನು ಬರಮಾಡಿದುದೊಂದು; ಜನರು ಧನಿಕರಾಗುತ್ತಾ ಬಂದು ಅದರಿಂದ ಬಲಶಾಲಿಗಳಾದುದೊಂದು; ಈ ಮೂರು ಕಾರಣಗಳಿಂದ ಪ್ರತಿನಿಧಿ ಸಭೆಯು ಅಭಿವೃದ್ಧಿಯಾಗಲು ಅನುಕೂಲವಾಯಿತು.

ಜನರು ಧನಿಕರಾಗುತ್ತಾ ಬಂದುದಕ್ಕೆ ಕಾರಣವನ್ನು ತಿಳಿದುಕೊಳ್ಳೋಣ. ಟ್ಯೂಡರ್ ಸಂತತಿಯ ದೊರೆಗಳ ಕಾಲದಲ್ಲಿ ಇಂಗ್ಲೆಂಡಿನಲ್ಲಿ ಕೃಷಿಯು ಮೂಲೆಗೆ ಬಿದ್ದು, ಕುರಿಯ ದೊಡ್ಡಿಗಳನ್ನಿಡಬೇಕಾಯಿತು. ಇದಕ್ಕೆ ಕಾರಣವನ್ನು ಹಿಂದೆಯೇ ತಿಳಿದುಕೊಂಡಿರುತ್ತೇವೆ. ಉಣ್ಣೆಯ ವ್ಯಾಪಾರವು ಉಛ್ರಾಯ ಸ್ಥಿತಿಗೆ ಬಂತು. ಜನರೆಲ್ಲರೂ ಬಹಳ ಧನಿಕರಾದರು. ಈ ಸಾಮಾನ್ಯ ಜನರು ಅರ್ಲ್ ಮುಂತಾದವರಂತೆ ಲಂಡನ್ ನಗರಕ್ಕೆ ಸುತ್ತುತ್ತಾ, ಆಹಾರ ವಿಹಾರಗಳಿಗೆ ಹಣವನ್ನು ಸೂರೆಗೊಡದೇ ಇದ್ದುದರಿಂದ, ಅವರು ಸಂಪಾದಿಸಿದ ಹಣವು ಅವರ ಕೈಯಲ್ಲಿಯೇ ನಿಂತಿತು. ಆದುದರಿಂದ, ಅವರು ಬೇಗನೆ ಧನಿಕರಾದರು. ಇದರಿಂದ ಜನರಿಗೂ ಅವರ ಪ್ರತಿನಿಧಿಗಳಿಗೂ ಬಹಳ ಪ್ರಾಬಲ್ಯವು ಬಂತು. ಆದುದರಿಂದ, ಹಿಂದೆ ಬ್ಯಾರನರೇ ಮುಂತಾದವರಿಗೆ ಇದ್ದ ಪ್ರಾಮುಖ್ಯತೆಯು ಈಗ ಪ್ರತಿನಿಧಿಸಭೆಗೆ ಬಂತು. ಸಭೆಯು ದಿನದಿನಕ್ಕೂ ವೃದ್ಧಿಯಾಗುತ್ತಾ ಬಂತು. ಹೆನ್ರಿಯು ಹೇಳಿದಂತೆ ಕೇಳುತ್ತಿದ್ದ ಸಭೆಯು ಮೇರಿಯ ಆಡಳಿತದ ಕ್ರಮವು ಸರಿಬೀಳದೆ ಗೊಣಗಿಕೊಳ್ಳುವಂತಾಯಿತು; ಮುಂದೆ, ಎಲಿಸಬೆತ್ ರಾಣಿಯ ಕಾಲದಲ್ಲಿ ಸಭೆಯು ಗೊಣಗುಟ್ಟಲಾರಂಭಿಸಿತು. ಬಳಿಕ, ಜೇಮ್ಸ್ ದೊರೆಯ ಕಾಲದಲ್ಲಿ, ಸಭೆಗೆ ದೊರೆಯನ್ನು ಅವನು ನ್ಯಾಯವಾದ ರೀತಿಯಲ್ಲಿ ವರ್ತಿಸದೇ ಇದ್ದುದಕ್ಕಾಗಿ ಆಕ್ಷೇಪಿಸುವಷ್ಟು ಸಾಮರ್ಥ್ಯವು ಬಂತು. ಕೊನೆಗೆ, ಛಾರ್ಲ್ಸ್ ದೊರೆಯ ಕಾಲದಲ್ಲಿ ಸಭೆಯು ದೊರೆಯ ಅನ್ಯಾಯಾಚರಣೆಗಾಗಿ ಪ್ರತಿಭಟಿಸಿ ನಿಂತು ಅವನೊಡನೆ ಯುದ್ಧ ಮಾಡುವಂತಾಯಿತು.

---

# ಹನ್ನೆರಡನೆಯ ಪ್ರಕರಣ.

## ಪಾರ್ಲಿಮೆಂಟ್ ಸಭೆಯ ಪ್ರಾಬಲ್ಯವು ಪುನರುಜ್ಜೀವಿತವಾದುದು.

ಟ್ಯೂಡರ್ ಸಂತತಿಯ ದೊರೆಗಳ ಕಾಲದಲ್ಲಿ ಪ್ರಬಲವಾದ ಅನೇಕ ದಂಗೆಗಳಾಗದೆ ಕೇವಲ ಸಣ್ಣ ಸಣ್ಣ ಮೂರು ನಾಲ್ಕು ದಂಗೆಗಳಿಂದಲೇ ಪರ್ಯವಸಾನವಾಯಿತು. ಇವುಗಳನ್ನು ಒಡನೆಯೇ ಅಡಗಿಸಿದರು. ಇದರಿಂದ ಟ್ಯೂಡರ್ ಸಂತತಿಯ ದೊರೆಗಳ ರಾಜ್ಯಭಾರವು ಜನಗಳಿಗೆ ಹಿತವಾಗಿತ್ತೆಂಬುದೂ, ಆದರಿಂದ ದಂಗೆಗಳಿಗೆ ಅವಕಾಶವಿಲ್ಲದೇ ಇತ್ತೆಂಬುದೂ, ಒಂದು ವೇಳೆ ಒಂದೆರಡು ಕಡೆಗಳಲ್ಲಿ ದಂಗೆಗಳಾದರೂ, ಉಳಿದ ಕಡೆಯ ಪ್ರಜೆಗಳು ಅವುಗಳನ್ನು ಹುಟ್ಟುಗೆಡಿಸಲು ಸಹಾಯಮಾಡುತ್ತಿದ್ದರೆಂಬುದೂ, ಚೆನ್ನಾಗಿ ವ್ಯಕ್ತವಾಗುತ್ತವೆ. ಇವರ ಆಳಿಕೆಯಲ್ಲಿ ಪ್ರಜೆಗಳಲ್ಲಿ ಮುಕ್ಕಾಲು ಮೂರು ವೀಸಪಾಲಿನ ಜನರು ದೊರೆಯ ಪಕ್ಷಕ್ಕೇ ಸೇರಿದ್ದರು.

ಈ ಸಂತತಿಯವರಲ್ಲಿ ಕೊನೆಯವಳಾದ ಎಲಿಸಬೆತ್ ರಾಣಿಯೂ ತನ್ನ ತಂದೆಯಾದ ಎಂಟನೆಯ ಹೆನ್ರಿ ದೊರೆಯಂತೆಯೇ ಪ್ರಜೆಗಳ ಪ್ರೀತಿಗೆ ಪಾತ್ರಳಾಗಿದ್ದಳು. ಕಾಲಕ್ಕೆ ಸರಿಯಾಗಿ ಸಮಯವರಿತು ಮಾತನಾಡುವುದರಲ್ಲಿಯೂ, ಚಾತುರ್ಯದಲ್ಲಿಯೂ, ಆಕೆಯು ತನ್ನ ತಂದೆಯನ್ನೇ ಹೋಲುತ್ತಿದ್ದಳು. ಯಾರಮನಸ್ಸಿಗೂ ಅಸಮಾಧಾನವಾಗದಂತೆ ನಡೆದುಕೊಳ್ಳಬೇಕೆಂದು ಅವಳಿಗೆ ಅಭಿಪ್ರಾಯವಿತ್ತು. ಸಿಕ್ಕಿದಂತೆ ತೆರಿಗೆಗಳನ್ನು ಹಾಕಿ ಪ್ರಜೆಗಳಿಗೆ ಬೇಸರವನ್ನುಂಟುಮಾಡಕೂಡದೆಂದು ಆಕೆಯು ನಿಶ್ಚಯ ಮಾಡಿಕೊಂಡಿದ್ದಳು. ಅನೇಕ ತೆರಿಗೆಗಳನ್ನು ಹಾಕಿ ಬಡವರನ್ನು ಗೋಳಾಡಿಸುವ ಆವಶ್ಯಕತೆಯು ಇರಲಿಲ್ಲ. ಏಕೆಂದರೆ:—(೧) ಎಲಿಸಬೆತ್ ರಾಣಿಯು ಅತಿಯಾಗಿ ಮಿತವ್ಯಯ ಮಾಡುವವಳಾಗಿದ್ದಳು. (೨) ಪ್ರಭುತ್ವ ಮಾಡುವವರಿಗೆ ಸೇರುತ್ತಿದ್ದ ಭೂಪ್ರದೇಶಗಳು ಮೊದಲಿಗಿಂತಲೂ ಹೆಚ್ಚು ಫಲವತ್ತಾಗಿದ್ದುದರಿಂದ, ಆಕೆಗೆ ಬೇಕಾದಷ್ಟು ವರಮಾನವಿತ್ತು. (೩) ಫ್ಯೂಡಲಿಸಮ್ ಪದ್ಧತಿಯ ಮೇರೆಗೆ ದೊಡ್ಡಮನುಷ್ಯರಿಂದ ಬರುತ್ತಿದ್ದ ತೆರಿಗೆಯಿಂದ (Feudal dues) ಲೇ ಬಹಳ ಹಣವು ಬರುತ್ತಿದ್ದುದರಿಂದ, ಅನೇಕ ತೆರಿಗೆಗಳನ್ನು ಹಾಕಿ ಬಡವರ ಪ್ರಾಣವನ್ನು ಹಿಂಡಬೇಕಾಗಿರಲಿಲ್ಲ.

ಇಷ್ಟರಲ್ಲಿ, ಪಾರ್ಲಿಮೆಂಟಿನವರು ಪ್ರಬಲರಾಗುತ್ತಾ ಬಂದರು. ಭೂಮಿಯು ಫಲವತ್ತಾಗಿರುವೆಡೆಗಳಲ್ಲಿ, ಕೃಷಿಯಿಂದಲೂ, ಉಳಿದೆಡೆಗಳಲ್ಲಿ ಕುರಿಗಳನ್ನು ಸಾಕಿ ಉಣ್ಣೆಯ ವ್ಯಾಪಾರದಿಂದಲೂ, ಸದಸ್ಯರೆಲ್ಲರೂ ಹಣಗಾರರಾಗಿದ್ದುದರಿಂದ, ಸಭೆಯು ಪ್ರಾಮುಖ್ಯತೆಯನ್ನು ಹೊಂದಿತು. ಸದಸ್ಯರು ತಮ್ಮ ಮನಸ್ಸಿಗೆ ಸಮರ್ಪಕವಾಗುವಂತೆ ಪ್ರಭುತ್ವವು ನಡೆಯದೇ ಇದ್ದಾಗ ಸರಕಾರಕ್ಕೆ ಪ್ರತಿಭಟಿಸಿ ನಿಲ್ಲುವ ಶಕ್ತಿಯನ್ನು ಪಡೆದುಕೊಂಡರು. ಎಲಿಸಬೆತ್ ರಾಣಿಯು ಇದನ್ನರಿತುಕೊಂಡು ಅದಕ್ಕನುಗುಣವಾಗಿ ನಡೆಯತೊಡಗಿದಳು.

ರಾಣಿಯು ತಾನು ಪ್ರಾಟೆಸ್ಟೆಂಟ್ ಮತಸ್ಥನನ್ನು ವಿವಾಹ ಮಾಡಿಕೊಂಡರೆ ತನ್ನ ಕ್ಯಾಥೊಲಿಕ್ ಪ್ರಜೆಗಳಿಗೆ ಅಸಮಾಧಾನ ವಾಗುವುದೆಂದೂ ಕ್ಯಾಥೊಲಿಕ್ ಮತದವನನ್ನು ಮದುವೆಯಾದರೆ ಪ್ರಾಟೆಸ್ಟೆಂಟ್ ಪ್ರಜೆಗಳಿಗೆ ಅಸಮಾಧಾನವಾಗುವುದೆಂದೂ, ಬಗೆದು ಅವಿವಾಹಿತಳಾಗಿಯೇ ಇದ್ದುಬಿಟ್ಟಳು; ಈ ಕಾರಣದಿಂದ ತನ್ನನ್ನು ಮದುವೆಯಾಗಲಿಚ್ಛಿಸಿದ ಯೂರೋಪಿನ ಇತರ ದೇಶಗಳ ರಾಜರುಗಳ ಪ್ರಾರ್ಥನೆಯನ್ನು ನಿರಾಕರಿಸಿದಳು; ನಿರಾಕರಿಸುವುದರಲ್ಲೂ ಬೇಗನೆ ನಿರಾಕರಿಸಲಿಲ್ಲ; ತಮ್ಮ ಕೋರಿಕೆಯು ನೆರವೇರಬಹುದೆಂದು ಅವರಿಗೆ ಆಶೆಯನ್ನುಂಟುಮಾಡಿ, ಬಳಿಕ ಅವರ ಆಶೆಯು ಬಯಲಾಗುವಂತೆ ಮಾಡಿದಳು. ಹೀಗೆ ತೊಳಲಿ ತೊಳಲಿ ಕೊನೆಗೆ ನಿರಾಶರಾದವರಲ್ಲಿ ಸ್ಪೇನಿನ ದೊರೆಯಾದ ಫಿಲಿಪ್ಪನು ಮುಖ್ಯವಾದವನು. ಎಲಿಸಬೆತ್ ರಾಣಿಯನ್ನು ಮದುವೆಯಾದರೆ ತಾನು ಇಂಗ್ಲೆಂಡಿಗೂ ದೊರೆಯಾಗಬಹುದೆಂದು ಅವನಿಗೆ ಕುತೂಹಲವಿತ್ತು. ರಾಣಿಯಾದರೋ ಇದನ್ನರಿತುಕೊಂಡು, ತನ್ನಸ್ಥಾನವು ದೃಢವಾಗಿ, ಕ್ಯಾಥೊಲಿಕರಾದ ಸ್ಪೇನಿನವರನ್ನು ನಿಗ್ರಹಿಸುವಷ್ಟು ಸಾಮರ್ಥ್ಯವುಂಟಾಗುವವರೆಗೂ ತನ್ನನ್ನು ವಿವಾಹವಾಗಲಿಚ್ಛಿಸಿದ ಫಿಲಿಪ್ಪನಿಗೆ ಯಾವುದೊಂದನ್ನೂ ಹೇಳದೆ ಸುಮ್ಮನೆ ಇದ್ದು ಕೊನೆಗೆ ಅವನನ್ನು ನಿರಾಶನನ್ನಾಗಿ ಮಾಡಿದಳು. ಅಲ್ಲದೆ ಸ್ಪೇನಿನಿಂದ ತನ್ನ ಮೇಲೆ ಯುದ್ಧಕ್ಕೆ ಬಂದ "ಸ್ಪ್ಯಾನಿಷ್ ಆರ್ಮೇಡ" (Spanish Armada) ಎಂಬ ನೌಕಾಸೈನ್ಯವನ್ನು ಧ್ವಂಸಮಾಡಿದಳು.

ಪಾರ್ಲಿಮೆಂಟಿನವರು ಇದರಿಂದ ಕಾತರರಾಗಿ, ರಾಣಿಯು ಮದುವೆಯಾಗದೇಇದ್ದರೂ, ಮುಂದೆ ಯಾರಿಗೆ ಪಟ್ಟವಾಗಬೇಕೆಂಬುದನ್ನಾದರೂ, ತಿಳಿಸಬೇಕೆಂದು ಕೋರಿದರು. ರಾಣಿಯು, ಅವರು ಈ ವಿಷಯದಲ್ಲಿ ತಲೆಹಾಕಕೂಡದೆಂದು ಉತ್ತರಹೇಳಿದಳು. ರಾಣಿಯು ಹೀಗೆ ಮಾಡಿದುದಕ್ಕೆ

ಕಾರಣವೇನೆಂದರೆ: ಮುಂದೆ ಪ್ರಾಟೆಸ್ಟೆಂಟ್ ಮತದವರು ಪಟ್ಟಕ್ಕೆ ಬರತಕ್ಕದೆಂದು ಅವಳು ಗೊತ್ತುಮಾಡಿದ್ದರೆ, ತನ್ನ ಕಾಲಾನಂತರ ಕ್ಯಾಥೊಲಿಕಳಾದ ಸ್ಕಾಟ್ಲೆಂಡಿನ ಮೇರಿ ರಾಣಿಯು (Mary, Queen of Scots) ಪಟ್ಟಕ್ಕೆ ಬರುವಳೆಂದು ನಂಬಿದ್ದ ಕ್ಯಾಥೊಲಿಕ್ ಪ್ರಜೆಗಳಿಗೆ ಅಸಮಾಧಾನವಾಗುತ್ತಿತ್ತು. ಕ್ಯಾಥೊಲಿಕರು ಪಟ್ಟಕ್ಕೆ ಬರತಕ್ಕದೆಂದು ತೀರ್ಮಾನ ಮಾಡಲು ಅವಳಿಗೆ ಇಷ್ಟವಿರಲಿಲ್ಲ. ಅಲ್ಲದೆ ಅವಳು ಹಾಗೆ ಮಾಡಿದ್ದರೆ ಪ್ರಾಟೆಸ್ಟೆಂಟ್ ಪ್ರಜೆಗಳು ಅಸಂತುಷ್ಟರಾಗುತ್ತಿದ್ದರು. ಇದನ್ನೆಲ್ಲಾ ತಪ್ಪಿಸುವುದಕ್ಕಾಗಿ ರಾಣಿಯು ಮೌನವನ್ನವಲಂಬಿಸಿದ್ದಳು.

೧೫೮೭ನೆಯ ಇಸವಿಯಲ್ಲಿ ಸ್ಕಾಟ್ಲೆಂಡಿನ ರಾಣಿಯಾದ ಮೇರಿಯು ಶಿರಶ್ಛೇದನವಾಯಿತು. ಮಾರನೆಯ ವರುಷ ಇಂಗ್ಲೆಂಡನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ಸ್ಪೇನಿನಿಂದ ಬಂದ ನೌಕಾಸೈನ್ಯವು ಸಂಪೂರ್ಣವಾಗಿ ಸೋಲಿಸಲ್ಪಟ್ಟಿತು. ಹೀಗೆ, ಎರಡು ಕಡೆಯ ಶತ್ರುಗಳೂ ನಾಶವಾದುದರಿಂದ ಎಲಿಸಬೆತ್‌ರಾಣಿಯ ಸ್ಥಾನವು ದೃಢಪಟ್ಟಿತು. ಅವಳು ನಿರಾತಂಕವಾಗಿ ಪ್ರಭುತ್ವಮಾಡಲು ಅವಕಾಶವು ಸಿಕ್ಕಿತು.

ಪ್ರಜೆಗಳು ತಮಗೆ ಶತ್ರುಬಾಧೆಯು ತಪ್ಪಿದುದರಿಂದ ತಮ್ಮ ದೇಶದ ಪ್ರಭುತ್ವಕ್ರಮವನ್ನು ಪರಿಷ್ಕರಿಸಿಕೊಂಡು ಸ್ವಾತಂತ್ರ್ಯವನ್ನು ಪಡೆದುಕೊಳ್ಳಲು ಪ್ರಯತ್ನಮಾಡತೊಡಗಿದರು. ನೂರು ವರುಷಕಾಲ (೧೫೮೮ ರಿಂದ ೧೬೮೮ ರವರೆಗೆ) ಹೋರಾಡಿ ನಾಲ್ಕನೆಯ ಎಡ್ವರ್ಡ್ ದೊರೆಯ ಕಾಲದಿಂದೀಚೆಗೆ ತಮ್ಮ ಕೈಬಿಟ್ಟುಹೋಗಿದ್ದ ಹಕ್ಕು ಬಾಧ್ಯತೆಗಳನ್ನು ಮತ್ತೆ ಪಡೆದುಕೊಂಡು ಪುನಃ ಅವುಗಳು ತಮ್ಮ ಕೈಬಿಟ್ಟುಹೋಗದಂತೆ ಜೋಪಾನಮಾಡಿಕೊಂಡರು. ಇದಕ್ಕೆಲ್ಲಾ ಸ್ಪೇನಿನಿಂದ ಬಂದ ನೌಕಾದಳವು ನಿರ್ಮೂಲವಾದುದು ಮೂಲಕಾರಣವೇ ಹೊರತು, ಎಲಿಸಬೆತ್‌ರಾಣಿಯ ತರುವಾಯ ಪಟ್ಟಕ್ಕೆ ಬಂದ ಜೇಮ್ಸ್ ದೊರೆಯು ದುರ್ಬಲನಾಗಿದ್ದುದು ಎಂದಿಗೂ ಮುಖ್ಯವಾದ ಕಾರಣವಲ್ಲ. ಅವನು ಎಷ್ಟೇ ಸಮರ್ಥನಾಗಿದ್ದರೂ ಇದನ್ನು ತಪ್ಪಿಸಲಾಗುತ್ತಿರಲಿಲ್ಲ. ಆತನು ಪಟ್ಟಕ್ಕೆ ಬರುವುದಕ್ಕೆ ಮೊದಲೇ ಈ ಹೋರಾಟವು ಆರಂಭವಾಗಿತ್ತು.

ಎಲಿಸಬೆತ್ ರಾಣಿಯ ಕಾಲದಲ್ಲಿಯೇ ಪಾರ್ಲಿಮೆಂಟಿನವರು ಗೊಣಗುವುದಕ್ಕಾರಂಭಿಸಿದರು. ಕೊನೆಕೊನೆಗೆ ಪ್ರಜೆಗಳಿಗೆ ರಾಣಿಯಲ್ಲಿದ್ದ ವಿಶ್ವಾಸವು ಕಡಿಮೆಯಾಗುತ್ತಾ ಬಂತು. ಇದಕ್ಕೆ ಮೂರು ಕಾರಣಗಳಿದ್ದುವು :—

(೧) ಯುದ್ಧಕ್ಕೆ ಹಣವನ್ನು ಒದಗಿಸುವುದಕ್ಕಾಗಿ ತೆರಿಗೆಯನ್ನು ಹಾಕಿದುದು. (೨) ರಾಣಿಯು ದೇಶದಲ್ಲೆಲ್ಲಾ ತಾನು ಸ್ಥಾಪಿಸಿದ್ದ "ಚರ್ಚ್ ಆಫ್ ಇಂಗ್ಲೆಂಡ್" (Church of England) ಮತವನ್ನು ಹರಡಬೇಕೆಂಬ ಉದ್ದೇಶದಿಂದ ಪ್ಯೂರಿಟನರ ಮನಸ್ಸಿಗೆ ಅಸಮಾಧಾನವಾಗುವಂತೆ ಮಾಡಿದುದು. (೩) ರಾಣಿಯು ತನಗೆ ಆಪ್ತರಾಗಿದ್ದವರಿಗೆ ಉಪ್ಪು, ಕಲ್ಲಿದ್ದಲು, ತೊಗಲು ಮುಂತಾದವುಗಳ ಮಾರಾಟದ ಮೇಲಿನ ಸರ್ವಸ್ವಾಮ್ಯವನ್ನು ವಹಿಸಿದುದು. ಹೀಗೆ ಅವುಗಳ ಮೇಲಿನ ಅಧಿಕಾರವನ್ನು ಪಡೆದುಕೊಂಡವರು ಆ ಪದಾರ್ಥಗಳ ಬೆಲೆಯನ್ನು ಹೆಚ್ಚಿಸಿದುದರಿಂದ ಜನರಿಗೆ ಬಹಳ ಕಷ್ಟವಾಯಿತು. ಪಾರ್ಲಿಮೆಂಟಿನವರು ಇದನ್ನು ತಪ್ಪಿಸಬೇಕೆಂದು ರಾಣಿಯನ್ನು ಪ್ರಾರ್ಥಿಸಿದರು. ಮೊದಮೊದಲು ರಾಣಿಯು ಅದಕ್ಕೆ ಕಿವಿಗೊಡಲಿಲ್ಲ. ಕೊನೆಗೆ ೧೬೦೧ರಲ್ಲಿ ಈ ವಿಷಯದಲ್ಲಿ ಪ್ರಬಲವಾದ ಚರ್ಚೆಗೆ ಆರಂಭವಾಯಿತು. ಪಾರ್ಲಿಮೆಂಟಿನವರ ಉದ್ದೇಶವು ನೆರವೇರದಂತೆ ಮಾಡಲು, ರಾಣಿಯ ಕಡೆಯ ದೊಡ್ಡ ಅಧಿಕಾರಿಗಳು ಪ್ರಯತ್ನಿಸಿದರು. ಅವರ ಪ್ರಯತ್ನವು ವಿಫಲವಾಯಿತು. ಕೊನೆಗೆ ರಾಣಿಯು ಪಾರ್ಲಿಮೆಂಟಿನವರ ಪ್ರಾರ್ಥನೆಯನ್ನು ನೆರವೇರಿಸುವದಾಗಿ ವಾಗ್ದಾನ ಮಾಡಲು ಅವರು ತೃಪ್ತರಾದರು. ಆದರೆ ರಾಣಿಯು ಮಾತ್ರ ತನ್ನ ಮಾತನ್ನು ನಡೆಯಿಸಲಿಲ್ಲ.

ಮೇಲೆ ಹೇಳಿದಂತೆ ಪಾರ್ಲಿಮೆಂಟಿನವರು ತಮ್ಮ ಹಕ್ಕು ಬಾಧ್ಯತೆಗಳನ್ನು ಪಡೆದುಕೊಳ್ಳಲು ಹೋರಾಡಲು ಮೊದಲಾದುದಕ್ಕೆ ದುರ್ಬಲರಾದ ಸ್ಟ್ಯೂಯರ್ಟ್ ಸಂತತಿಯ ದೊರೆಗಳು ಪಟ್ಟಕ್ಕೆ ಬಂದುದೇ ಮುಖ್ಯ ಕಾರಣವಲ್ಲ. ಆದರೂ ವಿಚಕ್ಷಣೆಯಿಲ್ಲದ ಆ ದೊರೆಗಳು ಸಿಂಹಾಸನಕ್ಕೆ ಬಂದುದು ಈ ಹೋರಾಟಕ್ಕೆ ಬಹುಮಟ್ಟಿಗೆ ಸಹಕಾರಿಯಾಯಿತು. ಟ್ಯೂಡರ್ ಸಂತತಿಯವರ ಆಳಿಕೆಯು ಮುಗಿಯುವ ವೇಳೆಗೆ ಪ್ರಜೆಗಳ ಮನೋಭಾವಗಳು ಹಲವು ವಿಧವಾಗಿ ಮಾರ್ಪಟ್ಟು ಹೋಗಿದ್ದುವು. ಮೊದಲಿನಂತೆ, ಪೋಪರು ದೇವತಾಸ್ವರೂಪರೆಂದು ತಿಳಿದು ಜನರು ಅವರಲ್ಲಿ ಭಕ್ತಿಯಿಂದಿರುವುದು ತಪ್ಪಿಹೋಯಿತು. ರೆಫರ್ಮೇಷನ್ನಿನ ಪ್ರಭಾವದಿಂದ ಪ್ರಾಟಸ್ಟೆಂಟ್, ಪ್ಯೂರಿಟನ್ ಮುಂತಾದ ಮತಗಳು ಹುಟ್ಟಿದುವು. ಜನರೆಲ್ಲರೂ ಸಮಾನರೆಂದೂ, ಅವರು ಕಡಿಮೆ ಇವರು ಹೆಚ್ಚು ಎಂಬ ಭೇದವೇ ಇರದಂತೆ ಮಾಡಬೇಕೆಂದೂ ನಿರ್ಧರವಾಯಿತು. ಇಂತಹ ವೇಳೆಯಲ್ಲಿ ಸ್ಟ್ಯೂಯರ್ಟ್ ಸಂತತಿಯ ಅರಸರು ಪ್ರಭುತ್ವವನ್ನು ವಹಿಸಿದರು. ಈ ದೊರೆಗಳು ತಮ್ಮ ಪದವಿಯು ಭಗವಂತನಿಂದ ಕರುಣಿಸಲ್ಪಟ್ಟಿದೆಂದೂ, ತಾವು ಆತನ ಅಂಶದಿಂದ ಹುಟ್ಟಿದವರೆಂದೂ, ಅದಕ್ಕೆ ತಕ್ಕ ಮನ್ನಣೆಯು ತಮಗೆ ದೊರೆಯಬೇಕೆಂದೂ ತಿಳಿದು ಹಾಗೆ ಮಾಡುವಂತೆ

ಜನರನ್ನು ಪ್ರೇರೇಪಿಸತೊಡಗಿದರು. ಜನರು ಅದಕ್ಕೆ ಕಿವಿಗೊಡುವ ಕಾಲವು ಎಂದೋ ಕಳೆದುಹೋಗಿತ್ತು. ದೊರೆಯೂ, ಎಲ್ಲರಿಗಿಂತಲೂ ಹೆಚ್ಚು ಪದವಿಯಲ್ಲಿರುವ ಒಬ್ಬ ಅಧಿಕಾರಿಯೆಂದು ಜನರು ಭಾವಿಸುವ ಕಾಲವು ಬಂದಿರುವಾಗ, ಇಂತಹ ಬೋಧನೆಗೆ ಕಿವಿಗೊಡುವವರಾರು?

ಜನರು ತಮ್ಮನ್ನು ದೇವಾಂಶಸಂಭೂತರೆಂದು ತಿಳಿಯಬೇಕೆಂದು ಟ್ಯೂಡರ್ ಸಂತತಿಯ ದೊರೆಗಳು ಕೋರಲಿಲ್ಲ. ಪ್ರಜೆಗಳ ಅಭಿಮತವನ್ನೇ ಅನುಸರಿಸಿ ನಡೆಯುತ್ತಿರುವಂತೆಯೇ ತೋರ್ಪಡಿಸಿಕೊಳ್ಳುತ್ತಾ ಅವರು ತಮ್ಮ ಉದ್ದೇಶವನ್ನು ಸಾಧಿಸಿಕೊಳ್ಳುತ್ತಿದ್ದರು. ಆದರೆ ಸ್ಟ್ಯೂಯರ್ಟ್ ಸಂತತಿಯ ದೊರೆಗಳಿಗೆ ಈ ಚಾತುರ್ಯವು ಇರಲಿಲ್ಲ. ಇದರ ಜೊತೆಗೆ ತಾವು ದೇವಾಂಶ ಸಂಭೂತರೆಂಬ ಪ್ರತಿಷ್ಠೆಯುಬೇರೆ ಅವರಲ್ಲಿ ತುಂಬಿತ್ತು.

ಸ್ಟ್ಯೂಯರ್ಟ್ ಸಂತತಿಯ ಅರಸರಲ್ಲಿ ಮೊದಲನೆಯವನಾದ ಜೇಮ್ಸ್ (James I) ದೊರೆಯಲ್ಲಿಯೂ ಈ ಗುಣಗಳೇ ಇದ್ದುವು. ಆತನು ಬುದ್ಧಿವಂತನೇಹೌದು. ಆದರೇನು? ಅವನಲ್ಲಿ ವಿವೇಕವಿಲ್ಲದೇ ಇದ್ದುದರಿಂದಲೂ, ತಾನು ಅಂಶಪುರುಷನೆಂಬ ಪ್ರತಿಷ್ಠೆಯು ಅವನಲ್ಲಿ ತುಂಬಿದ್ದುದರಿಂದಲೂ, ಅವನ ಬುದ್ಧಿವಂತಿಕೆಯಿಂದ ಯಾವ ಪ್ರಯೋಜನವೂ ಆಗುವಂತಿರಲಿಲ್ಲ. ಅವನು ನಿಯಮವನ್ನನುಸರಿಸಿ ನಡೆಯುತ್ತಿರಲಿಲ್ಲವಾದುದರಿಂದ ಮೊದಲಿನಿಂದಲೂ ಜನರಿಗೆ ಅವನಲ್ಲಿ ಪ್ರೀತಿಯೇ ಹುಟ್ಟಲಿಲ್ಲ. ಆತನು ಸಿಂಹಾಸನವನ್ನೇರಿದಾಗಿನಿಂದಲೂ, ಪಾರ್ಲಿಮೆಂಟಿನವರು ತಮ್ಮ ಹಕ್ಕುಬಾಧ್ಯತೆಗಳನ್ನು ಪಡೆದುಕೊಂಡು, ದೊರೆಯು ನಿರಂಕುಶ ಪ್ರವರ್ತಕನಾಗದಂತೆ ಮಾಡಲು ಉದ್ಯುಕ್ತರಾದರು. ಈ ಇಷ್ಟಾರ್ಥವು ಸಿದ್ಧಿಸಬೇಕಾದರೆ, ನ್ಯಾಯನಿಬಂಧನೆಗಳನ್ನು ಮಾಡುವುದರಲ್ಲಿಯೂ, ಆಡಳಿತಗಳ ವಿಚಾರದಲ್ಲಿಯೂ, ಅಪರಾಧಿಗಳನ್ನು ಶಿಕ್ಷಿಸುವುದರಲ್ಲಿಯೂ, ದೊರೆಯು ಪ್ರಜೆಗಳ ಅಭಿಮತವನ್ನನುಸರಿಸಿ ನಡೆಯುವಂತೆಮಾಡುವುದು ಅವಶ್ಯವಾಗಿತ್ತು. ಪಾರ್ಲಿಮೆಂಟಿನವರಿಗೆ ಇವುಗಳಲ್ಲಿ ಮೊದಲನೆಯ ಹಕ್ಕು ಮಾತ್ರ ಬಂದಿತ್ತು. ಉಳಿದ ಎರಡು ವಿಚಾರಗಳಲ್ಲಿ ಅವರ ಹಕ್ಕು ಬಾಧ್ಯತೆಗಳು ಸರಿಯಾಗಿರಲಿಲ್ಲ. ನ್ಯಾಯಾಧಿಪತಿಗಳನ್ನೂ ಮಂತ್ರಿಗಳನ್ನೂ ದೊರೆಯೇ ನೇಮಿಸುತ್ತಿದ್ದನು; ಅಲ್ಲದೆ ತನಗೆ ಬೇಕಾದಾಗ ಅವರನ್ನು ಕೆಲಸದಿಂದ ತೆಗೆದುಹಾಕುತ್ತಿದ್ದನು. ಆದುದರಿಂದ, ಪಾರ್ಲಿಮೆಂಟನವರಿಗೆ ಅವರಮೇಲೆ ಯಾವ ಅಧಿಕಾರವೂ ಇರಲಿಲ್ಲ. ಪ್ರಜೆಗಳಿಗೆ ನಿಷ್ಪಕ್ಷಪಾತವಾಗಿ ನ್ಯಾಯವು ದೊರೆಯುವುದು ಕಷ್ಟವಾಗಿತ್ತು. ಸಣ್ಣ ಸಣ್ಣ ನ್ಯಾಯಸ್ಥಾನಗಳಲ್ಲಿಕೂಡ, ದೊರೆಯ ಪಕ್ಷದವನಾದ ಷೆರೀಫನು ಪಂಚಾಯಿತ

ರನ್ನು ನಿಯಮಿಸುತ್ತಿದ್ದುದರಿಂದ ಇದೇ ರಗಳೆಯೇ ಇರುತ್ತಿತ್ತು. ನ್ಯಾಯ ಸ್ಥಾನಗಳಲ್ಲಿ ಸರಿಯಾಗಿ ವಿಚಾರಣೆಯು ನಡೆಯುವುದೇ ದುರ್ಲಭವಾಗಿತ್ತು. ದಂಗೆಗಳಿಂದ ಇವುಗಳನ್ನು ಸರಿಪಡಿಸುವುದು ಅಸಾಧ್ಯವೆಂದು ತೋರಿತು. ಪಾರ್ಲಿಮೆಂಟಿನವರಿಂದ ಮಾತ್ರವೇ ಈ ನ್ಯೂನತೆಗಳು ಪರಿಹಾರವಾಗ ಬೇಕಾಗಿತ್ತು. ಹೀಗಾಗಬೇಕಾದರೆ ಪಾರ್ಲಿಮೆಂಟ್ ಸಭೆಯು ಅನೇಕಸಾರಿ ಸೇರುವಂತಾಗಬೇಕು. ಮಿತವ್ಯಯವನ್ನು ಮಾಡದೇ ಇದ್ದ ಸ್ಟೂಯರ್ಟ್ ದೊರೆಗಳು ಹಣವನ್ನು ಪಡೆಯುವ ಉದ್ದೇಶದಿಂದ ಬೇಗಬೇಗನೆ ಪಾರ್ಲಿಮೆಂಟ್ ಸಭೆಯನ್ನು ಸೇರಿಸುತ್ತಿದ್ದಕಾರಣ ಸಭೆಯವರು ಈ ನ್ಯೂನತೆಗಳನ್ನು ಹೋಗಲಾಡಿಸುವುದಕ್ಕಾಗಿ ಪ್ರಯತ್ನಿಸಲು ಅನುಕೂಲವಾಯಿತು.

---

## ಹದಿಮೂರನೆಯ ಪ್ರಕರಣ.

### ಒಂದನೆಯ ಜೇಮ್ಸ್ ದೊರೆಯ ಕಾಲದಲ್ಲಿ ಪಾರ್ಲಿಮೆಂಟ್ ಸಭೆಯ ಸ್ಥಿತಿ.

ಒಂದನೆಯ ಜೇಮ್ಸ್ ದೊರೆಯು, ಮತಪರಿಷ್ಕರಣವಿಚಾರದಲ್ಲಿ ಬಹಳವಾಗಿ ಮುಂದುವರಿದು ಹೋಗಿದ್ದ ಪ್ಯೂರಿಟನರೇ (Puritans) ಮುಂತಾದವರನ್ನೂ, ಅಪರಾಧಗಳನ್ನು ಮಾಡಿ ನ್ಯಾಯಬಹಿರರಾಗಿದ್ದವರನ್ನೂ (Outlaws), ಪ್ರತಿನಿಧಿ ಸಭೆಗೆ ಪ್ರತಿನಿಧಿಗಳಾಗಿ ಆರಿಸಕೂಡದೆಂದು ಪ್ರಸಿದ್ಧ ಪತ್ರಿಕೆಯನ್ನು ಹೊರಡಿಸಿದನು. ಇದರಿಂದ, ತಮಗೆ ಇಷ್ಟವಿದ್ದವರನ್ನು ಆರಿಸುವ ಅಧಿಕಾರವು ಪ್ರಜೆಗಳಿಗೆ ತಪ್ಪಿಹೋಗುವಂತಿತ್ತು. ಆದುದರಿಂದ ಪ್ರಜೆಗಳು ಈ ಅಪ್ಪಣೆಗೆ ವಿರೋಧವಾಗಿ ಪ್ರತಿಭಟಿಸಿದರು. ಕೊನೆಗೆ, ಅವರಿಗೆ ತಮಗೆ ಇಷ್ಟಬಂದವರನ್ನು ಆರಿಸುವ ಅಧಿಕಾರವು ಬಂತು.

ಪಾರ್ಲಿಮೆಂಟಿನವರು ಮತ್ತೊಂದು ಅಧಿಕಾರವನ್ನು ಪಡೆದುಕೊಂಡರು. ರಾಜದ್ರೋಹ, ದಂಗೆಯನ್ನೆಬ್ಬಿಸುವುದು, ಇವೇ ಮುಂತಾದ ದೊಡ್ಡ ಅಪರಾಧ ವನ್ನು ಮಾಡಿದಾಗ ಹೊರತು, ಉಳಿದ ಅಪರಾಧಗಳಿಗಾಗಿ ಪಾರ್ಲಿಮೆಂಟಿನ ಸದಸ್ಯನ ಮೇಲೆ ಯಾರಾದರು ಮೊಕದ್ದಮೆಯನ್ನು ಮಾಡುವುದಾದರೆ ಎಂದಿಗೂ ಅವನನ್ನು ಸೆರೆಮನೆಗೆ ಕಳುಹಿಸಕೂಡದೆಂದು ಗೊತ್ತಾಯಿತು. ಈ ಅಧಿಕಾರದಿಂದ, ಸಾಲವನ್ನು ತೀರಿಸದೇ ಇದ್ದ ಷೈರ್ಲಿ (Shirley) ಎಂಬಾ ತನನ್ನು ಪದ್ಧತಿಯ ಮೇರೆ ಅವನು ಸಾಲವನ್ನು ತೀರಿಸುವವರೆಗೂ ಸೆರೆಮನೆ ಯಲ್ಲಿರಬೇಕೆಂದು ನಿರ್ಬಂಧಿಸುವುದಕ್ಕಾಗದೇ ಹೋಯಿತು.

ಜೇಮ್ಸ್ ದೊರೆಗೂ, ಪಾರ್ಲಿಮೆಂಟಿನವರಿಗೂ ಮೂರು ವಿಚಾರಗಳಲ್ಲಿ ಹೋರಾಟಗಳು ನಡೆದುವು: (೧) ಇಂಗ್ಲೆಂಡ್‍ದೇಶವೂ, ಸ್ಕಾಟ್ಲೆಂಡ್‍ದೇಶವೂ ಏಕೀಭವಿಸಿ, ಎರಡುದೇಶದ ಜನರಿಗೂ ಪರಸ್ಪರವಾಗಿ ಭೇದಭಾವನೆಯಿಲ್ಲದೆ, ಸಮಾನಸ್ಥಾನವು ದೊರೆಯುವಂತಾಗಬೇಕೆಂದು ಜೇಮ್ಸ್ ದೊರೆಯು ಅಪೇಕ್ಷಿಸಿದನು. ಸ್ಕಾಟ್ಲೆಂಡಿಗೂ ಮತ್ತು ಇಂಗ್ಲೆಂಡಿಗೂ ಎಲ್ಲೆಯನ್ನು ನಿರ್ಧರಿಸುವ ನಿಬಂಧನೆಗಳ (Border Laws) ವಿಷಯದಲ್ಲಿ ಹೊರತು ಉಳಿದ ವಿಚಾರಗಳಲ್ಲಿ ಎಂದಿಗೂ ಹೀಗಾಗಕೂಡದೆಂದು ಪಾರ್ಲಿಮೆಂಟಿನವರು ವಿಧಿಸಿದರು. (೨) ದೊರೆಯು, ಇನ್ನು ಮುಂದೆ ಫ್ಯೂಡಲಿಸಮ್ ಪದ್ಧತಿಗೆ ಸೇರಿದವರಿಂದ ತೆರಿಗೆಯನ್ನು ತೆಗೆದುಕೊಳ್ಳುವುದನ್ನು ನಿಲ್ಲಿಸಿ ಅದಕ್ಕೆ ಬದುಲು ತನಗೆ ಎರಡು ಲಕ್ಷ ಪೌಂಡುಗಳು ಬರುವಂತೆ ಪ್ರಜೆಗಳೆಲ್ಲರಿಗೂ ತೆರಿಗೆಯನ್ನು ಹಾಕುವುದಾಗಿಹೇಳಿದನು. ಬಹಳ ಚರ್ಚೆಯು ನಡೆದಮೇಲೆ ಪಾರ್ಲಿಮೆಂಟಿನವರು ಇದಕ್ಕೆ ಒಪ್ಪಿಕೊಂಡರು. (೩) ಕ್ಯಾಥೊಲಿಕರಿಗೆ ವಿರೋಧವಾಗಿ ಕೆಲವು ನ್ಯಾಯನಿಬಂಧನೆಗಳನ್ನು ಆಚರಣೆಗೆ ತರಬೇಕೆಂದು ಪಾರ್ಲಿಮೆಂಟಿನವರು ದೊರೆಯನ್ನು ಕೇಳುತ್ತಲೇ ಇದ್ದರು. ಆತನಾದರೋ ಕ್ಯಾಥೊಲಿಕರ ಪಕ್ಷಪಾತಿ. ಆದುದರಿಂದ, ಈ ವಿಷಯದಲ್ಲಿ ದೊರೆಗೂ ಪಾರ್ಲಿಮೆಂಟಿನವರಿಗೂ ಪರಸ್ಪರ ವಿವಾದಗಳು ನಡೆಯಲಾರಂಭವಾದುವು.

ಪಾರ್ಲಿಮೆಂಟಿನವರು ಟನೇಜ್ ಮತ್ತು ಪೌಂಡೇಜ್ ಎಂಬ ತೆರಿಗೆಗಳು ಇಷ್ಟೇ ಇರತಕ್ಕುದೆಂದು ನಿರ್ಧರಿಸಿ, ಆ ತೆರಿಗೆಗಳಿಂದ ಉತ್ಪತ್ತಿಯಾದ ಹಣವನ್ನು ವರ್ಷಂಪ್ರತಿಯಲ್ಲಿಯೂ ಬರಮಾಡಿಕೊಂಡು ಜೇಮ್ಸನು ಜನ್ಮಾವಧಿ ತನ್ನ ವೆಚ್ಚಗಳಿಗೆ ವಿನಿಯೋಗಿಸಿಕೊಳ್ಳಬಹುದೆಂದು ಗೊತ್ತುಮಾಡಿದ್ದರು. ಬಹುಕಾಲದಿಂದಲೂ ತೆರಿಗೆಯನ್ನು ವಿಧಿಸುವ ಅಧಿಕಾರವು ಪಾರ್ಲಿಮೆಂಟಿನವರದೇ ಆಗಿತ್ತು. ಆದರೂ ಜೇಮ್ಸ್ ದೊರೆಯು ಇದನ್ನು ಲಕ್ಷ್ಯಮಾಡದೆ ಈ ಅಧಿಕಾರವನ್ನು ತಾನೇ ವಹಿಸಲು ಯತ್ನಿಸಿದನು. ಜೇಮ್ಸ್ ದೊರೆಯು ಹೊಗೆಯ ಬತ್ತಿಯನ್ನು ಸೇದುತ್ತಿರಲ್ಲಿಲ್ಲ. ಪ್ರಜೆಗಳಲ್ಲಿದ್ದ ಈ ದುರಭ್ಯಾಸವನ್ನು ತಪ್ಪಿಸಬೇಕೆಂಬ ಉದ್ದೇಶದಿಂದ ಹೊಗೆಯಸೊಪ್ಪಿನ ಮೇಲಿನ ಸುಂಕವನ್ನು ಹೆಚ್ಚಿಸಿದನು. ಇದರಿಂದ ವರ್ತಕರಿಗೆ ಬಹಳ ತೊಂದರೆಯಾಯಿತು. ಬೇಟ್ಸ್ ಎಂಬವನೊಬ್ಬನು (Bates) ಈ ಹೆಚ್ಚು ತೆರಿಗೆಯನ್ನು ಕೊಡುವುದಿಲ್ಲವೆಂದು ಹೇಳಿದನು. ಇದಕ್ಕಾಗಿ, ಅವನನ್ನು ಎಕ್ಸ್‌ಚೆಕರ್ ನ್ಯಾಯಸ್ಥಾನ (Court of Exchequer) ದಲ್ಲಿ ವಿಚಾರಣೆ ಮಾಡಿದರು. ನ್ಯಾಯಾಧಿಪತಿಗಳು ದೊರೆಯ ವಶವರ್ತಿಗಳಾಗಿದ್ದುದರಿಂದ, ಅವರು ದೊರೆಗೆ ಅನುಕೂಲವಾದ ತೀರ್ಪನ್ನೇ ಕೊಡಬೇಕಾಯಿತು. ಇದರಿಂದ ಜೇಮ್ಸ್ ದೊರೆಗೆ ಉಂಟಾದ ಆನಂದಕ್ಕೆ ಪಾರವೇ ಇರಲಿಲ್ಲ.

ಒಡನೆಯೇ ಅವನು ಇತರ ತೆರಿಗೆಗಳನ್ನೂ ಹೆಚ್ಚಿಸಿದನು. ಇದನ್ನು ಕಂಡು ಪ್ರಜೆಗಳೆಲ್ಲರೂ ವಿಸ್ಮಿತರಾದರು. ಇಂತಹ ತೊಂದರೆಗಳನ್ನು ಪರಿಹರಿಸಿಕೊಂಡು, ತಮ್ಮ ಹಕ್ಕು ಬಾಧ್ಯತೆಗಳನ್ನು ಪಡೆದುಕೊಳ್ಳುವುದಕ್ಕಾಗಿ ಪ್ರತಿನಿಧಿಸಭೆಯವರು ತೆರಿಗೆಗಳನ್ನು ವಿಧಿಸುವುದು ತಮ್ಮ ಅಧಿಕಾರವೇ ಹೊರತು ದೊರೆಗೆ ಸಂಬಂಧಪಟ್ಟದಲ್ಲವೆಂದು ವಾದಿಸಲಾರಂಭಿಸಿದರು. ಆದರೆ ಶ್ರೀಮಂತ ಸಭೆಯವರು ಇದಕ್ಕೆ ಕಿವಿಗೊಡದೆ ಈ ವಾದವನ್ನು ಕಿವಿಗೆ ಹಾಕಿಕೊಳ್ಳದೆ ನಿರಾಕರಿಸಿದರು.

ಜೇಮ್ಸ್ ದೊರೆಯ ಆಳಿಕೆಯನ್ನು ಎರಡು ಮುಖ್ಯಭಾಗವಾಗಿ ವಿಂಗಡಿಸಬಹುದು. ಸೆಸಿಲ್ ಎಂಬಾತನು (Cecil, Lord Salisbury) ಬದುಕಿರುವವರೆಗೂ ಜೇಮ್ಸ್ ದೊರೆಯು ಆತನ ಬುದ್ಧಿವಾದದಂತೆ ರಾಜ್ಯಭಾರ ಮಾಡುತ್ತಿದ್ದನು; ಈ ಕಾಲದಲ್ಲಿ ಹಿಂದಿನ ಕ್ರಮವನ್ನೇ ಅನುಸರಿಸಿದನು; ಪಾರ್ಲಿಮೆಂಟ್ ಸಭೆಯನ್ನು ಕಾಲಕ್ಕೆ ಸರಿಯಾಗಿ ಸಭೆ ಸೇರಿಸಿದನು; ಅನೇಕ ಅಡಳಿತಗಳನ್ನು ಅವರಿಗೆ ವಹಿಸಿದನು; ಸಭೆಯವರೇ ಅನೇಕ ನ್ಯಾಯನಿಬಂಧನೆಗಳನ್ನು ವಿಧಿಸುವಂತೆ ಮಾಡಿ ಚೆನ್ನಾಗಿ ರಾಜ್ಯವಾಳಿದನು. ಆದರೆ ಸೆಸಿಲ್ ಎಂಬಾತನು ಮೃತನಾದಬಳಿಕ, ದೊರೆಯು ಕಾರ್ (Carr) ವಿಲೀರ್ಸ್(Villiers) ಎಂಬ ದುರ್ಮಂತ್ರಿಗಳ ಮಾತುಗಳಿಗೆ ಕಿವಿಗೊಟ್ಟು, ಪಾರ್ಲಿಮೆಂಟಿನವರನ್ನು ಅಲಕ್ಷ್ಯಮಾಡಿ, ತೆರಿಗೆಗಳನ್ನು ಹೆಚ್ಚಿಸಿ, ವರ್ತಕರನ್ನು ಕಿರುಗುಟ್ಟಿಸಿ ಇಲ್ಲದ ನೆವಗಳನ್ನು ಕಲ್ಪಿಸಿ ವಿಚಾರಣೆಯೇ ಇಲ್ಲದೆ ಪ್ಯೂರಿಟನರಿಗೆ ಕಾರಾಗೃಹವಾಸವನ್ನು ವಿಧಿಸಿ, ಸ್ವೇಚ್ಛೆಯಾಗಿ ಪ್ರಭುತ್ವಮಾಡತೊಡಗಿದನು.

ಆದರೂ, ಕೆಲವು ವಿಧದಲ್ಲಿ ಆತನು ಪ್ರಜೆಗಳಿಗೆ ಒಳ್ಳೆಯದನ್ನೂ ಮಾಡಿದನು. ಕೊಳಚೆಯು ಪ್ರದೇಶಗಳೆಲ್ಲಾ ಸರಿಹೋಗುವಂತೆ ಮಾಡಿಸಿದನು; ಐರ್ಲೆಂಡಿನಲ್ಲಿ ಇಂಗ್ಲಿಷರಿಗೆ ವಸತಿಗಳನ್ನು ಕಲ್ಪಿಸಲು ಪ್ರಯತ್ನಿಸಿದನು; ಇನ್ನೂ ಅನೇಕ ವಿಧಗಳಲ್ಲಿ ಪ್ರಜೆಗಳಿಗೆ ಉಪಕಾರ ಮಾಡಿದನು. ಇವುಗಳಿಗೆಲ್ಲಾ ಬಹಳ ಹಣವು ವೆಚ್ಚವಾಗಬೇಕಾಯಿತು.

ಆದುದರಿಂದ ಹಣವನ್ನು ಪಡೆದುಕೊಳ್ಳುವುದಕ್ಕಾಗಿ, ಅವನು ಪಾರ್ಲಿಮೆಂಟಿನವರನ್ನು ಸಭೆಸೇರಿಸಿದನು. ಈ ವೇಳೆಗೆ ಸಭೆಯು ನೆರೆದು ನಾಲ್ಕು ವರುಷಗಳಾಗಿದ್ದುವು. ಪಾರ್ಲಿಮೆಂಟಿನವರ ಆಕ್ಷೇಪಣೆಗಳಿಗೆ ತಾನು ಎಲ್ಲಿ ಗುರಿಯಾಗಬೇಕಾಗುವುದೊ ಎಂಬ ಭಯದಿಂದ, ಅವರು ತನ್ನ ದಾರಿಗೆ ಬರುವಂತೆ ಮಾಡುವುದಕ್ಕೋಸ್ಕರವಾಗಿ 'ಅಂಡರಟೇಕರ್ಸ್' (Undertakers)

ಎಂಬ ಮಧ್ಯಸ್ಥಗಾರರನ್ನು ನಿಯಮಿಸಿದನು. ಆದರೆ ಇದರಿಂದ ಯಾವ ಪ್ರಯೋಜನವೂ ಆಗಲಿಲ್ಲ. ಗುಟ್ಟು ಬಯಲಾಯಿತು. ದೊರೆಗೆ ಭಯವಾಗಿದ್ದುದೂ ಅವನು ಮಧ್ಯಸ್ಥಗಾರರನ್ನು ನಿಯಮಿಸಿದ್ದುದೂ ಎಲ್ಲರಿಗೂ ಗೊತ್ತಾದುವು. ದೊರೆಯ ಆಡಳಿತದ ಕ್ರಮವು ಸಮರ್ಪಕವಾಗಿಲ್ಲವೆಂದು ಪಾರ್ಲಿಮೆಂಟಿನವರು ಆಕ್ಷೇಪಿಸಿದರು. ತೆರಿಗೆಗಳನ್ನು ಹೆಚ್ಚು ಮಾಡಿದ ವಿಷಯದಲ್ಲಂತೂ ಬಹಳ ಚರ್ಚೆಗಳು ನಡೆದುವು. ಸಭೆಯವರು ಯಾವುದೊಂದು ನಿಬಂಧನೆಯನ್ನೂ ವಿಧಿಸುವುದಕ್ಕೆ ಮುಂಚೆ, ಅಷ್ಟೇಕೆ, ದೊರೆಗೆ ಹಣವನ್ನು ಕೊಡುವುದಕ್ಕೆ ಮುಂಚೆಯೇ, ಆತನು ಸಭೆಯನ್ನು ಮುಕ್ತಾಯಗೊಳಿಸಿದನು. ಪ್ರತಿನಿಧಿಗಳು ಸುಮ್ಮನೆ ಮನೆಗೆ ಹೋಗಬೇಕಾಯಿತು. ಈ ಸಾರಿ (೧೬೧೪)ನೆರೆದಿದ್ದ ಸಭೆಗೆ ಆಡ್ಲ್ಡ್ ಪಾರ್ಲಿಮೆಂಟ್ (Addled Parliament) ಎಂದರೆ ಗೊಡ್ಡುಸಭೆ ಎಂಬ ಹೆಸರು ಬಂತು. ಸಭೆಯು ಮುಕ್ತಾಯವಾದೊಡನೆಯೇ ಜೇಮ್ಸ್ ದೊರೆಯು ಪಾರ್ಲಿಮೆಂಟಿನವರಲ್ಲಿ ಅನೇಕರನ್ನು ಸೆರೆಯಲ್ಲಿಡಿಸಿದನು. ಹೀಗೆ ವಿಚಾರಣೆಯೇ ಇಲ್ಲದೆ ಸೆರೆಯಲ್ಲಿಡಿಸಿದುದಕ್ಕಾಗಿ ಅಪೀಲ್ ಮಾಡುವುದಕ್ಕೂ ಅವಕಾಶವಿರಲಿಲ್ಲ. ಏಕೆಂದರೆ ನ್ಯಾಯಾಧಿಪತಿಗಳೆಲ್ಲಾ ದೊರೆಯ ಕಡೆಗೇ ಇದ್ದರು. ಆದುದರಿಂದ ನಿಷ್ಪಕ್ಷಪಾತವಾದ ನ್ಯಾಯವು ದೊರೆಯುವಂತಿರಲಿಲ್ಲ.

ಮುಂದೆ ಏಳು ವರುಷಕಾಲ (೧೬೧೪–೧೬೨೧), ಪಾರ್ಲಿಮೆಂಟಿನವರನ್ನು ಸಭೆಸೇರಿಸದೆ ಜೇಮ್ಸ್ ದೊರೆಯು ನಿರಂಕುಶ ಪ್ರಭುತ್ವವನ್ನು ಮಾಡತೊಡಗಿದನು. ಆದರೆ ತನ್ನ ಪ್ರಭುತ್ವವು ಜನರಿಗೆ ಪ್ರೀತಿಪಾತ್ರವಾಗಿರುವಂತೆ ಮಾಡಿ ತನ್ನ ಉದ್ದೇಶವನ್ನು ಸಾಧಿಸಿಕೊಳ್ಳುವ ಚಾತುರ್ಯವು ಆತನಿಗೆ ಇರಲಿಲ್ಲ. ಬಹಳ ಸಮರ್ಥರೆಂದು ಹೆಸರುವಾಸಿಯಾಗಿದ್ದವರನ್ನು ಮಂತ್ರಿತ್ವಕ್ಕೆ ನಿಯಮಿಸಿ ತನ್ಮೂಲಕ ದೊರೆಯು ಯಾವಾಗಲೂ ಮಂತ್ರಿತ್ವಕ್ಕೆ ಒಳ್ಳೆಯವರನ್ನು ಆರಿಸುವವನೆಂದು ತೋರ್ಪಡಿಸಿಕೊಳ್ಳದೆ, ಜೇಮ್ಸ್ ದೊರೆಯು ಸಿಕ್ಕಿದವರನ್ನು ತನ್ನ ಆಪ್ತರನ್ನಾಗಿ ಮಾಡಿಕೊಂಡು ಆಡಳಿತಗಳನ್ನು ಅವರಿಗೆ ವಹಿಸಿದನು. ಸ್ಟಾರ್ ಛೇಂಬರ್ ಮತ್ತು ಹೈ ಕಮಿಷನ್ ನ್ಯಾಯಸ್ಥಾನಗಳಿಗೆ ಅನೇಕ ಅಧಿಕಾರಗಳನ್ನು ಕೊಟ್ಟನು. ಇದಕ್ಕೆ ಪ್ರತಿಯಾಗಿ ಅವನು ವರುಷಕ್ಕೆ ಒಂದುಲಕ್ಷವೂ ಮೂವತ್ತು ಮೂರು ಸಾವಿರ ಪೌಂಡುಗಳನ್ನು ತೆಗೆದುಕೊಳ್ಳುತ್ತಿದ್ದನೆಂದು ಹೇಳುತ್ತಾರೆ. ಅಂತು, ಈ ವಿಧವಾದ ನಡೆವಳಿಕೆಯಿಂದ, ಜೇಮ್ಸ್ ದೊರೆಯಲ್ಲಿ ಎಲ್ಲರಿಗೂ ವಿಶ್ವಾಸವು ತಪ್ಪಿತು; ನಿಷ್ಪಕ್ಷಪಾತವಾದ ನ್ಯಾಯವು ದೊರೆಯುವುದೆಂಬ ಭರವಸೆಯು ಕಡಿಮೆಯಾಗುತ್ತಾಬಂತು.

ಇಷ್ಟರಲ್ಲಿ, ಬಹಳ ದುಂದುಗಾರನಾಗಿದ್ದ ಜೇಮ್ಸ್ ದೊರೆಗೆ ಎಷ್ಟು ಹಣವು ಬಂದರೂ ಸಾಲದೇಹೋಯಿತು. ಯುದ್ಧದಲ್ಲಿ ಉದ್ಯುಕ್ತನಾಗಿದ್ದ ತನ್ನ ಅಳಿಯನಿಗೆ ಸಹಾಯ ಮಾಡಬೇಕಾಗಿ ಬಂತು. ಈ ವೆಚ್ಚಗಳಿಗಾಗಿ ಹಣವನ್ನು ಪಡೆಯುವ ಉದ್ದೇಶದಿಂದ ಪಾರ್ಲಿಮೆಂಟಿನವರನ್ನು ಸಭೆಸೇರಿಸಿದನು. ತನಗೆ ಗೊತ್ತಾಗದಂತೆ ಕೆಲವು ಅಚಾತುರ್ಯಗಳು ನಡೆದುವೆಂದೂ, ಅಲ್ಲದೆ ಹಿಂದೆ ಪಾರ್ಲಿಮೆಂಟ್ ಸಭೆಯು ಸೇರಿದ್ದಾಗ ತಾನು "ಅಂಡರ್ ಟೇಕರ್ಸ್" ಎಂಬ ಮಧ್ಯಸ್ಥಗಾರರ ಮಾತಿಗೆ ಕಿವಿಗೊಟ್ಟುದರಿಂದ ಕಾರ್ಯಗಳು ಸಮರ್ಪಕವಾಗಿ ನೆರವೇರಲಿಲ್ಲವೆಂದೂ ಹೇಳಿ ಸಭೆಯವರಿಗೆ ಸಮಾಧಾನ ಮಾಡಲು ಯತ್ನಿಸಿದನು. ಆದರೆ ಅವರು ಈ ಮೃದುವಚನಗಳ ಬಲೆಗೆ ಬೀಳದೆ ಪ್ರಭುತ್ವಕ್ರಮದಲ್ಲಿದ್ದ ನ್ಯೂನತೆಗಳನ್ನು ದೊರೆಯು ಸರಿಪಡಿಸಿದುದಲ್ಲದೆ ತಾವು ಹಣವನ್ನು ಕೊಡಲಾಗುವುದಿಲ್ಲವೆಂದು ಹೇಳಿಬಿಟ್ಟರು.

ಜೇಮ್ಸ್ ದೊರೆಯು ತೆರಿಗೆಗಳನ್ನು ಹೆಚ್ಚಿಸಿದುದರಿಂದ ಮಾತ್ರವೇ ಅಲ್ಲದೆ ಅಧಿಕಾರಗಳ ಮಾರಾಟದಿಂದಲೂ, ತನಗೆ ಒಂದು ಸಾವಿರ ಪೌಂಡನ್ನು ಕೊಟ್ಟವರಿಗೆ "ಬ್ಯಾರೊನೆಟ್"(Baronet) ಎಂಬ ಬಿರುದನ್ನು ಕೊಡುವುದರಿಂದಲೂ, ಕಲ್ಲಿದ್ದಲೇ ಮುಂತಾದ ಪದಾರ್ಥಗಳ ಮಾರಾಟದ ಸರ್ವಸ್ವಾಮ್ಯವನ್ನು (ಬಟ್ಟು ಗುತ್ತಿಗೆಯನ್ನು) ತನಗೆ ಹಣವನ್ನು ಕೊಟ್ಟವರಿಗೆ ವಹಿಸುವುದರಿಂದಲೂ (grant of monopolies) ತನ್ನ ಆದಾಯವನ್ನು ಹೆಚ್ಚಿಸಿಕೊಂಡಿದ್ದನು. ಪ್ರತಿನಿಧಿಸಭೆಯವರು ಇದನ್ನೆಲ್ಲಾ ಸರಿಪಡಿಸುವುದಕ್ಕೆ ಪದಾರ್ಥದ ಮಾರಾಟದಸರ್ವಸ್ವಾಮ್ಯವನ್ನು ಪಡೆದುಕೊಂಡಿದ್ದ ಛಾನ್ಸೆಲರ್ ಬೇಕನ್ (Lord Chancellor Bacon) ಮುಂತಾದವರನ್ನು ಶ್ರೀಮಂತ ಸಭೆಯಲ್ಲಿ ವಿಚಾರಣೆಗೆ ಗುರಿಮಾಡುವುದಕ್ಕೆ ಪ್ರಯತ್ನಮಾಡಿದರು. ಬಳಿಕ ದೊರೆಯು ವೆಚ್ಚಕ್ಕೆ ಹಣವನ್ನು ಒದಗಿಸಿದರು. ಒಡನೆಯೆ ಸಭೆಯು ಮುಕ್ತಾಯವಾಗಿ ಐದು ತಿಂಗಳ ತರುವಾಯ ಮತ್ತೆ ನೆರೆಯಿತು. ಈ ಸಾರಿ ಪಾರ್ಲಿಮೆಂಟಿನವರು ಜೇಮ್ಸ್ ದೊರೆಯ ಹಿರಿಯ ಮಗನಾದ ಛಾರಲ್ಸ್ ರಾಜಕುಮಾರನಿಗೆ(Prince Charles) ಪ್ರಾಟೆಸ್ಟೆಂಟ್ ಮತದ ಹೆಣ್ಣನ್ನು ತಂದು ಮದುವೆ ಮಾಡಬೇಕೆಂದು ದೊರೆಯನ್ನು ಪ್ರಾರ್ಥಿಸಿದರು. ಅವನು ಅದಕ್ಕಾಗಿ ಕೋಪಿಸಿಕೊಂಡು ಪಾರ್ಲಿಮೆಂಟಿನವರು ಈ ವಿಚಾರಗಳಿಗೆ ಬರಕೂಡದೆಂದು ಉತ್ತರ ಹೇಳಿದನು. ಅದಕ್ಕೆ ಅವರು ಅಸಂತುಷ್ಟರಾಗಿ ಇಂಗ್ಲೆಂಡಿನ ಪ್ರಜೆಗಳು ಸ್ವಾತಂತ್ರ್ಯದಿಂದ ಜೀವಿಸುವ ಹಕ್ಕನ್ನು ಪಡೆದಿದ್ದರೆಂದೂ, ರಾಜ್ಯದ ವಿಷಯವಾಗಿಯೂ, ಪ್ರಜೆಗಳ ಕಷ್ಟಸುಖಗಳ ವಿಚಾರದಲ್ಲಿಯೂ, ಮತವಿಷಯವಾಗಿಯೂ, ನ್ಯಾಯ

ನಿಬಂಧನೆಗಳ ವಿಚಾರದಲ್ಲಿಯೂ, ಚರ್ಚೆಮಾಡಲು ತಮಗೆ ಬಾಧ್ಯತೆಯು ಇತ್ತೆಂದೂ, ನಿರ್ಣಯಮಾಡಿದರು. ದೊರೆಯು ಈ ನಿರ್ಣಯಪತ್ರವನ್ನು ಹರಿದುಹಾಕಿ, ಪಾರ್ಲಿಮೆಂಟ್ ಸಭೆಯನ್ನು ಮುಕ್ತಾಯಮಾಡಿ, ಕೋಕ್, ಪಿಮ್ ಮುಂತಾದ ಐದು ಮಂದಿ ಸದಸ್ಯರನ್ನು ಸೆರೆಯಲ್ಲಿಡಿಸಿದನು. ಬಳಿಕ, ಜೇಮ್ಸ್ ದೊರೆಯು ನಿರಾತಂಕವಾಗಿ, ಸ್ಪೇನಿನ ರಾಜಕುಮಾರಿಯನ್ನು ತನ್ನ ಮಗನಿಗೆ ತಂದುಕೊಳ್ಳುವುದಾಗಿ ಮಾತನಾಡಿದನು. ರಾಜಕುಮಾರನಿಗೆ ಕ್ಯಾಥೊಲಿಕ್ ಮತದ ಹೆಣ್ಣನ್ನು ಕೊಟ್ಟು ಮದುವೆಯಾಗುವುದೆಂಬುದನ್ನು ಕೇಳಿದಾಗ ಪ್ರಜೆಗಳಿಗುಂಟಾದ ಚಿತ್ತಕ್ಷೋಭೆಗೆ ಎಲ್ಲೆಯೇ ಇರಲಿಲ್ಲ. ಆದರೆ, ಈ ವಿಷಯವಾಗಿ ಮಾತನಾಡಿಕೊಂಡು ಬರುವುದಕ್ಕಾಗಿ ಸ್ಪೇನಿಗೆ ಹೋಗಿದ್ದ ಬಕಿಂಘಂ ಡ್ಯೂಕನು (Duke of Buckingham) ಈ ವಿವಾಹಕ್ಕೆ ಒಪ್ಪದೆ ಅಸಂತುಷ್ಟನಾಗಿ ಹಿಂದಕ್ಕೆ ಬಂದನು. ಇದನ್ನು ಕೇಳಿ ಪ್ರಜೆಗಳೆಲ್ಲರೂ ಕೋಲಾಹಲ ಮಾಡತೊಡಗಿದರು. ಈ ಡ್ಯೂಕನು ಸ್ವಲ್ಪಕಾಲ ಅವರ ವಿಶ್ವಾಸಕ್ಕೆ ಪಾತ್ರನಾದನು. ಇದೇ ಸಮಯವೆಂದರಿತು ಜೇಮ್ಸನು ಪಾರ್ಲಿಮೆಂಟಿನವರನ್ನು ಸಭೆ ಸೇರಿಸಿದನು. ಅವರೆಲ್ಲರೂ ಸಂತೋಷದಿಂದ ಸಭೆಸೇರಿ ಸ್ಪೇನಿನ ಮೇಲೆ ಯುದ್ಧಕ್ಕೆ ಹೊರಡಬೇಕೆಂದಿದ್ದ ಜೇಮ್ಸ್ ದೊರೆಯ ವೆಚ್ಚಕ್ಕೆ ಯಥೇಷ್ಟವಾಗಿ ಹಣವನ್ನೊದಗಿಸಿದರು. ಉಳಿದ ವಿಚಾರಗಳಲ್ಲಿ ಅವರು ದೊರೆಗೆ ಅನುಕೂಲರಾಗಿರಲಿಲ್ಲ; ಪದಾರ್ಥಗಳ ಮಾರಾಟದ ಸರ್ವಸ್ವಾಮ್ಯವನ್ನು ಕೊಡುವುದು ಅನ್ಯಾಯವಾದುದೆಂದು ವಾದಿಸಿ, ಕೋಶಾಧ್ಯಕ್ಷನು (Lord Treasurer) ಲಂಚವನ್ನು ತೆಗೆದುಕೊಂಡನೆಂಬ ತಪ್ಪಿಗಾಗಿ ಶ್ರೀಮಂತ ಸಭೆಯಲ್ಲಿ ಅವನನ್ನು ವಿಚಾರಣೆಗೆ ಗುರಿಮಾಡಿದರು. ಈ ಸಮಯದಲ್ಲಿ ಜೇಮ್ಸ್ ದೊರೆಯು ಮೃತನಾದನು.

ಈತನ ಕಾಲದಲ್ಲಿ ಪಾರ್ಲಿಮೆಂಟಿನವರು ಪ್ರತಿನಿಧಿಗಳ ಚುನಾವಣೆಯಲ್ಲಿ ಸ್ವಾತಂತ್ರ್ಯವನ್ನೂ, ಮಹಾಪರಾಧಗಳನ್ನು ಮಾಡಿದಾಗ ಹೊರತು, ಉಳಿದ ವೇಳೆಗಳಲ್ಲಿ ಪಾರ್ಲಿಮೆಂಟಿನ ಸದಸ್ಯರನ್ನು ಸೆರೆಮನೆಗೆ ಕಳುಹಿಸಕೂಡದೆಂಬ ರಿಯಾಯತಿಯನ್ನೂ, ದೊರೆಯ ದಾಕ್ಷಿಣ್ಯಕ್ಕೆ ಸಿಕ್ಕಿ ನ್ಯಾಯವರಿತು ನಡೆಯದೇ ಇರುವ ಅಧಿಕಾರಿಗಳನ್ನು ಶ್ರೀಮಂತಸಭೆಯಲ್ಲಿ ವಿಚಾರಣೆಗೆ ಗುರಿಮಾಡುವ ಅಧಿಕಾರವನ್ನೂ, ಎಲ್ಲಾ ವಿಚಾರಗಳನ್ನೂ ಚರ್ಚಿಸುವ ಹಕ್ಕನ್ನೂ ಪಡೆದುಕೊಂಡರು. ಸಿಕ್ಕಿದಂತೆ ಪ್ರಸಿದ್ಧಪತ್ರಿಕೆಗಳನ್ನು ಹೊರಡಿಸುವುದರಲ್ಲಿಯೂ, ತೆರಿಗೆಯನ್ನು ಹಾಕುವುದರಲ್ಲಿಯೂ, ದೊರೆಗೆ ಅಧಿಕಾರವಿಲ್ಲದಂತಾಯಿತು. ಪದಾರ್ಥಗಳ ಮಾರಾಟದಲ್ಲಿ ಸರ್ವಸ್ವಾಮ್ಯವನ್ನು ಕೊಟ್ಟು, ತಕ್ಕ ಪ್ರತಿಫಲ

ವನ್ನು ಹೊಂದುತ್ತಿದ್ದದನ್ನು ದೊರೆಯು ನಿಲ್ಲಿಸಬೇಕಾಗಿಬಂತು. ಆದುದರಿಂದ ಆತನ ವರಮಾನವು ಕಡಿಮೆಯಾದಕಾರಣ, ತನ್ನ ವೆಚ್ಚಕ್ಕೆ ಹಣವನ್ನು ಪಡೆಯುವುದಕ್ಕಾಗಿ, ಆತನು ಪಾರ್ಲಿಮೆಂಟಿನವರನ್ನು ಅನುಸರಿಸಿಕೊಂಡು ಅವರನ್ನು ಕ್ರಮತಪ್ಪದೆ ಸಭೆಸೇರಿಸುವಂತಾಯಿತು.

ಜೇಮ್ಸ್ ದೊರೆಯ ಕಾಲಾನಂತರ, ಅವನ ಮಗನಾದ ಛಾರಲ್ಸ್ ರಾಜಪುತ್ರನು ಸಿಂಹಾಸನವನ್ನು ಹತ್ತಿದನು. ಈ ಮೊದಲನೆಯ ಛಾರಲ್ಸ್ (Charles I) ದೊರೆಯ ಕಾಲದಲ್ಲಿ ತಮ್ಮ ಹಕ್ಕು ಬಾಧ್ಯತೆಗಳನ್ನು ಪಡೆದುಕೊಳ್ಳುವುದಕ್ಕಾಗಿ ಪಾರ್ಲಿಮೆಂಟಿನವರು ಬಹಳವಾಗಿ ಹೋರಾಡಿದರು.

---

## ಹದಿನಾಲ್ಕನೆಯ ಪ್ರಕರಣ.

### ಒಂದನೆಯ ಛಾರಲ್ಸ್ ದೊರೆಯೂ ಪಾರ್ಲಿಮೆಂಟ್ ಸಭೆಯೂ.

ಜೇಮ್ಸ್ ದೊರೆಯ ನಡತೆಗೂ, ಛಾರಲ್ಸ್ ದೊರೆಯ ನಡತೆಗೂ, ಅನೇಕ ವ್ಯತ್ಯಾಸಗಳಿದ್ದುವು. ಜೇಮ್ಸ್ ದೊರೆಯು ರಾಜತಂತ್ರವಿಶಾರದನಾಗಿಯೂ ನಡೆಯುತ್ತಿರುವ ವಿದ್ಯಮಾನಗಳನ್ನೆಲ್ಲಾ ಪರಿಶೀಲಿಸುವವನಾಗಿಯೂ, ಹಠವಾದಿಯಾಗಿಯೂ ಬಹು ಜನರು ವಿರೋಧಿಗಳಾದಾಗ ಮಾತ್ರ ತನ್ನ ಹಟವನ್ನು ಬಿಟ್ಟು ಪ್ರಜೆಗಳ ಅಭಿಮತವನ್ನೇ ಅನುಸರಿಸುವವನಾಗಿಯೂ ಇದ್ದನು. ಆದರೂ, ಅವನು ಬಹಳ ದ್ರವ್ಯಲೋಲುಪನಾಗಿದ್ದುದರಿಂದ ಪ್ರಜೆಗಳಿಗೆ ಬಹಳ ಬೇಸರವುಂಟಾಯಿತು. ಛಾರಲ್ಸ್ ದೊರೆಯು ಮಾತ್ರ ಹೀಗಿಲ್ಲದೆ ಪ್ರಭುವಿಗೆ ತಕ್ಕ ಘನತೆಯಿಂದ ಕೂಡಿದ್ದನು. ಆದರೇನು ? ಈತನಿಗೆ ರಾಜ್ಯಭಾರದ ಗುಟ್ಟೇ ತಿಳಿಯದು. ಈತನು ತನ್ನ ಹಟವೇ ಸಾಗಬೇಕೆಂಬ ದುರಭಿಮಾನವನ್ನು ಹೊಂದಿದ್ದನು ; ಅಲ್ಲದೆ, ತನಗೆ ಬಹು ಜನಗಳು ವಿರೋಧಿಗಳಾಗಿರುವರೇ, ಇಲ್ಲವೇ ಸ್ವಲ್ಪಮಂದಿ ವಿರೋಧಿಗಳಾಗಿರುವರೇ ಎಂಬುದನ್ನು ನಿರ್ಧರಿಸಲಾರದವನಾಗಿದ್ದನು. ಇವುಗಳ ಜೊತೆಗೆ, ಈತನಲ್ಲಿ ಕೊಟ್ಟ ಮಾತಿಗೆ ತಪ್ಪಿ ನಡೆಯುವ ದುರ್ಗುಣವಿತ್ತು.

ಈತನು ಪಟ್ಟಕ್ಕೆ ಬಂದಾಗ, ಜನರೆಲ್ಲರೂ ಈತನಲ್ಲಿ ಸುಹೃದಯರಾಗಿದ್ದರು. ಆದರೆ ಸ್ವಲ್ಪಕಾಲದಲ್ಲಿಯೇ ಇದು ಕಡಿಮೆಯಾಯಿತು. ಛಾರಲ್ಸ್ ದೊರೆಯು ಫ್ರಾನ್ಸಿನ ಹೆಣ್ಣನ್ನು ವಿವಾಹ ಮಾಡಿಕೊಳ್ಳಲು ಸಮ್ಮತಿಸಿದನು.

ಅವಳು ಕ್ಯಾಥೊಲಿಕಳಾಗಿದ್ದಳು. ಇದರಿಂದ ಜನರಿಗೆ ಅಸಮಾಧಾನವಾಯಿತು. ದೊರೆಯು ಇಂಗ್ಲೆಂಡಿನಲ್ಲಿ ಕ್ಯಾಥೊಲಿಕರಿಗೆ ಅನುಕೂಲ್ಯಗಳನ್ನು ಕಲ್ಪಿಸ ಬಹುದೆಂಬ ಸಂಶಯವು ಹುಟ್ಟಿತು. ಆದುದರಿಂದ, ಪಾರ್ಲಿಮೆಂಟಿನವರು ಸಭೆ ಸೇರಿದಾಗ, ಸ್ಪೇನಿನೊಡನೆ ಯುದ್ಧವು ಆರಂಭವಾಗುವಂತಿದ್ದರೂ ಕೂಡ ಅವನಿಗೆ ಹೆಚ್ಚು ಹಣವನ್ನು ಕೊಡಲಿಲ್ಲ; ಆಜೀವನಪರ್ಯಂತವಾಗಿ ತೆರಿಗೆಗಳಿಂದ ಅವನ ವೆಚ್ಚಕ್ಕೆ ಹಣವು ಬರತಕ್ಕುದೆಂದು ಗೊತ್ತುಮಾಡಲಿಲ್ಲ; ಟನೇಜ್ ಮತ್ತು ಪೌಂಡೇಜ್ ಎಂಬ ತೆರಿಗೆಗಳಿಂದ ಒಂದು ವರುಷದ ಮಟ್ಟಿಗೆ ಮಾತ್ರವೇ ಅವನಿಗೆ ಹಣವು ಬರತಕ್ಕುದೆಂದು ಗೊತ್ತುಮಾಡಿದರು. ದೊರೆಯು ಕೋಪಗೊಂಡು ಇದನ್ನು ನಿರಾಕರಿಸಿದನು. ಸಭೆಯು ಮುಕ್ತಾಯವಾದಮೇಲೆ ಸಭೆಯವರ ಅನುಮತಿಯು ಇಲ್ಲದಿದ್ದರೂ ಕೂಡ, ತೆರಿಗೆಗಳನ್ನು ತೆಗೆದುಕೊಂಡು ಅವನು ವೆಚ್ಚಕ್ಕೆ ಹಣವನ್ನು ಪಡೆದುಕೊಂಡನು ಫ್ರಾನ್ಸ್ ದೇಶದವರಿಗೆ ಯುದ್ಧದಲ್ಲಿ ಸಹಾಯಮಾಡಲು ಕಳುಹಿಸಿದ್ದ ಎಂಟು ಯುದ್ಧದ ಹಡಗುಗಳನ್ನು ರೋಷಲಿ (Rochelle) ಯಲ್ಲಿದ್ದ ಹ್ಯೂಗೆನೊಗಳೆಂಬ (Huguenots) ಪ್ರಾಟೆಸ್ಟೆಂಟರ ಮೇಲೆ ಯುದ್ಧ ಮಾಡಲು ನೇಮಕಮಾಡಿದನು. ಹೀಗೆ ಪ್ರಾಟೆಸ್ಟೆಂಟರನ್ನು ಹಿಂಸಿಸಿದುದರಿಂದ ಇಂಗ್ಲೀಷರಿಗೆ ಬಹಳ ಅಸಮಾಧಾನವಾಯಿತು. ಪಾರ್ಲಿಮೆಂಟಿನವರ ಅನುಮತಿಯಿಲ್ಲದೆ ಅವನು ತೆರಿಗೆಗಳನ್ನು ಬರಮಾಡಿಕೊಂಡುದರಿಂದ ಈ ಅಸಮಾಧಾನವು ಮತ್ತಷ್ಟು ಹೆಚ್ಚಾಯಿತು. ಆದುದರಿಂದ ಪಾರ್ಲಿಮೆಂಟ್ ಸಭೆಯವರು ಮುಂದೆಸಭೆ ಸೇರಿದಾಗ ದೊರೆಯ ವೆಚ್ಚಕ್ಕೆ ಹಣವನ್ನು .ಕೊಡಲೇ ಇಲ್ಲ.

ಸ್ಪೇನಿನವರನ್ನು ಗೆದ್ದು ಪ್ರಜೆಗಳ ಪ್ರೀತಿಗೆ ಪಾತ್ರನಾಗಬೇಕೆಂದು ಛಾರಲ್ಸ್ ದೊರೆಯು ಆ ವಿಷಯದಲ್ಲಿ ಪ್ರಯತ್ನಮಾಡಿದನು. ಆದರೆ, ಅವನ ಉದ್ಯಮವು ವ್ಯರ್ಥವಾಯಿತು. ಈ ವೇಳೆಗೆ ದೊರೆಗೆ ವೆಚ್ಚಕ್ಕೆ ಹಣವಿಲ್ಲದೆ ಬಹಳ ತೊಂದರೆಯಾಯಿತು. ಪಾರ್ಲಿಮೆಂಟಿನವರನ್ನು ಸಭೆ ಸೇರಿಸದೆ ಇದ್ದರೆ ಯತ್ನವಿಲ್ಲದೆ ಹೋಯಿತು. ಅವರು, ದೊರೆಯು ತಮ್ಮ ಅನುಮತಿಯಿಲ್ಲದೆ ತೆರಿಗೆಗಳಿಂದ ಹಣವನ್ನು ಬರಮಾಡಿಕೊಂಡುದಕ್ಕಾಗಿ ಅವನನ್ನು ಆಕ್ಷೇಪಿಸಿದರು. ಮತ ವಿಚಾರದಲ್ಲಂತೂ ಪ್ರತಿನಿಧಿ ಸಭೆಯವರಿಗೂ, ಛಾರಲ್ಸ್ ದೊರೆಗೂ ಸ್ವಲ್ಪವೂ ಸರಿಬೀಳಲಿಲ್ಲ. ದೊರೆಯು ಲಾಡ್ ಎಂಬಾತನ (Bishop Laud) ಸಲಹೆಗಳಿಗನುಸಾರವಾಗಿ ಇಂಗ್ಲಿಷ್ ಚರ್ಚಿಗೆ ಕೆಲವು ಕರ್ಮಗಳನ್ನು ವಿಧಾಯಕ ಮಾಡಿದನು. ಅವುಗಳು ಕ್ಯಾಥೊಲಿಕ್ ಮತದವರು ನಡೆಯಿಸುತ್ತಿದ್ದ ಕರ್ಮಗಳನ್ನು ಸ್ವಲ್ಪ ಮಟ್ಟಿಗೆ ಹೋಲುತ್ತಿದ್ದುದರಿಂದ ಪ್ರಜೆಗಳಿಗೆ ಅಸ

ಮಾಧಾನವಾಯಿತು; ದೊರೆಯು ಪ್ರಾಟೆಸ್ಟೆಂಟ್ ಮತಕ್ಕೆ ಬದುಲಾಗಿ ಕ್ಯಾಥೊಲಿಕ್ ಮತವನ್ನು ರೂಢಿಗೆ ತರುವನೆಂಬ ಶಂಕೆಯು ತಲೆದೋರಿತು. ಸಭೆಯುವರು ಈ ವಿಷಯದಲ್ಲಿ ಎಷ್ಟು ಅಸಂತುಷ್ಟರಾದರೆಂಬುದನ್ನು ಹೇಳಬೇಕಾಗಿಯೇ ಇಲ್ಲ. ರಾಜತಂತ್ರಜ್ಞರಂತೂ (Politicians) ದೊರೆಯು ಸ್ಪೇನಿನವರನ್ನು ಜಯಿಸದೇ ಇದ್ದುದರಿಂದಲೂ, ರಾಜ್ಯದ ಆಡಳಿತಗಳನ್ನು ಸರಿಯಾಗಿ ನಡೆಯಿಸದೇ ಇದ್ದುದರಿಂದಲೂ, ಬಹಳ ಅಸಮಾಧಾನವನ್ನು ಹೊಂದಿದರು. ಶ್ರೀಮಂತ ಸಭೆಯುವರ ಮನಸ್ಸೂ ಕೆಟ್ಟುಹೋಯಿತು. ಪಾರ್ಲಿಮೆಂಟಿನವರು, ರಾಜ್ಯದಲ್ಲಿ ನಡೆದ ಅನರ್ಥಗಳಿಗೆಲ್ಲಾ ಬಕಿಂಘಂ ಡ್ಯೂಕನೇ ಕಾರಣನೆಂದು ಹೇಳಿ, ಆ ಅಪರಾಧಕ್ಕಾಗಿ ಶ್ರೀಮಂತಸಭೆಯಲ್ಲಿ ಅವನ ವಿಚಾರಣೆಯು ನಡೆಯತಕ್ಕುದೆಂದು ಅಭಿಪ್ರಾಯಪಟ್ಟರು. ಆದರೆ ದೊರೆಯು ತನ್ನ ಆಪ್ತನನ್ನು ಬಿಟ್ಟುಕೊಡಲಾರದೆ ಸಭೆಯನ್ನು ಮುಕ್ತಾಯಗೊಳಿಸಿದನು. ಇದರಿಂದ, ಪ್ರಜೆಗಳಿಗೆ ಅವನಲ್ಲಿ ಮೊದಲೇ ಕಡಿಮೆಯಾಗಿದ್ದ ವಿಶ್ವಾಸವು ಮತ್ತಷ್ಟು ಕಡಿಮೆಯಾಯಿತು.

ಮಾರನೆಯ ವರುಷ (೧೬೨೬) ಛಾರಲ್ಸ್ ದೊರೆಯು ಪಾರ್ಲಿಮೆಂಟಿನವರನ್ನು ಸಭೆಸೇರಿಸಲೇ ಇಲ್ಲ. ಅವರ ಒಪ್ಪಿಗೆಯು ಇಲ್ಲದೆ ಇದ್ದರೂ, ಆತನು ಟನೇಜ್ ಮತ್ತು ಪೌಂಡೇಜ್ ಎಂಬ ತೆರಿಗೆಗಳನ್ನು ತೆಗೆದುಕೊಳ್ಳಲಾರಂಭಿಸಿದನು. ಪಾರ್ಲಿಮೆಂಟಿನಸಮ್ಮತಿಯಿಲ್ಲದ ತೆರಿಗೆಗಳನ್ನು ಕೊಡುವುದಿಲ್ಲವೆಂದು ಮುಷ್ಕರಹಿಡಿದ ಐವರನ್ನು ಸೆರೆಯಲ್ಲಿಡಿಸಿದನು; ಹೀಗೆ, ನ್ಯಾಯವಾದ ವಿಚಾರಣೆಯಿಲ್ಲದೆ ತಮ್ಮನ್ನು ಕಾರಾಗೃಹದಲ್ಲಿಟ್ಟುದು ತಪ್ಪೆಂದು ಅವರು ಕಿಂಗ್ಸ್ ಬೆಂಚ್ ನ್ಯಾಯಸ್ಥಾನಕ್ಕೆ (The Court of King's Bench) ಅರ್ಜಿಹಾಕಲು ಯತ್ನ ಮಾಡಿದರು. ಆದರೆ, ನ್ಯಾಯಾಧಿಪತಿಗಳು ಪ್ರಜೆಗಳ ಹಕ್ಕು ಬಾಧ್ಯತೆಗಳಿಗೆ ಗಮನಕೊಡದೆ ದೊರೆಯ ಪಕ್ಷವನ್ನು ವಹಿಸಿದ್ದುದರಿಂದ, ಈ ಪ್ರಯತ್ನದಿಂದ ಯಾವಫಲಿತಾಂಶವೂ ಆಗಲಿಲ್ಲ. ಈ ನ್ಯೂನತೆಗಳನ್ನೆಲ್ಲಾ ಸರಿಪಡಿಸಲು ಪಾರ್ಲಿಮೆಂಟಿನವರಿಗೆ ಮಾತ್ರವೇ ಸಾಧ್ಯವೆಂದು ಪ್ರಜೆಗಳೆಲ್ಲಾ ನಿರ್ಧರಿಸಿದರು. ಈ ವೇಳೆಗೆ ಫ್ರಾನ್ಸ್ ದೇಶದೊಡನೆ ಯುದ್ಧವುಸಂಭವಿಸಿದುದರಿಂದಲೂ, ಸ್ಪೇನಿನವರೊಡನೆ ವಿರೋಧವಿದ್ದುದರಿಂದಲೂ, ಸ್ವಂತ ದೇಶದಲ್ಲಾದರೂ ತನಗೆ ಜನಾನುರಾಗವು ದೊರೆಯಲೆಂಬ ಕುತೂಹಲದಿಂದ ಛಾರಲ್ಸ್ ದೊರೆಯು ಪಾರ್ಲಿಮೆಂಟಿನವರನ್ನು ಸಭೆಸೇರಿಸಿದನು. ಆದರೇನು ? ಆತನು ಜನರ ಹಕ್ಕು ಬಾಧ್ಯತೆಗಳನ್ನು ಅಲಕ್ಷ್ಯಮಾಡಿ ಸ್ವೇಚ್ಛೆಯಿಂದ ವರ್ತಿಸುತ್ತಿದ್ದ ಕಾರಣ ಅವನನ್ನು ಕಂಡರೆ ಯಾರಿಗೂ ಆಗದಂತಾಯಿತು.

ಪಾರ್ಲಿಮೆಂಟ್ ಸಭೆಯು ಸೇರಿದೊಡನೆಯೇ " ಪಿಟಿಷನ್ ಆಫ್ ರೈಟ್" (The Petition of Right) ಎಂಬ ಅರ್ಜಿಯು ಹುಟ್ಟಿತು. ಅರ್ಜಿಯಲ್ಲಿ ಕಂಡ ವಿಷಯುಗಳನ್ನೆಲ್ಲಾ ದೊರೆಯು ಆಚರಣೆಗೆ ತರಬೇಕೆಂಬುದೇ ಪಾರ್ಲಿಮೆಂಟಿನವರ ಕೋರಿಕೆ. ಅವುಗಳಾವುವೆಂದರೆ: — (೧) ಪಾರ್ಲಿಮೆಂಟಿನವರ ಅನುಮತಿಯಿಂದ ಹುಟ್ಟಿದ ನಿಬಂಧನೆಯಿಲ್ಲದೆ ಪ್ರಜೆಗಳಿಗೆ ತೆರಿಗೆಗಳನ್ನು ಹಾಕಕೂಡದು. ಸಾಲವೆಂದಾಗಲೀ, ಪಾರಿತೋಷಿಕವೆಂದಾಗಲೀ, ಪ್ರಜೆಗಳಿಂದ ಹಣವನ್ನು ತೆಗೆದುಕೊಳ್ಳಲಾಗದು. (೨) ನ್ಯಾಯಕ್ಕೆ ವಿರೋಧವಾಗಿ ಯಾವನನ್ನೂ ಸೆರೆಯಲ್ಲಿಡಕೂಡದು. (ಈ ಎರಡು ವಿಚಾರಗಳೂ ಜಾನನು ಕೊಟ್ಟ ಮ್ಯಾಗ್ನ ಕಾರ್ಟ ಎಂಬ ಸನ್ನದಿನಲ್ಲಿದ್ದುವು. ಆದರೂ, ಛಾರಲ್ಸ್ ದೊರೆಯು ನಡೆವಳಿಕೆಯಿಂದ, ಈ ವಿಷಯುಗಳನ್ನು ಆಚರಣೆಗೆ ತರಲು ಮತ್ತೊಂದು ಸಾರಿ ವಿಧಾಯಕವಾಡಿ ನಿರ್ಬಂಧಿಸಬೇಕಾಯಿತು.) (೩) ದೊರೆಯು ಕೇಳಿದಾಗ ಪ್ರಜೆಗಳಲ್ಲಿ ಯಾರಾದರೂ ಪಾರಿತೋಷಿಕವಾಗಿ ಯಾಗಲೀ ಸಾಲವಾಗಿಯಾಗಲೀ, ಹಣವನ್ನು ಕೊಡಲು ತಿರಸ್ಕರಿಸಿದರೆ ಅವರು ಅದನ್ನು ಕೊಡುವವರೆಗೂ ಅವರ ಮನೆಗೆ ಕೆಲವರು ಸೈನಿಕರನ್ನು ಕಳುಹಿಸಿ ಅವರು ಅಲ್ಲಿರಬೇಕೆಂದು ಎಂದಿಗೂ ವಿಧಿಸಕೂಡದು. (೪) ಯುದ್ಧ ಕಾಲಗಳಲ್ಲಿ ಕಟ್ಟಳೆಗಳಿಗೆ ವಿರೋಧವಾಗಿ ನಡೆದ ಸೈನಿಕರನ್ನು ವಿಚಾರಣೆ ಮಾಡಿ ಬಹಳ ಕ್ರೂರವಾಗಿ ಶಿಕ್ಷೆಯನ್ನು ವಿಧಿಸುವುದಕ್ಕೋಸ್ಕರ ತತ್ಕಾಲಿಕವಾಗಿ ನಿಯಮಿತವಾಗಿದ್ದು ಯುದ್ಧವು ಮುಗಿದಮೇಲೆ "ರದ್ದು" ಮಾಡದೇ ಇದ್ದ ನ್ಯಾಯಸ್ಥಾನಗಳನ್ನು ತೆಗೆದುಹಾಕಬೇಕು.

ಛಾರಲ್ಸ್ ದೊರೆಯು ಮೊದಲು ಇದಕ್ಕೆ ಒಪ್ಪಲಿಲ್ಲ. ಒಡನೆಯೇ ಪ್ರತಿನಿಧಿ ಸಭೆಯುವರು ಮೊದಲಿನಂತೆ ಬಕಿಂಘಾಂ ಡ್ಯೂಕನನ್ನು ಶ್ರೀಮಂತ ಸಭೆಯುವರ ವಿಚಾರಣೆಗೆ ಗುರಿಪಡಿಸಬೇಕೆಂದು ನಿರ್ಧರಿಸಿದರು. ಸಂಗಡಲೇ, ಅದನ್ನು ತಪ್ಪಿಸುವುದಕ್ಕಾಗಿ ದೊರೆಯು ಅರ್ಜಿಯಲ್ಲಿ ಕಂಡ ವಿಷಯುಗಳನ್ನು ನಡೆಯಿಸಿಕೊಡಲು ಸಮ್ಮತಿಸಿದನು. ಪಾರ್ಲಿಮೆಂಟಿನವರು ಸುಪ್ರೀತರಾಗಿ ಅವನ ವೆಚ್ಚಕ್ಕೆ ಬೇಕಾದಷ್ಟು ಹಣವನ್ನೊದಗಿಸಿದರು. ಸಭೆಯು ಮುಕ್ತಾಯವಾಯಿತು.

ಇದುವರೆಗೂ ಪಾರ್ಲಿಮೆಂಟಿನವರ ಕಡೆಗಿದ್ದ ಸ್ಟ್ರಾಫರ್ಡಿನ ಅರ್ಲನಾದ ವೆಂಟ್‌ವರ್ತ್ (Wentworth) ಎಂಬಾತನು ಈಗ ದೊರೆಯ ಪಕ್ಷವನ್ನು ವಹಿಸಿದನು. ರಾಜ್ಯದ ಆಡಳಿತಗಳನ್ನು ಪಾರ್ಲಿಮೆಂಟಿನವರು ನಡೆಯಿಸುವುದೇ, ಇಲ್ಲವೇ, ಕೆಲವು ಮಂದಿ ಅಧಿಕಾರಿಗಳ ಸಹಾಯದಿಂದ ದೊರೆಯು ನಡೆಯಿಸು

ವುದೇ ಎಂಬ ಚರ್ಚೆಯು ಹುಟ್ಟಿತು. ಪ್ರತಿನಿಧಿ ಸಭೆಗೆ ಸೇರಿದ ಎಲಿಯಟ್ (Eliot) ಎಂಬಾತನು ಪಾರ್ಲಿಮೆಂಟಿನವರೇ ಆಡಳಿತಗಳನ್ನು ನಡೆಯಿಸತಕ್ಕು ದೆಂದೂ, ಹಾಗೆ ಮಾಡಲು ಅವರಿಗೆ ಅಧಿಕಾರವಿತ್ತೆಂದೂ ವಾದಿಸಿದನು. ವೆಂಟ್ ವರ್ತ್ನಾದರೋ, ಪಾರ್ಲಿಮೆಂಟಿನವರು ಈ ಅಧಿಕಾರವನ್ನು ವಹಿಸುವುದೆಂದಿಗೂ ಸರಿಯಾದುದಲ್ಲವೆಂದೂ, ಬಹು ಜನರು ಸೇರುವ ಪಾರ್ಲಿಮೆಂಟ್ ಸಭೆಗೆ ಅತಿ ಗುಪ್ತವಾಗಿರಬೇಕಾದ ರಾಜಕೀಯ ವಿಷಯಗಳು ತಿಳಿಯುವುದಾದರೆ ಅವುಗಳು ಬಹಿರಂಗವಾಗದೇ ಇರುವುದು ಅಸಂಭವವೆಂದೂ, ವಾದಿಸಿದನು. ಆದರೂ, ದೊರೆಯು ನಿರಂಕುಶಪ್ರವರ್ತಕನಾಗಿ ನ್ಯಾಯಾನ್ಯಾಯವಿಮರ್ಶೆಯೇ ಇಲ್ಲದೆ ಕಾರ್ಯಗಳನ್ನು ನಡೆಯಿಸಬೇಕೆಂಬುದೇನೋ ಆತನ ಸಂಕಲ್ಪವಲ್ಲ. ವೆಂಟ್‌ವರ್ತ್ನು ಸಮರ್ಥ; ಸರಿಯಾದ ಆಲೋಚನಾಶಕ್ತಿಯುಳ್ಳವನು; ವಿವೇಕಿ. ಆಗಾಗ ಸೇರುತ್ತಿದ್ದ ಪಾರ್ಲಿಮೆಂಟಿನವರು ರಾಜ್ಯಭಾರವನ್ನು ವಹಿಸುವುದಕ್ಕಿಂತಲೂ, ಸರಿಯಾದ ಅಧಿಕಾರಿಗಳ ಸಹಾಯದಿಂದ ದೊರೆಯು ಆಡಳಿತಗಳನ್ನು ನಡೆಯಿಸುವುದು ದೇಶಕ್ಕೆ ಎಷ್ಟೋ ಕ್ಷೇಮಕರವೆಂಬುದೇ ಆತನು ನಿಷ್ಕರ್ಷಿಸಿದ ತತ್ವ ಇದನ್ನು ಆಚರಣೆಗೆ ತರಬೇಕೆಂಬಉದ್ದೇಶದಿಂದ ಆತನು ಪಾರ್ಲಿಮೆಂಟಿನವರ ಪಕ್ಷವನ್ನು ಬಿಟ್ಟು ದೊರೆಯ ಕಡೆಗೆ ಹೋಗಿ ಸೇರಿ ಕೆಲಸಗಳನ್ನು ನಡೆಯಿಸಲಾರಂಭಿಸಿದನು. ಇಷ್ಟರಲ್ಲಿ, ಬಕಿಂಘಾಂ ಡ್ಯೂಕನನ್ನು ಫೆಲ್ಟನ್ನ್ (Felton) ಎಂಬವನು ಕೊಂದುಬಿಟ್ಟನು. ಆದುದರಿಂದ ವೆಂಟ್‌ವರ್ತ್ನು ಪ್ರಬಲನಾಗಲು ಅವಕಾಶವಾಯಿತು.

ಈ ಮಧ್ಯದಲ್ಲಿ, ಛಾರಲ್ಸ್ ದೊರೆಯು ತಾನು ಪಾರ್ಲಿಮೆಂಟಿನವರಿಗೆ ಕೊಟ್ಟ ವಾಗ್ದಾನಕ್ಕನುಸಾರವಾಗಿ ವರ್ತಿಸದೆ, ಅವರ ಒಪ್ಪಿಗೆಯೇ ಇಲ್ಲದೆ ತೆರಿಗೆಗಳನ್ನು ತೆಗೆದುಕೊಳ್ಳಲಾರಂಭಿಸಿದನು. ಅವನು ಹಾಗೆ ಮಾಡದೆ ಇದ್ದರೆ ಮಾರ್ಗವೇ ಇರಲಿಲ್ಲ. ಯುದ್ಧದ ವೆಚ್ಚಕ್ಕಾಗಿ ಅವನಿಗೆ ಬಹಳ ಹಣವು ಬೇಕಾಗಿತ್ತು. ಅಲ್ಲದೆ ರಾಣಿಯು ಬಹಳ ದುಂದುಗಾರಳಾಗಿದ್ದುದರಿಂದ ಅರಮನೆಯ ವೆಚ್ಚಕ್ಕೆ ಕೂಡ ಅವನು ಬಹಳ ಹಣವನ್ನು ಒದಗಿಸಬೇಕಾಗಿತ್ತು. ಆದುದರಿಂದ, ಅವನು ಕೊಟ್ಟ ಭಾಷೆಗೆ ತಪ್ಪಿ ತೆರಿಗೆಗಳನ್ನು ತೆಗೆದುಕೊಳ್ಳಬೇಕಾಯಿತು. ಆದರೆ ಪಾರ್ಲಿಮೆಂಟಿನವರು ಇದಕ್ಕೆಲ್ಲಾ ಗಮನ ಕೊಡುವವರಾಗಿರಲಿಲ್ಲ. ಪ್ರತಿನಿಧಿಸಭೆಯವರು ಬಹಳ ಕೋಪಗೊಂಡು ಅನೇಕ ಆಕ್ಷೇಪಣೆಗಳನ್ನು ಮಾಡಿದರು. ದೊರೆಯ ವೆಚ್ಚಕ್ಕೆ ಹಣವನ್ನು ಕೊಡಲಿಲ್ಲ. ಈ ಜಗಳವು ನಡೆಯುತ್ತಿರುವಾಗ ರಾಜ್ಯದ ಆಡಳಿತಗಳು ನಡೆಯುವುದು ಕೂಡ ಕಷ್ಟವಾಯಿತು. ದೊರೆಯು ಇದೆಲ್ಲಿಯ ಕೋಟಲೆ

ಯೆಂದು ಬಗೆದು ಪಾರ್ಲಿಮೆಂಟನ್ನು ಮುಕ್ತಾಯಗೊಳಿಸಲು ಯತ್ನ ಮಾಡಿದನು. ಸದಸ್ಯರು ತಮ್ಮ ಅನುಮತಿಯು ಇಲ್ಲದೆ ತೆರಿಗೆಗಳನ್ನು ವಿಧಿಸುವವನು ದ್ರೋಹಿಯೆಂದೂ ಆ ತೆರಿಗೆಗಳನ್ನು ಕೊಡುವವನು ದ್ರೋಹಿಯೆಂದೂ, ನಿಶ್ಚಯ ಮಾಡಿ ಮೇಲಕ್ಕೆದ್ದರು. ಛಾರ್ಲ್ಸ್ ದೊರೆಯು ರೋಷಪರವಶನಾಗಿ ಎಲಿಯಟ್ ಎಂಬಾತನನ್ನು ಸೆರೆಯಲ್ಲಿಡಿಸಿದನು; ಅವನು ಅಲ್ಲಿಯೇ ಮೃತನಾದನು.

ಇಲ್ಲಿಗೆ, ಛಾರಲ್ಸ್ ದೊರೆಯ ಆಳಿಕೆಯಲ್ಲಿ ಮೊದಲನೆಯ ಭಾಗವು ಮುಗಿಯಿತು; ಇನ್ನು ಮುಂದೆ, ಪಾರ್ಲಿಮೆಂಟಿನವರ ಸಂಪರ್ಕವೇ ಇಲ್ಲದೆ ನಿರಂಕುಶವಾಗಿ ಪ್ರಭುತ್ವ ಮಾಡುವುದರಲ್ಲಿ ಅವನು ಉದ್ಯುಕ್ತನಾದನು. ಇದರಿಂದ ಅವನಿಗೆ ಅನಿಷ್ಟವು ಸಂಘಟಿಸಿತು. ಪಾರ್ಲಿಮೆಂಟ್ ಸಭೆಯು ಅತಿಮುಖ್ಯವಾದುದೂ ಪ್ರಯೋಜನಕರವಾದುದೂ ಎಂದು ಜನರೆಲ್ಲರೂ ಭಾವಿಸುವಂತಾಗಿದ್ದಾಗ, ಅದನ್ನು ಮೂಲೆಗೊತ್ತರಿಸಿದುದರಿಂದ ಹೀಗಾಯಿತು. ಕಾಲವನ್ನರಿತು ಕೆಲಸವನ್ನು ನಡೆಯಿಸದೇ ಇರುವವರಿಗೆ ಇದೇ ಪಾಡು.

---

## ಹದಿನೈದನೆಯ ಪ್ರಕರಣ.

'ಸಿವಿಲ್ ವಾರ್' ಎಂಬ ಒಳಯುದ್ಧ ಮತ್ತು ಅದಕ್ಕೆ ಕಾರಣ.

ಛಾರಲ್ಸ್ ದೊರೆಯು ತನ್ನ ಆಳಿಕೆಯ ಮೊದಲಿನ ಭಾಗದಲ್ಲಿ (ಎಂದರೆ ೧೬೨೪ರಿಂದ ೧೬೨೯ರ ವರೆಗೆ) ಮೂರುಸಾರಿ ಪಾರ್ಲಿಮೆಂಟ್ ಸಭೆಯನ್ನು ಕೂಡಿಸಿದ್ದನು. ಆದರೆ, ಮುಂದೆ (೧೬೨೯ರಿಂದ ೧೬೪೦ರವರೆಗೆ) ಒಂದು ಸಾರಿಯೂ ಪಾರ್ಲಿಮೆಂಟಿನವರನ್ನು ಸಭೆಸೇರಿಸದೆ ನಿರಂಕುಶವಾಗಿ ರಾಜ್ಯವಾಳಲುಪಕ್ರಮಿಸಿದನು. ಅವನು, ವೆಂಟ್‌ವರ್ತ್ ಮುಂತಾದವರ ಸಲಹೆಗಳಿಗೆ ಅನುಸಾರವಾಗಿ ರಾಜಕೀಯವಿಚಾರಗಳನ್ನೂ, ಬಿಷಪ್ಪನಾದ ಲಾಡಿನ (Bishop Laud) ಸಲಹೆಗಳಿಗನುಸಾರವಾಗಿ ಮತಸಂಬಂಧವಾದ ವಿಚಾರವನ್ನೂ ನೆರವೇರಿಸುತ್ತಿದ್ದನು.

ಆತನಿಗಿದ್ದುದು ಹಣದತೊಂದರೆಯೇ ತೊಂದರೆ; ಈ ತೊಂದರೆಯನ್ನು ತಪ್ಪಿಸಿಕೊಳ್ಳುವುದಕ್ಕೆ ಮಾತ್ರವೇ ಅವನು ಅನ್ಯಾಯಾಚರಣೆಗೆ ಕೈಹಾಕಬೇಕಾಯಿತು. ಸಾಮಾನ್ಯವಾಗಿ ದೊರೆಗಳ ಆದಾಯವು ಮೂರು ಬಗೆಯಾಗಿತ್ತು. (೧) ಪಾರ್ಲಿಮೆಂಟಿನವರಿಂದ ಬರತಕ್ಕುದು. (೨) ದೊರೆಯ

ಸ್ವಂತ ಸ್ವತ್ತಿನಿಂದ ಬರುತ್ತಿದ್ದ ಹುಟ್ಟುವಳಿ. (೨) ಅವನ ಹಕ್ಕು ಬಾಧ್ಯತೆಗಳಿಂದ ಬರುತ್ತಿದ್ದ ಹಣ. ನ್ಯಾಯಸ್ಥಾನದ ದಂಡದ್ರವ್ಯದಿಂದಲೂ, ಅಪರಾಧಿಗಳ ಸ್ವತ್ತನ್ನು ತನ್ನ ವಶಕ್ಕೆ ಸೇರಿಸಿಕೊಳ್ಳುತ್ತಿದ್ದುದರಿಂದಲೂ, ಮತಾಧಿಕಾರಿಗಳಿಗೆ ಅಧಿಕಾರವಾದ ವರುಷದ ಆದಾಯುವನ್ನು ತೆಗೆದುಕೊಳ್ಳುತಿದ್ದುದರಿಂದಲೂ, ಫ್ಯೂಡಲಿಸಮ್ ಪದ್ಧತಿಯ ಮೇರೆ ಸಲ್ಲುತ್ತಿದ್ದ ತೆರಿಗೆಗಳಿಂದಲೂ (Feudal dues) ದೊರೆಗೆ ಹಣವು ಬರುತ್ತಿತ್ತು. ಛಾರಲ್ಸ್ ದೊರೆಗೆ ಪಾರ್ಲಿಮೆಂಟಿನವರಿಂದ ಹಣವು ಬಾರದಂತಾಯಿತು. ಉಳಿದ ರೀತಿಗಳಲ್ಲಿ ಬರುತ್ತಿದ್ದ ಆದಾಯುವು ಸಾಲದು. ಆದುದರಿಂದ, ಯುದ್ಧದ ದೆಸೆಯಿಂದ ಬಹಳ ಹಣವು ವೆಚ್ಚವಾಗುವುದೆಂದರಿತು ಫ್ರಾನ್ಸ್ ಮತ್ತು ಸ್ಪೇನ್ ದೇಶಗಳೊಡನೆ ಸಮಾಧಾನ ಮಾಡಿಕೊಂಡನು. ಆದರೇನು? ತನ್ನ ಆಪ್ತರಿಗೆ ಆಗಾಗ ಔತಣಗಳನ್ನೇರ್ಪಡಿಸುವುದು, ಬಹಳ ಬೆಲೆಬಾಳುವ ಪಾರಿತೋಷಗಳನ್ನು ಕೊಡುವುದು, ಇವೇ ಮುಂತಾದ ವಿಧಗಳಲ್ಲಿ ಬಹಳ ದುಂದುಮಾಡುತ್ತಿದ್ದ ರಾಣಿಯ ದೆಸೆಯಿಂದ ದೊರೆಗೆ ದುಡ್ಡಿನ ಆತಂಕವು ಬಲವಾಯಿತು. ವೆಂಟ್‌ವರ್ತ್ನು ಇದನ್ನರಿತು ದೊರೆಗೆ ಸಹಾಯ ಮಾಡಲುದ್ಯುಕ್ತನಾದನು; ರಾಜನಿಗೆ ಬರತಕ್ಕ ಆದಾಯುವನ್ನು ಸರಿಯಾಗಿ ಸಲ್ಲಿಸದೆ ಮೋಸಪಡಿಸುತ್ತಿದ್ದ ಅಧಿಕಾರಿಗಳ ವರ್ತನೆಯನ್ನು ತಿದ್ದುವುದರ ಮೂಲಕ ತನ್ನ ಡಿಸ್ಟ್ರಿಕ್ಟಿನಿಂದ ದೊರೆಗೆ ಸಲ್ಲುತ್ತಿದ್ದ ಆದಾಯುವನ್ನು ಒಂದಕ್ಕೆ ಐದರಷ್ಟು ಹೆಚ್ಚಿಸಿದನು. ಆದರೂ, ರಾಣಿಯ ದುಂದುಗಾರಿಕೆಯ ಪ್ರಭಾವದಿಂದ ಈ ಹಣವೂ ಸಾಲದಂತಾಯಿತು. ಛಾರ್ಲ್ಸ್ ದೊರೆಯು ತನ್ನ ಸ್ಥಿತಿಯನ್ನು ಅವಳಿಗೆ ವಿವರಿಸಿ ಅವಳು ಮಿತವ್ಯಯ ಮಾಡಬೇಕೆಂದು ಕೇಳಿಕೊಂಡನು; ಪ್ರಯೋಜನವಾಗಲಿಲ್ಲ. ಬಳಿಕ, ವೆಂಟ್‌ವರ್ತ್ನು ಆಕೆಗೆ ಬುದ್ಧಿ ಹೇಳುವುದಕ್ಕೆ ಹೋದನು. ಇದರಿಂದ ಆತನು ಅವಳ ಆಗ್ರಹಕ್ಕೆ ಪಾತ್ರನಾದುದೊಂದೇ ಫಲವಾಯಿತು. ಇಷ್ಟರಲ್ಲಿ, ವೆಂಟ್‌ವರ್ತ್ನು ದೊರೆಯ ಪ್ರತಿನಿಧಿಯಾಗಿ ಐರ್ಲೆಂಡಿಗೆ ಹೋದನು; ಸಮರ್ಥನಾದವನು ಸರಿಯಾಗಿ ಆಡಳಿತಗಳನ್ನು ನಡೆಯಿಸುವುದಾದರೆ ದೊರೆಗೆ ಎಷ್ಟು ಅನುಕೂಲವಾಗುವುದೆಂಬ ತತ್ವವನ್ನು ಪ್ರದರ್ಶಿಸಬೇಕೆಂದು ನಿರ್ಧರಮಾಡಿಕೊಂಡನು. ಅತ್ತ, ವೆಂಟ್‌ವರ್ತ್ನು ಐರ್ಲೆಂಡಿಗೆ ಹೊರಟುಹೋದ ಬಳಿಕ, ದೊರೆಯ ಕಷ್ಟಗಳು ಮತ್ತಷ್ಟು ಹೆಚ್ಚಾದುವು; ಅವನ ತಂದೆಯ ಕಾಲಕ್ಕಿಂತಲೂ ಒಂದಕ್ಕೆ ಮೂರರಂತೆ ಏರಿಹೋಗಿದ್ದ ಅರಮನೆಯ ವೆಚ್ಚದಿಂದ ಅರಮನೆಯ ಆಡಳಿತಗಳು ನಡೆಯುವುದು ಬಹಳ ಕಷ್ಟವಾಯಿತು. ಆದುದರಿಂದ, ದೊರೆಯು ಯತ್ನವಿಲ್ಲದೆ ಟನೇಜ್ ಮತ್ತು ಪೌಂಡೇಜ್ ತೆರಿಗೆಗಳನ್ನು ಪಾರ್ಲಿಮೆಂಟಿನವರ ಅನುಮತಿಯಿಲ್ಲದೆ ತೆಗೆದುಕೊಳ್ಳಲಾರಂಭಿಸಿದನು. ಇದರಿಂದ ಜನರಿಗೆ ಬಹಳ ಬೇಸಗವಾಯಿತು. ತನ್ನ ಮೇಲೆ ತಿರುಗಿ

ಬಿದ್ದವರನ್ನು ವಿಚಾರಣೆಗೆ ಗುರಿಮಾಡಿ ಶಿಕ್ಷೆಮಾಡಿಸುವುದಕ್ಕಾಗಿ, ಛಾರಲ್ಸ್ ದೊರೆಯು ನ್ಯಾಯಸ್ಥಾನಗಳಲ್ಲಿ ತನ್ನ ಕಡೆಯವರನ್ನು ನ್ಯಾಯಾಧಿಪತಿಗಳಾಗಿ ನೇಮಿಸಿದನು. ೧೬೨೮ರಲ್ಲಿ ರಾಬರ್ಟ್ ಛೇಂಬರ್ಸ್ (Robert Chambers) ಎಂಬ ಲಂಡನ್ ನಗರದ ವರ್ತಕನು ಅನ್ಯಾಯವಾದ ತೆರಿಗೆಗಳನ್ನು ಕೊಡುವುದಿಲ್ಲವೆಂದು ಹಟಹಿಡಿದನು. ಅವನನ್ನು ಎಕ್ಸ್‌ಚೆಕರ್ ನ್ಯಾಯಸ್ಥಾನದಲ್ಲಿ ವಿಚಾರಣೆಗೆ ಗುರಿಪಡಿಸಿದರು. ಆದರೂ ಹೆದರದೆ, ವರ್ತಕನು ದಿಟ್ಟತನದಿಂದ ಛಾರಲ್ಸ್‌ದೊರೆಯು ವರ್ತಕರಿಗೆ ಕೊಡುತ್ತಿದ್ದ ಕಿರುಕುಳಕ್ಕೆ ಗೊತ್ತು ಗುರಿಯೇ ಇಲ್ಲವೆಂದು ಹೇಳಿದನು. ಇದಕ್ಕಾಗಿ ಅವನಿಗೆ ಎರಡು ಸಾವಿರ ಪೌಂಡು ದ್ರವ್ಯವನ್ನು ದಂಡ ವಿಧಿಸಿದರು. ಅವನು ಕ್ಷಮಾಪಣೆಯನ್ನೂ ಕೇಳಿಕೊಳ್ಳಲಿಲ್ಲ; ದಂಡವನ್ನೂ ತೆರಲಿಲ್ಲ. ಇದರಿಂದ, ಅವನನ್ನು ಕಾರಾಗೃಹದಲ್ಲಿಟ್ಟರು. ಮುಂದೆ ಪ್ರಸಿದ್ಧವಾದ ಲಾಂಗ್ ಪಾರ್ಲಿಮೆಂಟಿನಿಂದ ಈತನಿಗೆ ೧೬೪೦ರಲ್ಲಿ ಬಿಡುಗಡೆಯಾಯಿತು. ಛಾರಲ್ಸ್ ದೊರೆಯು ಹಿಂದೆ ಎಲಿಸಬೆತ್ ಮತ್ತು ಜೇಮ್ಸ್ ಎಂಬವರು ಪದಾರ್ಥಗಳ ಮಾರಾಟದ ಸರ್ವಸ್ವಾಮ್ಯವನ್ನು ಒಬ್ಬೊಬ್ಬರಿಗೇ ಮಾರುತ್ತಿದ್ದರೆಂದೂ, ಅದು ಸರಿಯಾಗಿಲ್ಲದಿದ್ದರೂ, ಈ ಸರ್ವಸ್ವಾಮ್ಯಾಧಿಕಾರಗಳನ್ನು ಅನೇಕರು ಸೇರುವ ಸಂಘಗಳಿಗೆ ಮಾರುವುದರಿಂದ ಯಾವ ಕುಂದುಕವೂ ಇರಲಿಲ್ಲವೆಂದೂ, ಮುಖ್ಯನ್ಯಾಯವಾದಿಯಾದ ನಾಯ್ (Noy, Charles Attorney) ಎಂಬಾತನಿಂದ ಹೇಳಿಸುತ್ತಾ ಹಾಗೆ ಮಾಡುವುದಕ್ಕೆ ಉಪಕ್ರಮಿಸಿದನು. ಇದರಿಂದ ಅವನ ಆದಾಯವು ಹೆಚ್ಚಿತು. ಆದರೆ ವರ್ತಕರೆಲ್ಲಾ ದೊರೆಗೆ ವಿರೋಧಿಗಳಾದರು. ಈ ಸಂದರ್ಭದಲ್ಲಿ ದೊರೆಯು ಬ್ಯಾರನ್ ಮುಂತಾದ ದೊಡ್ಡಮನುಷ್ಯರಾದರೂ ತನ್ನ ಕಡೆಗೆ ಇರುವಂತೆ ಮಾಡಿಕೊಂಡಿದ್ದರೆ ಎಷ್ಟೋ ಚೆನ್ನಾಗಿತ್ತು. ಅವನು ಹಾಗೆ ಮಾಡಲಿಲ್ಲ. ಹಿಂದಿನ ರಾಜರು ದೊರೆಗೆ ಸೇರಿದ್ದ ಫೋಕ್ ಲ್ಯಾಂಡ್ (Folk Land) ಎಂಬ ಭೂಪ್ರದೇಶಗಳಲ್ಲಿ ಬಹುಭಾಗವನ್ನು ಅರ್ಲ್, ಬ್ಯಾರನ್, ಮುಂತಾದವರಿಗೆ ಪಾರಿತೋಷಿಕವಾಗಿ ಕೊಟ್ಟಿದ್ದರು. ಆದರೂ ಅನೇಕ ಸಂದರ್ಭಗಳಲ್ಲಿ ಸರಿಯಾಗಿ ಸನ್ನದುಗಳು ಹುಟ್ಟಿರಲಿಲ್ಲ. ಹೀಗೆ ಸನ್ನದುಗಳಿಲ್ಲದೆ ಭೂಮಿಯನ್ನು ಅನುಭವಿಸುತ್ತಿದ್ದವರೆಲ್ಲರೂ ರಾಜನಸ್ವತ್ತನ್ನು ಆಕ್ರಮಿಸಿಕೊಂಡಂತಾಯಿತೆಂದೂ, ಅವರು ಅದನ್ನು ಬಿಟ್ಟುಕೊಡಬೇಕೆಂದೂ, ಛಾರಲ್ಸ್ ದೊರೆಯು ಅಪ್ಪಣೆ ಮಾಡಿದನು. ಇದರಿಂದ ಅವರೆಲ್ಲರೂ ದೊರೆಗೆ ವಿರೋಧಿಗಳಾದರು.

ಹೀಗೆ ಛಾರಲ್ಸ್ ದೊರೆಯು ವರ್ತಕರಿಗೂ ದೊಡ್ಡ ಮನುಷ್ಯರಿಗೂ ತೊಂದರೆಯನ್ನು ಕೊಟ್ಟುದು ಮಾತ್ರವೇ ಅಲ್ಲ; ಉಳಿದ ಪ್ರಜೆಗಳಿಗೂ ಅವನು ಕಷ್ಟವನ್ನು ಕೊಟ್ಟನು. ಎಲಿಸಬೆತ್ ರಾಣಿಯು ಕಾಲದಲ್ಲಿ ಲಂಡನ್ ನಗರ

ದಲ್ಲಿ ಹೊಸದಾಗಿ ಮನೆಗಳನ್ನು ಇನ್ನು ಮುಂದೆ ಕಟ್ಟಕೂಡದೆಂದು ಒಂದು ಪ್ರಸಿದ್ಧಪ್ರತಿಕೆಯು ಹುಟ್ಟಿತ್ತು. ಆದರೂ ಈ ನಿರ್ಬಂಧವನ್ನು ಆಚರಣೆಗೆ ತಂದಿರಲಿಲ್ಲ. ಛಾರಲ್ಸ್ ದೊರೆಯು ಅದನ್ನು ಆಚರಣೆಗೆ ತಂದನು. ಆಜ್ಞೆಯನ್ನು ಉಲ್ಲಂಘಿಸಿದವನೊಬ್ಬನಿಗೆ ಒಂದು ಸಾವಿರ ಪೌಂಡುಗಳ ದಂಡವು ವಿಧಿತವಾಯಿತು. ಆತನು ಇನ್ನೂ ನಾಲ್ವತ್ತು ಮನೆಗಳನ್ನು ಕಟ್ಟಿದ್ದನು; ಅವುಗಳನ್ನು ಕಟ್ಟಿದುದಕ್ಕೂ ಹೀಗೆಯೇ ದಂಡವನ್ನು ತೆರಬೇಕಾಗುವುದೆಂಬ ಭಯದಿಂದ ಅವನೇ ಅವುಗಳನ್ನು ನೆಲಸಮಮಾಡಬೇಕಾಯಿತು. "ಇನ್"ಗಳೆಂಬ (Inns) ಭೋಜನಶಾಲೆಯ ಯಜಮಾನರೆಲ್ಲರೂ "ವೈನ್" ಎಂಬ ಪಾನೀಯದ ಮೇಲೆ ಹೊಸ ತೆರಿಗೆಯೊಂದನ್ನು ಕೊಡಬೇಕೆಂದೂ, ಹಾಗೆ ತೆರಿಗೆಯನ್ನು ಕೊಡಲು ಒಪ್ಪದಿದ್ದ ಭೋಜನಶಾಲೆಗಳಲ್ಲಿ ತೆರಿಗೆಯನ್ನು ಕೊಟ್ಟಲ್ಲದೆ ಅಡಿಗೆಯನ್ನೇ ಮಾಡಕೂಡದೆಂದೂ ಅಪ್ಪಣೆಯಾಯಿತು. ಅಂತು, ಒಂದಲ್ಲ ಒಂದುವಿಧದಲ್ಲಿ ತೆರಿಗೆಗಳನ್ನು ಹಾಕಿ ಛಾರಲ್ಸ್ ದೊರೆಯು ತನ್ನ ಆದಾಯವನ್ನು ಹೆಚ್ಚಿಸಿಕೊಂಡನು. ಆದರೂ ಅವನ ವೆಚ್ಚಕ್ಕೆ ಹಣವುಸಾಕಾಗದೆ ಸಾಲವಾಯಿತು; ಅಧಿಕಾರಿಗಳ ಸಂಬಳವು ಕಾಲಕಾಲಕ್ಕೆ ಸಲ್ಲದೆ ಬಾಕಿ ಉಳಿದು ಹೋಯಿತು. ನೌಕಾಬಲವು ತಪ್ಪಿ ತೀರಪ್ರದೇಶಗಳಲ್ಲಿ ಸಮುದ್ರದ ಕಳ್ಳರ ಹಾವಳಿಗೆ ಆರಂಭವಾಯಿತು. ಇದನ್ನು ತಪ್ಪಿಸುವುದಕ್ಕಾಗಿ ಹಣವು ಬೇಕಾಗಿದ್ದುದರಿಂದ ಮೊದಲು ಮೊದಲು ತೀರಪ್ರದೇಶಗಳಲ್ಲಿದ್ದ ಪಟ್ಟಣದವರು ನೌಕಾಬಲವನ್ನು ಕ್ರಮಪಡಿಸುವುದಕ್ಕಾಗಿ " ಷಿಪ್‌ಮನಿ " (Ship Money) ಎಂಬ ತೆರಿಗೆಯನ್ನು ಕೊಡಬೇಕೆಂದು ಅಪ್ಪಣೆಮಾಡಿ ಕೊನೆಗೆ ಪ್ರಜೆಗಳೆಲ್ಲರೂ ಈ ತೆರಿಗೆಯನ್ನು ಕೊಡಬೇಕೆಂದು ವಿಧಿಸಿದನು. ಒಂದುವಿಧದಲ್ಲಿ ನೋಡಿದರೆ, ಸಮುದ್ರದ ಕಳ್ಳರ ಹಾವಳಿಯಿಂದ ಪ್ರಜೆಗಳೆಲ್ಲರಿಗೂ ತೊಂದರೆಯಾಗಿದ್ದುದರಿಂದ, ಇದನ್ನು ತಪ್ಪಿಸಲು ಪ್ರಜೆಗಳೆಲ್ಲರೂ ತೆರಿಗೆಯನ್ನು ಕೊಡಬೇಕಾಗಿದ್ದುದು ನ್ಯಾಯವೆಂದು ಹೇಳಿದರೂ ಹೇಳಬಹುದು. ಆದರೆ ಪ್ರಜೆಗಳು ಹಾಗೆ ತಿಳಿದುಕೊಳ್ಳಲಿಲ್ಲ. ದೊರೆಯು ಈ ನೆವದಿಂದ ತನ್ನ ವೆಚ್ಚಕ್ಕೆ ಹಣವನ್ನು ಪಡೆದುಕೊಳ್ಳುವನೆಂಬ ಭಾವನೆಯಿಂದ ಅವರು ಪ್ರತಿಭಟಿಸಿ ನಿಂತರು. ಹ್ಯಾಂಪ್ಡನ್ (Hampden) ಎಂಬಾತನೊಬ್ಬನು, ಷಿಪ್ ಮನಿ, ಎಂಬ ಹೊಸ ತೆರಿಗೆಯನ್ನು ಕೊಡಲು ಒಪ್ಪಲಿಲ್ಲ. ಅವನನ್ನು ನ್ಯಾಯಸ್ಥಾನದಲ್ಲಿ ವಿಚಾರಣೆಗೆ ಗುರಿಮಾಡಿದರು. ನ್ಯಾಯಾಧಿಪತಿಗಳು ದೊರೆಯ ಪಕ್ಷದವರಾದುದರಿಂದ, ದೊರೆಗೆ ಅನುಕೂಲವಾಗಿ ತೀರ್ಪುಕೊಟ್ಟರು. ಆದರೂ, ಇತರರಿಂದ ಷಿಪ್‌ಮನಿ (Ship Money) ಯನ್ನು ಬರಮಾಡಿಕೊಳ್ಳುವುದು ಸುಲಭವಾಗಲಿಲ್ಲ. ಪ್ರಜೆಗಳಂತೂ, ಎಂದಿಗೆ ಪಾರ್ಲಿಮೆಂಟಿನವರು ಸಭೆ ಸೇರಿ ಈ ನ್ಯೂನತೆಗಳನ್ನೆಲ್ಲಾ ಸರಿಪಡಿಸುವರೋ ಎಂದು ಕಾತರಿಸತೊಡಗಿದರು. ಮೊಕದ್ದಮೆಯಲ್ಲಿ ತಮ್ಮ

ಕಡೆಗೆ ತೀರ್ಮಾನವು ದೊರಕಿದುದಕ್ಕಾಗಿ ದೊರೆಯೂ ಅವನ ಪಕ್ಷದವರೂ ಹಿಗ್ಗಿದರು. ಆದರೇನು? ಪಾರ್ಲಿಮೆಂಟ್ಸಭೆಯು ಸೇರಿದಾಗಲಲ್ಲವೇ ವಿಷಯವು ತೀರ್ಮಾನವಾಗುವುದು?

ಛಾರಲ್ಸ್ ದೊರೆಯು ಇಂಗ್ಲಿಷ್ ಚರ್ಚಿನ "ಪ್ರೇಯರ್ ಬುಕ್" (Prayer Book) ಎಂಬ ಪುಸ್ತಕದಲ್ಲಿ ಕಂಡುಬಂದ ನಿಯಮಗಳೇ ಸ್ಕಾಟ್ಲೆಂಡಿನಲ್ಲಿಯೂ ಆಚರಣೆಯಲ್ಲಿರತಕ್ಕುದೆಂದು ಅಪ್ಪಣೆಮಾಡಿದನು. ಅಲ್ಲಿಯವರಿಗೆ ಇದು ಸರಿಬೀಳದೆ ಯುದ್ಧಕ್ಕೆ ಆರಂಭವಾಯಿತು. ದೊರೆಯ ಬಳಿಯಲ್ಲಿದ್ದ ಹಣವು ಸಾಲದೆಹೋಗಿ ಪಾರ್ಲಿಮೆಂಟಿನವರನ್ನು ಸಭೆ ಸೇರಿಸಲೇಬೇಕಾಗಿಬಂತು. ಸಭೆಯು ಸೇರಿದೊಡನೆಯೇ ಸದಸ್ಯರೆಲ್ಲರೂ ಸ್ಕಾಟ್ಲೆಂಡಿನ ದೊಂಬಿಯನ್ನಡಗಿಸುವುದಕ್ಕಿಂತಲೂ, ತಮ್ಮ ಸ್ವಂತ ಹಕ್ಕು ಬಾಧ್ಯತೆಗಳನ್ನು ಕಾಪಾಡಿಕೊಳ್ಳುವುದು ಮುಖ್ಯವೆಂದು ಭಾವಿಸಿ, 'ಷಿಪ್ ಮನಿ' ಮುಂತಾದ ತೆರಿಗೆಗಳನ್ನು ವಿಧಿಸಿದುದು ನ್ಯಾಯವಲ್ಲವೆಂದು ದೊರೆಯನ್ನು ಆಕ್ಷೇಪಿಸಿದರು. ದೊರೆಯು ಕೋಪಗೊಂಡು, ಸದಸ್ಯರು ತನಗೆ ಹಣವನ್ನು ಕೊಡುವುದಕ್ಕೆ ಮೊದಲೇ ಸಭೆಯನ್ನು ಮುಕ್ತಾಯಗೊಳಿಸಿದನು. ಈ ಸಾರಿ ಸಭೆಯು ಬಹು ಸ್ವಲ್ಪಕಾಲ ಮಾತ್ರವೇ ಸೇರಿದ್ದುದರಿಂದ ಇದಕ್ಕೆ "ಷಾರ್ಟ್ ಪಾರ್ಲಿಮೆಂಟ್" (Short Parliament) ಎಂದು ಹೆಸರು ಬಂತು. ಅತ್ತ, ಸ್ಕಾಟ್ಲೆಂಡಿನವರ ಮೇಲಿನ ಯುದ್ಧದಲ್ಲಿ ಇಂಗ್ಲಿಷ್ ಸೇನೆಯು ಸಂಪೂರ್ಣವಾಗಿ ಸೋತುಹೋಯಿತು; ಬೊಕ್ಕಸವು ಬರಿದಾಯಿತು. ಮುಂದೆ ಉಪಾಯಾಂತರವಿಲ್ಲದಂತಾಗಿ ೧೬೪೦ರಲ್ಲಿ ಛಾರಲ್ಸ್ ದೊರೆಯು ಪಾರ್ಲಿಮೆಂಟಿನವರನ್ನು ಸಭೆಸೇರಿಸಿದನು. ಇದೇ ಪ್ರಸಿದ್ಧವಾದ "ಲಾಂಗ್ ಪಾರ್ಲಿಮೆಂಟ್" ಎಂಬುದು.

ಈ ಸಭೆಯು ಸೇರುವವರೆಗೂ ನಡೆದ ವಿದ್ಯಮಾನಗಳನ್ನು ಪರಿಶೀಲಿಸುವುದಾದರೆ ನಾಲ್ಕು ಸಂಗತಿಗಳು ಗೊತ್ತಾಗುತ್ತವೆ. ಯಾವುವೆಂದರೆ :-(೧) ತೆರಿಗೆಗಳಿಂದಲೂ ಹಣವು ಬಂದಲ್ಲದೆ ದೊರೆಯ ವೆಚ್ಚವು ಸಾಗದು. (೨) ಸ್ಟಾರ್ ಛೇಂಬರ್ ಮತ್ತು ಹೈ ಕಮಿಷನ್ ನ್ಯಾಯಸ್ಥಾನಗಳಿಂದ ಪ್ರಜೆಗಳ ಹಕ್ಕು ಬಾಧ್ಯತೆಗಳು ಅವರ ವಶಕ್ಕೆ ಬರಲು ಅವಕಾಶವಿರಲಿಲ್ಲ. (೩) ನ್ಯಾಯಾಧಿಪತಿಗಳನ್ನು ನಿಯಮಿಸುವುದಕ್ಕೂ, ಅವರನ್ನು ಕೆಲಸದಿಂದ ತೆಗೆದುಹಾಕುವುದಕ್ಕೂ ದೊರೆಗೆ ಅಧಿಕಾರವು ಇರುವವರೆಗೂ ನಿಷ್ಪಕ್ಷಪಾತವಾಗಿ ನ್ಯಾಯವು ದೊರೆಯಲು ಅವಕಾಶವಿರಲಿಲ್ಲ. (೪) ಈ ನ್ಯೂನತೆಗಳೆಲ್ಲಾ ಪರಿಹಾರವಾಗಲು ಪಾರ್ಲಿಮೆಂಟ್ ಸಭೆಯು ಹಲವುಬಾರಿ ಸೇರುತ್ತಲೇ ಇರಬೇಕು.

ಮೇಲೆ ಹೇಳಿದಂತೆ ೧೬೪೦ರಲ್ಲಿ ಸಭೆಸೇರಿದ ಲಾಂಗ್ ಪಾರ್ಲಿಮೆಂಟಿನವರು ಇದನ್ನೆಲ್ಲಾ ಪರ್ಯಾಲೋಚಿಸಿ ಕೆಲಸ ಮಾಡುವುದಕ್ಕಾರಂಭಿಸಿದರು. ಎಲ್ಲಕ್ಕಿಂತಲೂ ಮೊದಲು, ಐರ್ಲೆಂಡಿನಲ್ಲಿ ದೊರೆಯ ಪ್ರತಿನಿಧಿಯಾಗಿದ್ದ ವೆಂಟ್ವರ್ತನನ್ನು ವಿಚಾರಣೆಗೆ ಗುರಿಮಾಡಿ, ಅವನಿಗೆ ಮರಣದಂಡನೆಯನ್ನು ವಿಧಿಸಿದರು. ಅವನು ನಿರಂಕುಶ ಪ್ರವರ್ತಕನಾಗಿದ್ದುದೇನೋ ನಿಜ; ಆದರೂ ಅವನ ಆಧಿಪತ್ಯದಿಂದ ಐರ್ಲೆಂಡಿಗೆ ಎಷ್ಟೋ ಒಳ್ಳೆಯದಾಯಿತು. ಆದರೇನು? ಇಂಗ್ಲಿಷ್ ಪ್ರಜೆಗಳು ನಿರಂಕುಶಪ್ರವರ್ತನೆಯಿಂದ ಎಷ್ಟೇ ಒಳ್ಳೆಯದಾಗುವಂತಿದ್ದರೂ, ಅದಕ್ಕೆ ಬೇರೆ ಸಮ್ಮತಿಸುವವರಾಗಿರಲಿಲ್ಲ. ಆದುದರಿಂದ, ದೊರೆಯ ಪ್ರಸನ್ನತೆಗೆ ಮರುಳಾಗಿ ಅವನ ಸೇವೆಯನ್ನು ಮಾಡಿದ ಅಷ್ಟೊಂದು ದೊಡ್ಡ ಅಧಿಕಾರಿಯೂ ಕೂಡ ನಿರಂಕುಶ ಪ್ರವರ್ತನೆಗೆ ಕೈಚಾಚಿದುದರಿಂದ ತನ್ನ ತಲೆಯನ್ನು ಒಪ್ಪಿಸಬೇಕಾಯಿತು.

ಪಾರ್ಲಿಮೆಂಟ್ ಸಭೆಯು ಅನೇಕ ಸಾರಿ ಕೂಡದೆ, ದೊರೆಗೆ ಅವಶ್ಯಬಿದ್ದಾಗ ಮಾತ್ರವೇ ಆಗಾಗ ಸೇರುತ್ತಿದ್ದುದರಿಂದ, ಲಾಡ್ ವೆಂಟ್ವರ್ತ್ ಮುಂತಾದವರ ಪರಾಕ್ರಮವು ಸಾಗಿತೆಂದು, ಪಾರ್ಲಿಮೆಂಟಿನವರಿಗೆ ಚೆನ್ನಾಗಿ ಮಂದಟ್ಟಾಯಿತು. ಕೂಡಲೇ ಅವರು "ಟ್ರೈಯೆನಿಯಲ್ ಆಕ್ಟ್" (Triennial Act) ಎಂಬ ನಿಬಂಧನೆಯನ್ನು ಏರ್ಪಡಿಸಿದರು. ಇದರಿಂದ, ಪಾರ್ಲಿಮೆಂಟಿನವರು ತಮ್ಮ ಕೆಲಸಗಳನ್ನು ಮುಗಿಸಿದ ಬಳಿಕ, ಅವರ ಸಮ್ಮತಿಯನ್ನು ಪಡೆದು ಸಭೆಯನ್ನು ಮುಕ್ತಾಯಗೊಳಿಸಬೇಕೆಂದೂ, ಅನಂತರ ಮೂರು ವರುಷಗಳೊಳಗಾಗಿ ಪಾರ್ಲಿಮೆಂಟನ್ನು ಮತ್ತೆ ಸಭೆ ಸೇರಿಸಬೇಕೆಂದೂ ಗೊತ್ತಾಯಿತು. ಆದರೂ, ಇದಕ್ಕನುಸಾರವಾಗಿ ಸಭೆಯು ಸೇರಿದೊಡನೆಯೇ ಬೇಗನೆ ಅದನ್ನು ಮುಕ್ತಾಯಗೊಳಿಸದಂತೆ ಸಭೆಯು ಸೇರಿದ ಐವತ್ತು ದಿವಸಗಳಿಗೆ ಮುಂಚೆ ಸಭೆಯನ್ನು ಮುಗಿಸಕೂಡದೆಂದು ಗೊತ್ತಾಯಿತು.

ಲಾಂಗ್ ಪಾರ್ಲಿಮೆಂಟಿನವರು, ಸ್ಟಾರ್ ಚೇಂಬರ್ ಮತ್ತು ಹೈ ಕಮಿಷನ್ ನ್ಯಾಯಸ್ಥಾನಗಳನ್ನು ತೆಗೆದುಹಾಕಿದರು ; ಇದರಿಂದ ಪ್ರಜೆಗಳಿಗೆ ಉಂಟಾಗುತ್ತಿದ್ದ ಕಿರುಕುಳವು ತಪ್ಪಿತು. ನ್ಯಾಯಾಧಿಪತಿಗಳು ದೊರೆಯ ಇಚ್ಛೆಯನ್ನು ಅನುಸರಿಸಿ ನಡೆಯತಕ್ಕುದಲ್ಲವೆಂದೂ, ಅವರ ಸದ್ವರ್ತನೆಯಿಂದ ಮಾತ್ರವೇ ಅವರನ್ನು ಅಧಿಕಾರದಲ್ಲಿಟ್ಟಿರತಕ್ಕುದೆಂದೂ, ನಿಬಂಧನೆಗಳಾದುವು. ಇದರಿಂದ, ತನ್ನ ಇಷ್ಟಕ್ಕೆ ವಿರೋಧವಾಗಿ ನಡೆದ ನ್ಯಾಯಾಧಿಪತಿಗಳನ್ನು ದೊರೆಯು ಕೆಲಸದಿಂದ ತೆಗೆದು ಹಾಕುವುದು ನಿಂತುಹೋಯಿತು; ಅವರು ಸದಾಚಾರವನ್ನು ಕೈಕೊಳ್ಳಲು ಅವಕಾಶವು ದೊರೆಯಿತು.

‘ಷಿಪ್‌ಮನಿ’ ಮುಂತಾದ ನ್ಯಾಯಸಮ್ಮತವಲ್ಲದ ತೆರಿಗೆಗಳು ಇರಕೂಡದೆಂದು ವಿಧಾಯಕವಾಯಿತು. ಲಾಡನು ಮತಾಧಿಕಾರಿಗಳಿಗೆ ರಾಜಕೀಯ ವಿಷಯಗಳಲ್ಲಿ ಮೊದಲಿದ್ದಂತೆ ಪ್ರಾಮುಖ್ಯತೆಯನ್ನುಂಟುಮಾಡಿಕೊಡಲು ಪ್ರಯತ್ನಿಸಿದುದಕ್ಕೆ ತಕ್ಕ ಪ್ರತೀಕಾರವನ್ನು ಮಾಡುವುದಕ್ಕಾಗಿ ಮತಾಧಿಕಾರಿಗಳು ಶ್ರೀಮಂತಸಭೆಯಲ್ಲಿ ಸದಸ್ಯರಾಗಿರಕೂಡದೆಂದು ನಿಬಂಧನೆಯಾಯಿತು. ಈವೇಳೆಗೆ ಐರ್ಲೆಂಡಿನಲ್ಲಿ ದಂಗೆಯಾಯಿತು. ಅದನ್ನು ಅಡಗಿಸಲು ಸೈನ್ಯವನ್ನು ಕಳುಹಿಸಬೇಕಾಯಿತು. ಮೊದಲೇ ನಿರಂಕುಶಪ್ರವರ್ತಕನಾಗಿದ್ದ ದೊರೆಗೆ ಸೈನ್ಯವೂ ಸಿಕ್ಕಿದರೆ ಹೇಳಬೇಕಾದುದೇ ಇಲ್ಲವೆಂದು ಭಾವಿಸಿ, ಪಾರ್ಲಿಮೆಂಟಿನವರು ಸೈನ್ಯದ ಮೇಲಿನ ಆಧಿಪತ್ಯವನ್ನು ತಮ್ಮ ವಶದಲ್ಲಿಯೇ ಇಟ್ಟುಕೊಳ್ಳಬೇಕೆಂಬ ಉದ್ದೇಶದಿಂದ “ಮಿಲಿಷಿಯ ಬಿಲ್” ಎಂಬ ನಿಬಂಧನೆಯನ್ನು ಮಾಡಿದರು. ಇದನ್ನು ಕೇಳಿ ದೊರೆಗೆ ಬಹಳ ಕೋಪಬಂತು; ಇದಕ್ಕೆಲ್ಲಾ ಮುಖ್ಯಕಾರಣಭೂತರಾಗಿದ್ದ ಪ್ರತಿನಿಧಿಸಭೆಯ ಐದುಮಂದಿಗಳನ್ನು ಸೆರೆಹಿಡಿಯುವುದಕ್ಕಾಗಿ ಆಯುಧಪಾಣಿಗಳಾದ ಸೈನಿಕರೊಡನೆ ಸಭೆಗೆ ಹೋದನು. ಆ ಐದುಮಂದಿಯೂ ಸಭೆಯನ್ನು ಬಿಟ್ಟು ಹೊರಟುಹೋಗಿದ್ದರು. ಛಾರಲ್ಸ್ ದೊರೆಯು ಹೀಗೆ ಮಾಡಿದುದರಿಂದ ಪ್ರಜೆಗಳಿಗೆ ಅವನಲ್ಲಿದ್ದ ವಿಶ್ವಾಸವು ತಪ್ಪಿಹೋಗಿ, “ಸಿವಿಲ್ ವಾರ್” (Civil War) ಎಂಬ ಒಳಯುದ್ಧವು ನಡೆಯಲು ಕಾರಣವಾಯಿತು. “ಲಾರ್ಡ್ ಲೆಫ್ಟಿನೆಂಟು” ಗಳೆಂಬ (Lords-Lieutenants) ದೊಡ್ಡ ಅಧಿಕಾರಿಗಳನ್ನೂ, ಅವರ ಮೂಲಕ ಸೈನ್ಯದ ಅಧಿಕಾರಿಗಳನ್ನೂ, ದುರ್ಗಗಳ ಆಧಿಪತ್ಯವನ್ನು ವಹಿಸುವವರನ್ನೂ ಆರಿಸುವ ಅಧಿಕಾರವು ತಮಗೇ ಇರಬೇಕೆಂದು ಪಾರ್ಲಿಮೆಂಟಿನವರು ಅಪೇಕ್ಷಿಸಿದರು. ಛಾರಲ್ಸ್ ದೊರೆಯು ಇದಕ್ಕೆ ಒಪ್ಪಲಿಲ್ಲ. ಆದುದರಿಂದ ಯುದ್ಧಕ್ಕೆ ಆರಂಭವಾಯಿತು. ದೊರೆಗೆ ಜಯವಾಗಲಿಲ್ಲ. ಕಡೆಗೆ ದೊರೆಯು ಸೆರೆಸಿಕ್ಕಿ ಮರಣದಂಡನೆಗೆ ಗುರಿಯಾದನು.

ಬಳಿಕ ಪ್ರೊಟೆಕ್ಟೊರೇಟ್ (Protectorate) ಎಂಬ ಪ್ರಜಾಪ್ರಭುತ್ವವು ಏರ್ಪಟ್ಟು ಆಲಿವರ್ ಕ್ರಾಮ್ವೆಲ್ (Oliver Cromwell) ಎಂಬಾತನು ಅದಕ್ಕೆ ಮುಖ್ಯಸ್ಥನಾಗಿ ನಿಯಮಿತನಾದನು. ಪ್ರತಿನಿಧಿ ಸಭೆಯವರು ಇನ್ನು ಮುಂದೆ ಇಂಗ್ಲೆಂಡಿನಲ್ಲಿ ದೊರೆಯೇ ಇರಬೇಕಾದುದಿಲ್ಲವೆಂದೂ ಶ್ರೀಮಂತ ಸಭೆಯಿಂದ ಯಾವ ಪ್ರಯೋಜನವೂ ಇಲ್ಲವೆಂದೂ, ಆದಕಾರಣ ಆ ಸಭೆಯನ್ನು ತೆಗೆದುಹಾಕತಕ್ಕುದೆಂದೂ, ನಿಬಂಧನೆಯನ್ನು ಮಾಡಿದರು. ಇದರ ಪ್ರಕಾರ ದೊರೆತನವೂ, ಶ್ರೀಮಂತ ಸಭೆಯೂ ಇಲ್ಲದೆಹೋಗಲಾಗಿ, ಪ್ರತಿನಿಧಿ

ಸಭೆಯವರೇ ರಾಜ್ಯಭಾರವನ್ನು ಸಂಪೂರ್ಣವಾಗಿ ವಹಿಸಿದರು. ಅಲ್ಲದೆ ತಮ್ಮ ಹೇಳಿಕೆಗೆ ಅನುಸಾರವಾಗಿ ಕಾರ್ಯಗಳನ್ನು ನಡೆಯಿಸಲು "ಸ್ಟೇಟ್ ಕೌನ್ಸಿಲ್" ಎಂಬ ಆಡಳಿತದ (Executive) ಸಭೆಯನ್ನು ಸ್ಥಾಪಿಸಲಾಯಿತು.

ಹೀಗೆ ನಾಲ್ಕು ವರುಷ ಕಾಲ ಪ್ರಭುತ್ವವು ನಡೆಯಿತು. ಐರ್ಲೆಂಡು ಮತ್ತು ಸ್ಕಾಟ್ಲೆಂಡು ದೇಶಗಳು ಇಂಗ್ಲೆಂಡಿನ ವಶವಾದುವು. ಹಾಲೆಂಡಿನ ಮೇಲೆ ಯುದ್ಧವು ನಡೆಯಿತು. ಬಳಿಕ ಕ್ರಾಮ್ವೆಲ್ಲನು ಪ್ರಜೆಗಳ ಹಿತಕ್ಕೆ ಗಮನಕೊಟ್ಟು ಪ್ರತಿನಿಧಿಸಭೆಯವರು ಪ್ರಭುತ್ವಮಾಡುವುದಿಲ್ಲವೆಂದು ಹೇಳಿ ಸೈನ್ಯದವರ ಸಹಾಯದಿಂದ ಆ ಸಭೆಯಲ್ಲಿದ್ದ ಸದಸ್ಯರನ್ನೆಲ್ಲಾ ಬಲಾತ್ಕಾರವಾಗಿ ಮನೆಗೆ ಕಳುಹಿಸಿ ಒಂಬತ್ತು ಮಂದಿ ಸೈನ್ಯಾಧಿಕಾರಿಗಳೂ, ನಾಲ್ಕು ಮಂದಿ ಇತರರೂ, ಇರುವ ಹೊಸ ಸಭೆಯನ್ನು ಸ್ಥಾಪಿಸಿದನು. ಈ ಹೊಸ ಸಭೆಯವರು, ಮಂತ್ರಿಗಳು ಕಳುಹಿಸಿದ ಪಟ್ಟಿಯ ಪ್ರಕಾರ ಸದಸ್ಯರನ್ನು ಆರಿಸಿ "ಬೇರ್ಬೋನ್ಸ್ ಪಾರ್ಲಿಮೆಂಟ್" (Barebones Parliament) ಎಂಬ ಹೆಸರಿನ ಸಭೆಯನ್ನು ಸ್ಥಾಪಿಸಿದರು. ಈ ಸಭೆಯವರು ಯುಕ್ತಾಯುಕ್ತವಿಚಾರವೇ ಅಲ್ಲದೆ ಅನೇಕ ಬದಲಾವಣೆಗಳನ್ನು ಮಾಡಿದರು. ಅವರ ಉದ್ದೇಶವೇನೋ ಒಳ್ಳೆಯದು. ಆದರೂ ಕಾರ್ಯಗಳು ಮಾತ್ರ ಸಮರ್ಪಕವಾಗಿ ನಡೆಯಲಿಲ್ಲ. ಆದುದರಿಂದ ಈ ಸಭೆಯವರಿಗೆ ಆಡಳಿತಗಳನ್ನು ನಡೆಯಿಸುವುದರಲ್ಲಿ ಬೇಸರವಾಗಿ ತಮ್ಮ ಅಧಿಕಾರವನ್ನು ಕ್ರಾಮ್ವೆಲ್ಲನೇ ವಹಿಸಿದರೆ ಸಾಕೆಂದು ಬಯಸುವಂತಾಯಿತು. ಕ್ರಾಮ್ವೆಲ್ಲನು "ಲಾರ್ಡ್ ಪ್ರೊಟೆಕ್ಟರ್" (Protector) ಎಂಬ ಹೆಸರಿನಿಂದ ಆಡಳಿತಗಳನ್ನು ನಡೆಯಿಸುತ್ತಾ ಮುಖ್ಯಸ್ಥನಾಗಿರತಕ್ಕುದೆಂದು ನಿಷ್ಕರ್ಷೆ ಮಾಡಿದರು. ಅಲ್ಲದೆ ಆತನು ದೇಶದ ಒಡೆಯನಾಗಿರತಕ್ಕುದು. ಆತನೂ ಸ್ಟೇಟ್ ಕೌನ್ಸಿಲ್ ಸಭೆಯವರೂ, ಪಾರ್ಲಿಮೆಂಟ್ ಸಭೆಯವರೂ, ಸೇರಿ ಆಡಳಿತಗಳನ್ನು ನಡೆಸತಕ್ಕುದು. ಯುದ್ಧವನ್ನು ನಡೆಯಿಸುವುದಕ್ಕೂ, ಸಮಾಧಾನವನ್ನು ಮಾಡಿಕೊಳ್ಳುವುದಕ್ಕೂ, ಅವನು ಸ್ಟೇಟ್ ಕೌನ್ಸಿಲ್ ಸಭೆಯವರ ಅನುಮತಿಯಿಂದ ಮಾತ್ರವೇ ಕಾರ್ಯಗಳನ್ನು ನೆರವೇರಿಸಬೇಕು. ಈ ಸಭೆಯಲ್ಲಿ ಸದಸ್ಯರ ಕೆಲಸವು ತೆರವಾದಾಗ ಪಾರ್ಲಿಮೆಂಟಿನವರು ಸೂಚಿಸಿದ ಆರು ಮಂದಿಗಳಲ್ಲಿ ಯಾರನ್ನಾದರೂ ಆರಿಸಬೇಕು. ತೆರಿಗೆಗಳನ್ನು ಹಾಕುವುದರಲ್ಲಿಯೂ, ನ್ಯಾಯನಿಬಂಧನೆಗಳನ್ನು ಮಾಡುವುದರಲ್ಲಿಯೂ ಪಾರ್ಲಿಮೆಂಟಿನವರಿಗೇ ಅಧಿಕಾರವಿರತಕ್ಕುದು. ಕಡೆಯ ಪಕ್ಷ ಮೂರು ವರುಷಗಳಿಗೊಂದು ಬಾರಿಯಾದರೂ ಪಾರ್ಲಿಮೆಂಟ್ ಸಭೆಯು ಸೇರತಕ್ಕುದು. ಸಭೆಸೇರಿ ಐದು ತಿಂಗಳುಗಳಾದಲ್ಲದೆ ಸಭೆಯು

ಮುಕ್ತಾಯವಾಗಕೂಡದು. ಪಾರ್ಲಿಮೆಂಟಿನವರು ವಿಧಿಸಿದ ನಿಬಂಧನೆಗಳನ್ನು ಆಚರಣೆಗೆ ತರುವುದನ್ನು ಕ್ರಾಂವೆಲನು ಬೇಕಾದರೆ ಇಪ್ಪತ್ತು ದಿನಗಳ ಕಾಲ ನಿಧಾನಿಸಬಹುದು ಎಂಬ ಈ ನಿಬಂಧನೆಗಳಾದುವು. ತೆರಿಗೆಗಳ ಮತ್ತು ನ್ಯಾಯನಿಬಂಧನೆಗಳ ವಿಚಾರವನ್ನು ಪಾರ್ಲಿಮೆಂಟಿನವರ ಕೈಯಲ್ಲಿಟ್ಟು ಕೊಂಡರು. ಅವರ ಕೋರಿಕೆಯನ್ನೂ, ಪ್ರೊಟೆಕ್ಟರನಾದ ಕ್ರಾಂವೆಲನ ಅಭಿಮತವನ್ನೂ ಅನುಸರಿಸಿ ಆಡಳಿತಗಳನ್ನು ನಡೆಸುವಷ್ಟು ಮಟ್ಟಿಗೆ ಬಲಶಾಲಿಯಾದ "ಎಕ್ಸೆಕ್ಯುಟಿವ್ ಕೌನ್ಸಿಲೆಂಬ" ಆಡಳಿತದ ಸಭೆಯು ಇರಬೇಕೆಂಬುದೇ ಈ ಪ್ರಜಾಪ್ರಭುತ್ವದ ಉದ್ದೇಶ. ಪಾರ್ಲಿಮೆಂಟ್ ಸಭೆಗೆ ಸ್ಕಾಟ್ಲೆಂಡಿನಿಂದಲೂ ಮತ್ತು ಐರ್ಲೆಂಡಿನಿಂದಲೂ ಪ್ರತಿನಿಧಿಗಳು ಬರುವಂತಾಗಿ, ಅದು ಪರಿಷ್ಕೃತವಾಯಿತು. ಆದರೇನು? ಪ್ರಜಾಪ್ರಭುತ್ವದ ಉದ್ದೇಶವೇನೋ ನೆರವೇರಲಿಲ್ಲ.

ಕ್ರಾಂವೆಲನು ಎಂದಿಗೂ ನಿರಂಕುಶ ಪ್ರವರ್ತನೆಯನ್ನು ಬಯಸಿದವನಲ್ಲ. ಪಾರ್ಲಿಮೆಂಟಿನ ಸಹಾಯವನ್ನು ಪಡೆದು ಸರಿಯಾಗಿ ಸಾಂಕುಶವಾದ ರೀತಿಯಲ್ಲಿ ಆಡಳಿತಗಳನ್ನು ನಡೆಯಿಸಬೇಕೆಂದು ಅವನು ಎಷ್ಟೋ ಪ್ರಯತ್ನಪಟ್ಟನು. ಆದರೂ ಅವನ ಶ್ರಮವು ಸಾರ್ಥಕವಾಗಲಿಲ್ಲ. ಯಜಮಾನನೊಬ್ಬನು ನಿಂತು ಸಾಂಕುಶಪ್ರಭುತ್ವವನ್ನು ನಡೆಯಿಸುವುದಾದರೆ ಕ್ರಾಂವೆಲನಿಗೆ ಯಾಜಮಾನ್ಯವು ಬರುವುದಕ್ಕಿಂತಲೂ ಸ್ಟ್ಯುಯರ್ಟ್ ಸಂತತಿಯವರಿಗೇ ಆದನ್ನು ವಹಿಸುವುದು ಉತ್ತಮವೆಂದು ದೊರೆತನದ ವಿಷಯದಲ್ಲಿ ಪಕ್ಷಪಾತಿಗಳಾಗಿದ್ದವರಿಗೆ ತೋರಿದುದೂ, ಪ್ರಜಾಪ್ರಭುತ್ವವನ್ನು ಬಯಸುತ್ತಿದ್ದವರಿಗೆ ಶುದ್ಧವಾದ ಪ್ರಜಾಪ್ರಭುತ್ವ (Republican form of Government) ದಲ್ಲಿ ಮಾತ್ರವೇ ಆಸಕ್ತಿಯು ಇದ್ದುದೂ, ಕ್ರಾಂವೆಲನ ಪ್ರಯತ್ನವು ವಿಫಲವಾದುದಕ್ಕೆ ಕಾರಣಗಳಾಗಿರುತ್ತವೆ.

"ಹಂಬಲ್ ಪಿಟಿಷನ್ ಅಂಡ್ ಅಡ್ವೈಸ್" (Humble Petition and Advice) ಎಂಬ ಅಭಿಧಾನದ ಪತ್ರದಿಂದ ಕ್ರಾಂವೆಲನು ರಾಜನೆಂಬ ಹೆಸರನ್ನು ಕೈಕೊಂಡು ತನ್ನ ಕಾಲಾನಂತರ ಯಾರು ಪಟ್ಟಕ್ಕೆ ಬರತಕ್ಕುದೆಂಬುದನ್ನು ನಿರ್ಧರಿಸಿ, ಪ್ರಭುತ್ವ ಮಾಡತಕ್ಕುದೆಂದು ಪಾರ್ಲಿಮೆಂಟಿನವರು ಆತನನ್ನು ಪ್ರಾರ್ಥಿಸಿದರು. ಆ ಪತ್ರದಲ್ಲಿ ಕಂಡುಬಂದ ಉಳಿದ ವಿಚಾರಗಳಾವುವೆಂದರೆ: ಪಾರ್ಲಿಮೆಂಟ್ ಸಭೆಯು ಮೊದಲಿನಂತೆ ಎರಡು ವಿಭಾಗವಾಗಿ ಕನಿಷ್ಠ ಪಕ್ಷ ಮೂರು ವರುಷಕ್ಕೊಂದು ಬಾರಿಯಾದರೂ ಸೇರತಕ್ಕುದು. ಮುಖ್ಯ

ವಾದ ಅಧಿಕಾರಿಗಳನ್ನೂ, ಕೌನ್ಸಿಲ್ ಮೆಂಬರುಗಳನ್ನೂ, ಪಾರ್ಲಿಮೆಂಟಿನವರ ಅನುಮತಿಯ ಮೇಲೆ ದೊರೆಯು ಕೆಲಸಕ್ಕೆ ಆರಿಸಬೇಕು. ಅವರನ್ನು ಕೆಲಸದಿಂದ ತೆಗೆದುಹಾಕುವುದಕ್ಕೂ ಪಾರ್ಲಿಮೆಂಟಿನವರ ಒಪ್ಪಿಗೆಯಾಗಬೇಕು. ತೆರಿಗೆಯ ವಿಚಾರವೂ, ನ್ಯಾಯ ನಿಬಂಧನೆಗಳ ವಿಷಯವೂ ಪಾರ್ಲಿಮೆಂಟಿನವರ ಅಧೀನದಲ್ಲಿರತಕ್ಕದು. ಹಿಂದೆ ಇದ್ದಂತೆ, ಪಾರ್ಲಿಮೆಂಟಿನವರು ವಿಧಿಸಿದ ನಿಬಂಧನೆಗಳನ್ನು ಇಪ್ಪತ್ತು ದಿವಸಗಳ ವರೆಗೆ ಆಚರಣೆಗೆ ತಾರದಂತೆ ನಿಲ್ಲಿಸುವ ಅಧಿಕಾರವು ಇನ್ನು ಮುಂದೆ ಇರತಕ್ಕದಲ್ಲ. ಕ್ರಾಂವೆಲನು ಪ್ರೊಟೆಕ್ಟರ್ ಎಂಬ ಹೆಸರನ್ನು ಬಿಟ್ಟು ದೊರೆಯೆಂಬ ಹೆಸರನ್ನಿಟ್ಟುಕೊಳ್ಳಕೂಡದು.

ಶ್ರೀಮಂತಸಭೆಯವರು ತಮಗೆ ಪ್ರತಿನಿಧಿಸಭೆಯವರಿಗಿಂತಲೂ ಹೆಚ್ಚು ಪ್ರಾಮುಖ್ಯತೆಯು ಇರಬೇಕೆಂದು ಅಪೇಕ್ಷಿಸಿದರು. ಆದರೆ ಈ ಸಭೆಯವರು ಕೆಲವರು; ಪ್ರತಿನಿಧಿ ಸಭೆಯವರಾದರೋ ಅನೇಕರು. ಆದುದರಿಂದ ಈ ಇಷ್ಟಾರ್ಥವು ನೆರವೇರಲಿಲ್ಲ. ದೊರೆಯಾದರೂ ಇದ್ದಿದ್ದರೆ ಶ್ರೀಮಂತರಿಗೆ ಆತನ ಬೆಂಬಲವಿರುತ್ತಿತ್ತು. ಇದಕ್ಕೆ ಪ್ರತಿಯಾಗಿ ಅವರು ದೊರೆಯ ಪಕ್ಷವನ್ನು ವಹಿಸುತ್ತಿದ್ದರು. ಯಾವಾಗ ಕ್ರಾಂವೆಲನು ದೊರೆಯೆಂಬ ಹೆಸರನ್ನು ತಿರಸ್ಕರಿಸಿದನೋ, ಆಗ ಈ ಬೆಂಬಲಕ್ಕೆ ಕಲ್ಲುಬಿತ್ತು. ಆದುದರಿಂದ ೧೬೫೮ರಲ್ಲಿ ಶ್ರೀಮಂತಸಭೆಯವರಿಗೂ, ಪ್ರತಿನಿಧಿಸಭೆಯವರಿಗೂ ಮನಸ್ತಾಪವು ಬಂತು. ಉಪಾಯಾಂತರವು ತೋರದೆ ಅವರನ್ನು ಸಮಾಧಾನಗೊಳಿಸುವುದು ಕಷ್ಟವಾಗಿ ಕ್ರಾಂವೆಲನು ಸಭೆಯನ್ನು ಮುಕ್ತಾಯಗೊಳಿಸಿದನು. ಅದೇ ವರುಷವೇ ಅವನೂ ಮೃತನಾದನು. ಜನರೆಲ್ಲರಿಗೂ, ದೊರೆಯು ಇದ್ದಲ್ಲದೇ ಏಳಿಗೆಯುಂಟಾಗಲಾರದೆಂಬ ಅಭಿಪ್ರಾಯವು ಹುಟ್ಟಿತು.

ಕ್ರಾಂವೆಲನ ಮರಣಾನಂತರ ಅವನ ಮಗನಾದ ರಿಚರ್ಡ್ ಕ್ರಾಂವೆಲನು (Richard Cromwell) ತಂದೆಯ ಅಧಿಕಾರಕ್ಕೆ ಬಂದನು. ಅವನು ಶಕ್ತನೇನೋ ಹೌದು. ಆದರೂ, ಇಂಗ್ಲೆಂಡಿನಲ್ಲಿ ಮತ್ತೊಮ್ಮೆ ದೊರೆತನವು ನೆಲೆಗೊಂಡು ಸ್ಟ್ಯೂಯರ್ಟ್ ಸಂತತಿಯವರು ಸಿಂಹಾಸನವನ್ನೇರಬೇಕೆಂಬ ಸಂಕಲ್ಪವು ಜನರೆಲ್ಲರಿಗೂ ಉಂಟಾದುದರಿಂದ ಅವನ ಸಾಮರ್ಥ್ಯವು ಕೆಲಸಕ್ಕೆ ಬಾರದಂತಾಯಿತು. ಆಲಿವರ್ ಕ್ರಾಂವೆಲನ ಕಾಲದಲ್ಲಿ ಸೈನ್ಯದಲ್ಲಿ ಒಕ್ಕಟ್ಟು ಇದ್ದು, ಸೈನ್ಯದವರು ಅವನ ಪಕ್ಷವನ್ನು ವಹಿಸಿದ್ದರು. ಈಗಲಾದರೋ ಸೈನ್ಯದಲ್ಲಿ ಭಿನ್ನಾಭಿಪ್ರಾಯವು ಹುಟ್ಟಿ, ರಿಚರ್ಡ್ ಕ್ರಾಂವೆಲನಿಗೆ ಸೈನ್ಯದಲ್ಲಿ ಸಹಾಯವು ತಪ್ಪಿತು. ಸೈನ್ಯದಲ್ಲಿ ಬಲಶಾಲಿಯಾದ ಪಂಗಡಕ್ಕೆ ಸೇರಿದವ

ರೆಲ್ಲರೂ, ಮೊದಲಿನ ಲಾಂಗ್ ಪಾರ್ಲಿಮೆಂಟನ್ನು ಮತ್ತೊಮ್ಮೆ ಸಭೆಸೇರಿಸಿ, ಕ್ರಾಂವೆಲನು ಮನೆಗೆ ಕಳುಹಿಸಿದ್ದ ಸದಸ್ಯರನ್ನೆಲ್ಲಾ ಮತ್ತೆ ಬರಮಾಡಿದರು. ಈ ಸಭೆಯುವರು ಸಭೆಯನ್ನು ತಮ್ಮಿಷ್ಟಕ್ಕೆ ತಾವೇ ಮುಕ್ತಾಯಗೊಳಿಸಿಕೊಂಡ ಮೇಲೆ 'ಕನ್‌ವೆನ್ಷನ್ ಪಾರ್ಲಿಮೆಂಟ್' * (Convention Parliament) ಸಭೆಯು ಸೇರಿ ಮೊದಲನೆಯ ಛಾರಲ್ಸ್ ದೊರೆಯ ಮಗನಾದ ಎರಡನೆಯ ಛಾರಲ್ಸನು ಪಟ್ಟಕ್ಕೆ ಬರಬೇಕೆಂದು ವ್ಯವಸ್ಥೆ ಮಾಡಿಕೊಳ್ಳಲು, ಜನರೆಲ್ಲರೂ ಆನಂದದಲ್ಲಿ ಮುಳುಗಿದರು.

---

## ಹದಿನಾರನೆಯ ಪ್ರಕರಣ.

### ಪಾರ್ಲಿಮೆಂಟ್ ಸಭೆಯೂ ಮತ್ತು ಎರಡನೆಯ ಛಾರಲ್ಸ್ ದೊರೆಯೂ.

ಎರಡನೆಯ ಛಾರಲ್ಸ್ ದೊರೆಯು ನಿರಂಕುಶಪ್ರವರ್ತಕನಾಗಲು ಲೇಶವೂ ಅವಕಾಶವಿರಲಿಲ್ಲ. ತೆರಿಗೆಗಳ ಮತ್ತು ನ್ಯಾಯ ನಿಬಂಧನೆಗಳ ವಿಚಾರವು ಪಾರ್ಲಿಮೆಂಟನವರ ಕೈಯಲ್ಲಿದ್ದುದರಿಂದ ದೊರೆಯು ವೆಚ್ಚಕ್ಕೆ ಕೂಡ ಅವರಿಂದಲೇ ಹಣವು ಬರಬೇಕಾಗಿತ್ತು. ಆತನು ಪಾರ್ಲಿಮೆಂಟನವರ ಇಚ್ಛೆಗನುಸಾರವಾಗಿ ವರ್ತಿಸಿದಲ್ಲದೆ ಅವನಿಗೆ ಹಣವು ದೊರೆಯುವಂತಿರಲಿಲ್ಲ.

ಪಾರ್ಲಿಮೆಂಟನವರು ದೊರೆಯ ವೆಚ್ಚಕ್ಕಾಗಿ ವರುಷಕ್ಕೆ ಹನ್ನೆರಡು ಲಕ್ಷ ಪೌಂಡುಗಳು ಸಲ್ಲತಕ್ಕುದೆಂದು ಗೊತ್ತುಮಾಡಿದರು. ಫ್ಯೂಡಲಿಸಮ್ ಪದ್ಧತಿಗನುಸಾರವಾಗಿ ಆತನಿಗೆ ಬರುತ್ತಿದ್ದ ತೆರಿಗೆಗಳನ್ನೆಲ್ಲಾ ತೆಗೆದುಹಾಕಿದರು. ಟನೇಜ್ ಮತ್ತು ಪೌಂಡೇಜ್ ತೆರಿಗೆಗಳು ದೊರೆಯು ಬದುಕಿರುವಷ್ಟುಕಾಲವೂ ಆತನಿಗೆ ಬರತಕ್ಕುದೆಂದು ಗೊತ್ತಾಯಿತು.

ಸೈನ್ಯದ ವಿಚಾರದಲ್ಲಿ ನಡೆದ ಏರ್ಪಾಡು: ಯೂರೋಪು ಖಂಡದ ಇತರ ದೇಶಗಳಲ್ಲಿದ್ದಂತೆ ದೇಶದ ಸ್ವಾಸ್ಥ್ಯಕ್ಕಾಗಿ 'ಸ್ಟ್ಯಾಂಡಿಂಗ್ ಆರ್ಮಿ' (Standing Army) ಎಂಬ ಸೈನ್ಯವನ್ನು ಏರ್ಪಡಿಸುವುದು ಅವಶ್ಯವೆಂದು ದೊರೆಯು ಅಭಿಪ್ರಾಯಪಟ್ಟನು. ಆದರೆ, ಅದೇ ಸೈನ್ಯದ ಸಹಾಯದಿಂದ ಆತನು ತಮ್ಮನ್ನು ನಿಗ್ರಹಿಸಿದರೆ ಮಾಡತಕ್ಕುದೇನೆಂದು ಪಾರ್ಲಿಮೆಂಟನವರು ಯೋಚಿಸಿದರು. ಮೊದಲನೆಯ ಛಾರಲ್ಸ್ (Charles I) ದೊರೆಯ ಕಾಲದಲ್ಲಿ

* ದೊರೆಯು ಸಭೆ ಸೇರಿಸದೆ ಇದ್ದುದರಿಂದ ಇದಕ್ಕೆ ಕನ್‌ವೆನ್ಷನ್ ಪಾರ್ಲಿಮೆಂಟ್ ಎಂಬ ಹೆಸರುಬಂತು.

ಸೂಚಿತವಾಗಿದ್ದ "ಮಿಲಿಷಿಯ ಬಿಲ್" ಎಂಬುದು ಇನ್ನೂ ಕಾನೂನಾಗಿ ಪರಿಣಮಿಸಿರಲಿಲ್ಲ. ಆದುದರಿಂದ ಸೈನ್ಯದ ಮೇಲೆ ಪಾರ್ಲಿಮೆಂಟಿನವರಿಗೆ ಯಾವ ಅಧಿಕಾರವೂ ಇರಲಿಲ್ಲ. ಆದಕಾರಣ, ಅವರು 'ಸ್ಟ್ಯಾಂಡಿಂಗ್ ಆರ್ಮಿ' ಎಂಬದೊಡ್ಡ ಸೈನ್ಯವನ್ನಿಡಲು ಒಪ್ಪಲಿಲ್ಲ. ಕೊನೆಗೆ, 'ಲೈಫ್ ಗಾರ್ಡ್ಸ್' (Life Guards) ಎಂಬ ಅಭಿಧಾನದಿಂದ ರಾಜಭಕ್ತಿಯುಳ್ಳ ಐದು ಸಾವಿರಮಂದಿ ಸೈನಿಕರನ್ನು ನಿಯಮಿಸಿದರು. ದೊರೆಯಾದರೋ ಸೈನಿಕರ ಸಂಖ್ಯೆಯನ್ನು ಹೆಚ್ಚಿಸಲು ತವಕಪಡುತ್ತಿದ್ದನು; ಪ್ರತಿನಿಧಿ ಸಭೆಯವರಾದರೋ ಸೈನಿಕರ ಸಂಖ್ಯೆಯನ್ನು ಕಡಿಮೆ ಮಾಡಲು ಕುತೂಹಲಪಡುತ್ತಿದ್ದರು.

ಕನವೆನ್ಷನ್ ಪಾರ್ಲಿಮೆಂಟಿನವರು ನಡೆಯಿಸಿದ ಈ ಬದಲಾವಣೆಗಳನ್ನೆಲ್ಲಾ ೧೬೬೧ ರಲ್ಲಿ ದೊರೆಯು ಸಭೆ ಸೇರಿಸಿದ ಪಾರ್ಲಿಮೆಂಟಿನವರು ಸ್ಥಿರಪಡಿಸಿದರು; ಅಲ್ಲದೆ ಹೊಸದಾಗಿ ಕೆಲವು ನಿಬಂಧನೆಗಳನ್ನೂ ಮಾಡಿದರು. ಅವುಗಳು ಯಾವುವೆಂದರೆ :- ದೊರೆಯ ಸಮ್ಮತಿಯಿಲ್ಲದೆ ಪಾರ್ಲಿಮೆಂಟಿನವರೇ ನ್ಯಾಯ ನಿಬಂಧನೆಗಳನ್ನು ವಿಧಿಸಲಾಗದು. ಸೈನ್ಯದ ವಿಚಾರವು ಸಂಪೂರ್ಣವಾಗಿ ದೊರೆಯ ಕೈಯಲ್ಲಿಯೇ ಇರತಕ್ಕುದು. ೧೬೬೪ ರಲ್ಲಿ ಸಭೆಸೇರಿದ ಪಾರ್ಲಿಮೆಂಟ್ ಸಭೆಯವರು ಒಂದನೆಯ ಛಾರಲ್ಸ್ ದೊರೆಯ ಕಾಲದ 'ಟ್ರೈಯೆನಿಯಲ್ ಆಕ್ಟ್' ಎಂಬ ನಿಬಂಧನೆಯಲ್ಲಿ ಕಂಡುಬಂದ ವಿಷಯಗಳಲ್ಲಿ ಪಾರ್ಲಿಮೆಂಟ್ ಸಭೆಯು ಮೂರು ವರುಷಕ್ಕೊಂದು ಬಾರಿ ನೆರೆಯಬೇಕೆಂಬುದು ಒಂದು ಹೊರತು, ಉಳಿದುವುಗಳನ್ನೆಲ್ಲಾ ರದ್ದು ಮಾಡಿದರು. ಈ ಮಧ್ಯೆ 'ಕಾರ್ಪೊರೇಷನ್ ಆಕ್ಟ್' ಎಂಬ ನಿಬಂಧನೆಯಿಂದ 'ಪ್ರೆಸಬಿಟೇರಿಯನ್' (Presbyterian) ಮತಸ್ಥರ ಪ್ರಾಬಲ್ಯವು ಅಡಗಿಹೋಯಿತು.

ಮೊದಮೊದಲು ಪಾರ್ಲಿಮೆಂಟ್ ಸಭೆಯು ಛಾರಲ್ಸ್ ದೊರೆಗೆ ಅನುಕೂಲವಾಗಿ ವರ್ತಿಸಿದರೂ ಹೀಗೆ ಹೆಚ್ಚು ಕಾಲ ಸಾಗದೇ ಹೋಯಿತು. ಸ್ವಾತಂತ್ರ್ಯಪ್ರಿಯರಾದ ಇಂಗ್ಲಿಷರು ದೊರೆಯು ಹೇಳಿದುದಕ್ಕೆಲ್ಲಾ ಸಮ್ಮತಿಸದೇ ಇದ್ದುದೇ ಇದಕ್ಕೆ ಮುಖ್ಯಕಾರಣ. ಆದುದರಿಂದ ದೊರೆಯೇ ತಮ್ಮ ಅಭಿಮತವನ್ನನುಸರಿಸಿ ನಡೆಯುವಂತೆ ಮಾಡಲು ಪ್ರತಿನಿಧಿಸಭೆಯವರು ಯತ್ನಿಸಿದರು. ಇದಕ್ಕೆ ತಕ್ಕಂತೆಯೇ, ಎರಡನೆಯ ಛಾರಲ್ಸ್ ದೊರೆಯೂ ಬಹಳ ದುಂದುಗಾರನಾಗಿದ್ದುದರಿಂದ, ಅವನು ಪಾರ್ಲಿಮೆಂಟಿನವರ ಸಹಾಯದಿಂದಲೇ ಹಣವನ್ನು ಪಡೆದುಕೊಳ್ಳಬೇಕಾಗಿತ್ತು. ನಿರಂಕುಶಪ್ರವರ್ತನದಿಂದ ತಮ್ಮ ತಂದೆಗೆ ಎಂತಹ ವಿಪತ್ತು ಸಂಭವಿಸಿತ್ತೆಂಬುದು ಅವನಿಗೆ ಚೆನ್ನಾಗಿ ಜ್ಞಾಪಕವಿತ್ತು. ಆದುದರಿಂದ ಆತನಿಗೆ ಪಾರ್ಲಿಮೆಂಟಿನವರ ಅನುಮತಿಯಿಲ್ಲದೆ

ಪ್ರಜೆಗಳಿಂದ ಬಂದು ಕುರುಡುಕವಡೆಯನ್ನು ತೆಗೆದುಕೊಳ್ಳುವುದಕ್ಕೂ ಧೈರ್ಯವಿರಲಿಲ್ಲ. ಆದರೂ ಆತನು ಬಹಳ ಬುದ್ಧಿಶಾಲಿಯೂ ರಾಜ್ಯತಂತ್ರ ವಿಶಾರದನೂ ಆಗಿದ್ದುದರಿಂದ ಪಾರ್ಲಿಮೆಂಟಿನವರ ಇಷ್ಟಕ್ಕೆ ವಿರೋಧವಿಲ್ಲದೆ ತನ್ನ ಕಾರ್ಯವನ್ನು ಮಾಡಿಕೊಳ್ಳುವುದು ಲಾಭಕರವೆಂದೆಣಿಸಿ ಹಾಗೆ ಮಾಡಿದನು. ಆದುದರಿಂದ, ಸ್ಟ್ಯುಯರ್ಟ್ ಸಂತತಿಯ ದೊರೆಗಳಲ್ಲಿ ಈತನೇ ಉಳಿದ ಎಲ್ಲರಿಗಿಂತಲೂ ಹೆಚ್ಚಾಗಿ ಜನರ ಪ್ರೀತಿ ವಿಶ್ವಾಸಗಳಿಗೆ ಪಾತ್ರನಾಗಿದ್ದನು.

ಈತನ ಕಾಲಕ್ಕೆ ಮೊದಲು ದೊರೆಯ ವೆಚ್ಚಕ್ಕೆ ಇಂತಹ ತೆರಿಗೆಗಳಿಂದ ಮಾತ್ರವೇ ಹಣವು ಬರತಕ್ಕುದೆಂದು ಗೊತ್ತುಮಾಡಿದ್ದರು; ದೊರೆಗೆ ಆಕಸ್ಮಿಕವಾಗಿ ಬಂದೊದಗುತ್ತಿದ್ದ ವೆಚ್ಚಗಳಿಗೆ ಹಣವನ್ನು ಕೊಡದೆ ಪಾರ್ಲಿಮೆಂಟಿನವರು ಸುಮ್ಮನಾಗಿ ಬಿಡುತ್ತಿದ್ದುದರಿಂದ ದೊರೆಯ ಆದಾಯ ವೆಚ್ಚದ ಮೇಲೆ ಅವರಿಗೆ ಸಮರ್ಪಕವಾದ ಅಧಿಕಾರವಿರಲಿಲ್ಲ. ಅದೂ ಅಲ್ಲದೆ ದೊರೆಗೂ ತೊಂದರೆಯಾಗುತ್ತಿತ್ತು. ಎರಡನೆಯ ಛಾರಲ್ಸ್ ದೊರೆಯ ಕಾಲದಲ್ಲಿ ದೊರೆಯ ಸಾಮಾನ್ಯವಾದ ವೆಚ್ಚಗಳಿಗೆ ಇಂತಹ ತೆರಿಗೆಗಳಿಂದ ಹಣವು ಬರತಕ್ಕುದೆಂಬುದನ್ನು ಗೊತ್ತುಮಾಡಿದುದು ಮಾತ್ರವೇ ಅಲ್ಲದೆ, ಆಕಸ್ಮಿಕವಾಗಿ ಬಂದೊದಗುತ್ತಿದ್ದ ವೆಚ್ಚಗಳಿಗೂ ಹಣವನ್ನು ಕೊಡುವಂತಾಯಿತು ಅಲ್ಲದೆ ಯಾವುದಕ್ಕೋಸ್ಕರ ಹಣವು ಕೊಡಲಾಗುವುದೋ ಅದಕ್ಕೆ ಮಾತ್ರವೇ ದೊರೆಯು ಹಣವನ್ನು ವೆಚ್ಚಮಾಡಬೇಕೆಂದು ಗೊತ್ತಾಯಿತು. ಹೀಗೆ ೧೬೬೫ ರಲ್ಲಿ ಪಾರ್ಲಿಮೆಂಟಿನವರು ಡಚ್ಚರ ಮೇಲೆ ಯುದ್ಧ ಮಾಡುವುದಕ್ಕಾಗಿ ಹನ್ನೆರಡು ಲಕ್ಷದ ಐವತ್ತು ಸಾವಿರ ಪಾಂಡುಗಳನ್ನು ಕೊಟ್ಟು ಆ ಯುದ್ಧಕ್ಕಾಗಿ ಮಾತ್ರವೇ ಆ ಹಣವನ್ನು ವಿನಿಯೋಗಿಸಬೇಕೆಂದು ಕೋರಿದರು. ಮಂತ್ರಿಯಾದ ಕ್ಲ್ಯಾರೆಂಡನ್ (Clarendon) ಎಂಬಾತನಿಗೆ ಇದು ಸರಿಬೀಳಲಿಲ್ಲ. ಎಲಿಸಬೆತ್ ರಾಣಿಯ ಕಾಲದಿಂದಲೂ ಇಲ್ಲದೇ ಇದ್ದ ಪದ್ಧತಿಯನ್ನು ಈಗ ಆಚರಣೆಗೆ ತರುವುದು ಸರಿಯಲ್ಲವೆಂದೂ, ಆದುದರಿಂದ ದೊರೆಗೆ ಹಣವನ್ನು ಕೊಟ್ಟ ಮೇಲೆ ಅದು ಹೇಗೆ ವಿನಿಯೋಗವಾಯಿತೆಂಬುದನ್ನು ಪಾರ್ಲಿಮೆಂಟಿನವರು ಕೇಳತಕ್ಕುದು ಸರಿಯಲ್ಲವೆಂದೂ ಆತನು ವಾದಿಸಿದನು. ಆದರೂ, ಪಾರ್ಲಿಮೆಂಟಿನವರ ಕೋರಿಕೆಯಂತೆ ನಡೆಯುವುದಾದರೆ ಅವರಿಂದ ಯಥೇಷ್ಟವಾಗಿ ಹಣವನ್ನು ಪಡೆಯಲು ಅನುಕೂಲವಾಗುವುದೆಂದು, ಛಾರಲ್ಸ್ ದೊರೆಯು ಅವನ ಮಾತುಗಳಿಗೆ ಕಿವಿಗೊಡಲಿಲ್ಲ. ಅಂತು ಆತನ ಕಾಲದಲ್ಲಿ ಪಾರ್ಲಿಮೆಂಟಿನವರು ತಾವು ಕೊಟ್ಟ ಹಣವನ್ನು ದೊರೆಯು ಹೇಗೆ ವಿನಿಯೋಗಿಸಬೇಕೆಂಬುದನ್ನು ಚರ್ಚೆಮಾಡುವ ಅಧಿಕಾರವನ್ನು ಪಡೆದುಕೊಂಡರು.

ಪ್ರತಿನಿಧಿಸಭೆಯವರು ಮಂತ್ರಿಗಳ ಚುನಾವಣೆಯಲ್ಲಿ ತಮಗೆ ಅಧಿಕಾರ ವಿರುವಂತೆ ಮಾಡಿಕೊಳ್ಳಲು ಯತ್ನಿಸಿದರು. ಅವರ ಪ್ರಯತ್ನವು ಸಾಗಲಿಲ್ಲ. ಆದರೂ, ಅವರೆಲ್ಲರೂ ತಮಗೆ ಇಷ್ಟವಿಲ್ಲದೇ ಇದ್ದ ಮಂತ್ರಿಯನ್ನು ಓಟುಗಳನ್ನು ಹಾಕಿ ಕೆಲಸ ಬಿಡಿಸುವುದಕ್ಕೂ, ಅದು ಸಾಧ್ಯವಿಲ್ಲದಾಗ ಇಲ್ಲದ ತೊಂದರೆಗಳನ್ನು ತಂದಿಟ್ಟು ಆತನು ತನ್ನಷ್ಟಕ್ಕೆ ತಾನೇ ಕೆಲಸವನ್ನು ಬಿಟ್ಟು ಹೋಗುವಂತೆ ಮಾಡುವುದಕ್ಕೂ, ಆರಂಭಿಸಿದರು. ಹೀಗೆ ಅಧಿಕಾರವನ್ನು ಬಿಡಬೇಕಾಗಿಬಂದ ಮಂತ್ರಿಗಳಲ್ಲಿ ಕ್ಲ್ಯಾರೆಂಡನ್ ಎಂಬಾತನೇ ಮೊದಲನೆಯವನು. ಈತನು ಮೊದಲನೆಯ ಛಾರಲ್ಸ್ ದೊರೆಯ ಕಾಲದಿಂದಲೂ ರಾಜಸೇವೆಯಲ್ಲಿ ನಿರತನಾಗಿದ್ದು ದೊರೆಯ ಹಕ್ಕು ಬಾಧ್ಯತೆಗಳನ್ನು ಹೆಚ್ಚಿಸಲು ಹೋರಾಡುತ್ತಿದ್ದನು. ಇದರಿಂದ ಪ್ರತಿನಿಧಿಸಭೆಯವರಿಗೆ ಅವನನ್ನು ಕಂಡರೆ ಆಗದಂತಾಯಿತು. ಇದರ ಜೊತೆಗೆ, ಆತನು ನಡೆನುಡಿಗಳಲ್ಲಿ ಪೂರ್ವಕಾಲದವರನ್ನು ಹೋಲುತ್ತಿದ್ದನು. ಅಲ್ಲದೆ ಅವನು ನಡೆಯಿಸಿದ ಯುದ್ಧಗಳಲ್ಲಿ ಜಯವಾಗಲಿಲ್ಲ. ಕಾರಣಾಂತರಗಳಿಂದ ಛಾರಲ್ಸ್ ದೊರೆಗೂ ಅವನಲ್ಲಿ ಬೇಸರವು ಹುಟ್ಟಿತ್ತು. ಆದುದರಿಂದ ಅವನು ಅಧಿಕಾರವನ್ನು ಕಳೆದುಕೊಳ್ಳಬೇಕಾಯಿತು. ಇಷ್ಟೇ ಅಲ್ಲದೆ ಪ್ರತಿನಿಧಿಸಭೆಯವರು ಅವನನ್ನು ಶ್ರೀಮಂತ ಸಭೆಯಲ್ಲಿ ವಿಚಾರಣೆಗೆ ಗುರಿ (Impeach) ಮಾಡಿದರು. ಆತನು ವಿಪತ್ತಿನಿಂದ ತಪ್ಪಿಸಿಕೊಳ್ಳಲು ಯೂರೋಪಿಗೆ ಓಡಿಹೋಗಿ, ದೇಶಾಂತರವಾಸದಲ್ಲಿಯೇ ಮೃತನಾದನು.

ಪ್ರಿವಿ ಕೌನ್ಸಿಲ್ ಸಭೆಯಲ್ಲಿ ಬಹುಮಂದಿಗಳಿದ್ದುದರಿಂದ ಅತಿಗುಪ್ತವಾದ ರಾಜಕೀಯ ವಿಷಯಗಳನ್ನು ಅಲ್ಲಿ ಚರ್ಚೆ ಮಾಡುವುದಾದರೆ ಅವು ಹೊರಗೆ ಬಂದು ಬಿಡುವ ಸಂಭವವಿತ್ತು. ಆದಕಾರಣ ಈ ಸಭೆಯಿಂದ ಕೆಲವು ಮಂದಿ ಮುಖ್ಯ ಸದಸ್ಯರನ್ನು ಆರಿಸಿ ಅವರಿಂದೊಡಗೂಡಿದ ಉಪಸಭೆಯೊಂದನ್ನು ಏರ್ಪಡಿಸಿ ಅಲ್ಲಿ ಗೋಪ್ಯವಾದ ವಿಷಯಗಳನ್ನು ಚರ್ಚಿಸುವಂತೆ ಏರ್ಪಾಡಾಯಿತು. ಈ ಉಪಸಭೆಗೆ ಕ್ಯಾಬಲ್ (Cabal) ಎಂಬ ಹೆಸರು ಬಂತು ಈಗಿರುವ ಕ್ಯಾಬಿನೆಟ್ ಎಂಬ ಸಭೆಯು ಈ ಕ್ಯಾಬಲಿನಿಂದಲೇ ಪರಿವರ್ತಿತವಾಯಿತು. ಕ್ಯಾಬಲಿನವರಿಗೆ ಕೆಟ್ಟ ಹೆಸರು ಬಂದು ಕ್ಯಾಬಲ್ ಎಂಬ ಹೆಸರನ್ನು ಕಂಡರೆ ಜನರಿಗೆ ಅಸಹ್ಯಭಾವವು ಹುಟ್ಟದೇ ಇದ್ದಿದ್ದರೆ, ಇಂದಿನ ಕ್ಯಾಬಿನೆಟ್ಟಿಗೆ ಅದೇ ಹೆಸರೇ ಇರುತ್ತಿತ್ತೆಂದು ಹೇಳಬಹುದು.

ಪ್ರಸಕ್ತಸಮಯದಲ್ಲಿ ಕ್ಯಾಬಲ್ ಸಭೆಯವರು ಹಿಂದೆ ಮುಂದೆ ನೋಡದೆ ಕಾರ್ಯಗಳನ್ನು ನಡೆಯಿಸುವವರಾಗಿಯೂ ಜನಾಂಗದ ವಿಶ್ವಾಸಕ್ಕೆ

ಪಾತ್ರರಲ್ಲದೆಯೂ ಇದ್ದರು. ಅವರಲ್ಲಿ ಇಬ್ಬರು ಸದಸ್ಯರು ಮಾತ್ರವೇ ದೊರೆಯ ನಂಬಿಕೆಗೆ ಪಾತ್ರರಾಗಿದ್ದರು. ಕ್ಯಾಬಲಿನವರ ಸಹಾಯದಿಂದ ಛಾರಲ್ಸ್ ದೊರೆಯು ಫ್ರಾನ್ಸ್ ದೇಶದ ದೊರೆಯಾದ ಹದಿನಾಲ್ಕನೆಯ ಲೂಯಿ (Louis XIV) ಯೊಡನೆ ಗುಪ್ತವಾಗಿ ಡೋವರ್ ಕರಾರನ್ನು (Secret Treaty of Dover) ಮಾಡಿಕೊಳ್ಳಲು ಅನುಕೂಲವಾಯಿತು. ದೊರೆಯು ಗುಟ್ಟಾಗಿ ಒಪ್ಪಂದ ಮಾಡಿಕೊಂಡನೆಂಬುದು ಸ್ವಲ್ಪಕಾಲದಲ್ಲಿಯೇ ಹೊರಬಿತ್ತು. ಇದರಿಂದ ಮುಂದೆ ಕ್ಯಾಥೊಲಿಕರಿಗೆ ಅನುಕೂಲವಾಗಿ, ತಮ್ಮ ಸ್ವಾತಂತ್ರ್ಯವು ಕಡಿಮೆಯಾಗುವುದೆಂದು ಇಂಗ್ಲೆಂಡಿನಲ್ಲಿದ್ದ ಪ್ರಾಟೆಸ್ಟೆಂಟ್ ಜನರೆಲ್ಲರಿಗೂ ಶಂಕೆಯು ಹುಟ್ಟಿತು.

ಫ್ರಾನ್ಸ್, ಸ್ಪೇನ್, ಮುಂತಾದ ದೇಶಗಳಲ್ಲಿ 'ಸ್ಟ್ಯಾಂಡಿಂಗ್ ಆರ್ಮಿ' ಎಂಬ (Standing Army) ದೊಡ್ಡ ಸೈನ್ಯದ ಸಹಾಯದಿಂದ ದೊರೆಯು ನಿರಂಕುಶ ಪ್ರವರ್ತಕನಾಗಿರಲು ಅನುಕೂಲವಾಗಿತ್ತು. ಎರಡನೆಯ ಛಾರಲ್ಸ್ ದೊರೆಯು ಇಂಗ್ಲೆಂಡಿನಲ್ಲಿ ತಾನೂ ಇಂತಹ ಸೈನ್ಯವನ್ನೇರ್ಪಡಿಸಿ ಪ್ರಬಲನಾಗಬೇಕೆಂಬ ಉದ್ದೇಶದಿಂದ, ಲೂಯಿ ದೊರೆಯ ಸಹಾಯವನ್ನು ಕೋರಿದನು. ಪಾರ್ಲಿಮೆಂಟ್ ಸಭೆಯು ದುರ್ಬಲವಾಗಿದ್ದಿದ್ದರೆ ಆತನ ಉದ್ದೇಶವು ನೆರವೇರಬಹುದಾಗಿತ್ತು. ಜನರು ಸ್ವಾತಂತ್ರ್ಯಪ್ರಿಯರಾಗಿ, ಪಾರ್ಲಿಮೆಂಟ್ ಸಭೆಯು ಪ್ರಬಲವಾಗಿದ್ದುದರಿಂದ ಅವನ ಮನೋರಥವು ಈಡೇರುವುದು ಅಸಾಧ್ಯವಾಗಿತ್ತು. ನಿರಂಕುಶಪ್ರಭುತ್ವಕ್ಕೆ ಜನಾಂಗವೇ ಪ್ರತಿಭಟಿಸಿ ನಿಲ್ಲುವಂತಿದ್ದಕಾರಣ ಸೈನ್ಯದ ಸಹಾಯದಿಂದ ಅಂತಹ ಪ್ರಭುತ್ವವನ್ನು ನೆಲೆಗೊಳಿಸುವುದಕ್ಕೆ ಖಂಡಿತವಾಗಿಯೂ ಆಗುತ್ತಿರಲಿಲ್ಲ. ಪಾರ್ಲಿಮೆಂಟಿನವರು ದೊರೆಯ ವೆಚ್ಚಕ್ಕೆ ಹಣವನ್ನು ಒದಗಿಸುವ ಅಧಿಕಾರವನ್ನು ತಮ್ಮ ಕೈಯಲ್ಲೇ ಇಟ್ಟುಕೊಂಡಿದ್ದರು; ಸ್ಟ್ಯಾಂಡಿಂಗ್ ಆರ್ಮಿಗಾಗಿ ಅವರಿಂದಬೇರೇ ಹಣವು ಬರುತ್ತಿರಲಿಲ್ಲ. ಆದುದರಿಂದ ಛಾರಲ್ಸ್ ದೊರೆಯು ಫ್ರಾನ್ಸಿನ ಲೂಯಿ ದೊರೆಯಿಂದ ಹಣವನ್ನು ಪಡೆಯಲು ಯತ್ನಿಸಿದನು. ಲೂಯಿ ದೊರೆಯು ಯಥೇಷ್ಟವಾಗಿ ಹಣವನ್ನು ಕೊಡುವುದಕ್ಕೇನೋ ಸಿದ್ಧವಾಗಿದ್ದನು; ಆದರೆ ಅವನ ಷರತ್ತುಗಳಿಗನುಸಾರವಾಗಿ ನಡೆಯುವುದು ಛಾರಲ್ಸ್ ದೊರೆಗೆ ಅಸಾಧ್ಯವಾಗುವಂತಿತ್ತು. ಇಷ್ಟಕ್ಕೂ, ಪ್ರಜೆಗಳು ತಮಗೆ ಒದಗುವಂತಿದ್ದ ವಿಪತ್ತನ್ನರಿತುಕೊಂಡು ದೊರೆಯು ತನ್ನ ಅಧಿಕಾರವನ್ನು ಹೆಚ್ಚಿಸಿಕೊಳ್ಳದಂತೆ ಮಾಡಲುದ್ಯುಕ್ತರಾದರು. ಇಂಗ್ಲೆಂಡಿನ ರಕ್ಷಣಾರ್ಥವಾಗಿ ದೊಡ್ಡದೊಂದು ಸೈನ್ಯವು ಏರ್ಪಟ್ಟು ಅದು ದೊರೆಯ ಸ್ವಾಧೀನದಲ್ಲಿರುವುದಕ್ಕಿಂತಲೂ, ಅಂತಹ ಸೈನ್ಯವೇ ಇಲ್ಲದಿರುವುದು ಮೇಲೆಂದು ಅವರಿಗೆ ತೋರಿತು.

ಇಷ್ಟರಲ್ಲಿ ಡಚ್ಚರ ಮೇಲೆ ಯುದ್ಧ ಮಾಡುವುದಕ್ಕಾಗಿ ಪಾರ್ಲಿಮೆಂಟಿನವರು ಕೊಟ್ಟಿದ್ದ ಹಣದಲ್ಲಿ ಛಾರಲ್ಸ್ ದೊರೆಯು ಅರ್ಧ ಪಾಲಿಗಿಂತಲೂ ಸ್ವಲ್ಪ ಹೆಚ್ಚಾಗಿ ಯುದ್ಧಕ್ಕೆ ವೆಚ್ಚಮಾಡಿ, ಉಳಿದ ಹಣವು ಇತರ ಅನೇಕ ವಿಚಾರಗಳಿಗಾಗಿ ವೆಚ್ಚವಾಯಿತೆಂದೂ, ಪಾರ್ಲಿಮೆಂಟಿನವರು ಕೊಟ್ಟ ಹಣವು ಸಾಲದೆ ಬಂಬತ್ತು ಲಕ್ಷ ಪೌಂಡುಗಳನ್ನು ಸಾಲ ಮಾಡಬೇಕಾಯಿತೆಂದೂ ಹೇಳಿದನು. ಆದರೆ ತಾವು ಕೊಟ್ಟ ಹಣವನ್ನು ದೊರೆಯು ಪೂರ್ತಿಯಾಗಿ ಯುದ್ಧಕ್ಕೆ ವೆಚ್ಚಮಾಡದೇ ಇದ್ದುದು ತಪ್ಪೆಂದು ಅವರು ಅವನನ್ನು ಆಕ್ಷೇಪಿಸತೊಡಗಿದರು. ಈ ಕೋಟಲೆ ಏತಕ್ಕೆಂದು ಛಾರಲ್ಸ್ ದೊರೆಯು ಪಾರ್ಲಿಮೆಂಟನ್ನೇ ಬರಮಾಡಿಕೊಳ್ಳಕೂಡದೆಂದು ಯೋಚಿಸಿ ಒಂದು ವರುಷ ಒಂಬತ್ತು ತಿಂಗಳುಕಾಲ ಹಾಗೆಯೇ ತಳ್ಳಿದನು. ಇಷ್ಟರಲ್ಲಿ ಸಾಲಗಾರರ ವೇಧೆಯು ಬಲವಾಯಿತು. ೧೬೭೨ರಲ್ಲಿ ಹಣವನ್ನು ತೀರಿಸಬೇಕಾಗಿದ್ದವರಿಗೆಲ್ಲಾ ಅವರ ಹಣದ ಮೇಲಿನ ಬಡ್ಡಿಯನ್ನು ಮಾತ್ರವೇ ಕೊಡುವುದಾಗಿಯೂ ಮೂಲಧನವನ್ನು ನಿಲ್ಲಿಸಿಕೊಳ್ಳುವುದಾಗಿಯೂ ಹೇಳಿದನು. ಇದರಿಂದ, ದೊರೆಯು ದಿವಾಳಿಯಾಗುವಂತಿರುವನೆಂದು ಸಾಲವನ್ನು ಕೊಟ್ಟಿದ್ದವರೆಲ್ಲಾ ಗಲಭೆಯನ್ನು ಹೆಚ್ಚಲಾರಂಭಿಸಿದರು.

ಪಾರ್ಲಿಮೆಂಟ್ ಸಭೆಯನ್ನು ಸೇರಿಸದೇ ಇರುವುದು ಅಸಾಧ್ಯವಾಗಿ, ೧೬೭೩ನೆಯ ಇಸವಿಯಲ್ಲಿ ಪಾರ್ಲಿಮೆಂಟ್ ಸಭೆಯನ್ನು ಕೂಡಿಸಲೇಬೇಕಾಯಿತು. ಛಾರಲ್ಸನು ಲೂಯಿಯೊಡನೆ ಮೈತ್ರಿಯನ್ನು ಬಳೆಯಿಸಿದ್ದುದಕ್ಕಾಗಿಯೂ ಸರಿಯಾಗಿ ಆದಾಯ ವೆಚ್ಚಗಳನ್ನು ನಡೆಯಿಸದೇಇದ್ದುದಕ್ಕಾಗಿಯೂ, ಕ್ಯಾಥೊಲಿಕ್ ಪಂಗಡದವರಿಗೆ ಆನುಕೂಲ್ಯಗಳನ್ನು ಕಲ್ಪಿಸಿಕೊಡುವಂತಿದ್ದುದಕ್ಕಾಗಿಯೂ ಪಾರ್ಲಿಮೆಂಟಿನವರು ಬಹಳವಾಗಿ ಆಕ್ಷೇಪಿಸಿದರು. ಛಾರಲ್ಸ್ ದೊರೆಯು "ಡಿಕ್ಲರೇಷರ್ ಆಫ್ ಇಂಡಲ್ಜೆನ್ಸ್" ಎಂಬ ನಿಬಂಧನೆಯಮೂಲಕ ಕ್ಯಾಥೊಲಿಕರಿಗೆ ವಿರೋಧವಾಗಿದ್ದ ಕೆಲವು ನಿಬಂಧನೆಗಳು ಆಚರಣೆಯಲ್ಲಿರದಂತೆ ಮಾಡಿ ಅವರಿಗೆ ಅನುಕೂಲವನ್ನುಂಟುಮಾಡಿದ್ದನು. ಇದರಿಂದ ಪಾರ್ಲಿಮೆಂಟಿನವರು ಕೋಪಗೊಂಡು ದೂಷಣೆಯನ್ನೆಲ್ಲಾ ಮುಖ್ಯವಾಗಿ ಕ್ಯಾಬಲ್ ಸಭೆಯಲ್ಲಿದ್ದ ಕ್ಯಾಥೊಲಿಕ್ ಮತಸ್ಥರಾದ ಸದಸ್ಯರಮೇಲೆ ಹಾಕಿದರು ; ಅಲ್ಲದೆ ಕ್ಯಾಬಲ್ ಸಭೆಯನ್ನು ತೆಗೆದುಹಾಕಿದರು. ಕ್ಯಾಥೊಲಿಕರು ದೊಡ್ಡದೊಡ್ಡ ಅಧಿಕಾರಗಳಿಗೆ ಬಂದು ದೊರೆಯು ತಮ್ಮ ಹೇಳಿಕೆಗೆ ಕಿವಿಗೊಡದಿದ್ದುದನ್ನು ತಪ್ಪಿಸುವುದಕ್ಕಾಗಿ 'ಟೆಸ್ಟ್ ಆಕ್ಟ್' ಎಂಬ (Test Act) ನಿಬಂಧನೆಯನ್ನು ಮಾಡಿದರು. 'ಇದರಿಂದ ಇಂಗ್ಲೀಷ್ ಚರ್ಚಿನ ಮತಕರ್ಮಗಳಿಗನುಸಾರವಾಗಿ ಪ್ರಮಾಣಮಾಡಿ,

'ಟ್ರಾನ್ಸಬ್ ಸ್ಟ್ಯಾನ್ಷಿಯೇಷನ್' (Transubstantiation) ಎಂಬ ಕ್ಯಾಥೊಲಿಕರ ಕರ್ಮವನ್ನು ದ್ವೇಷಿಸುವುದಾಗಿ ಪ್ರತಿಜ್ಞೆಮಾಡದೇ ಇದ್ದವರು ಅಧಿಕಾರಕ್ಕೆ ಬರಕೂಡದೆಂದು ನಿಬಂಧನೆಯಾಯಿತು. ಕ್ಯಾಥೊಲಿಕರು ಬೇರೆ ಹೀಗೆ ಮಾಡುವುದಕ್ಕೆ ಒಪ್ಪುತ್ತಿರಲಿಲ್ಲ. ಆದುದರಿಂದ ಅವರಿಗೆ ಅಧಿಕಾರವು ದೊರೆಯುತ್ತಿರಲಿಲ್ಲ.

ಕ್ಯಬಾಲ್ ಸಭೆಯನ್ನು ತೆಗೆದುಹಾಕಿದಮೇಲೆ ಡ್ಯಾನ್‌ಬಿ (Danby) ಎಂಬವನು ಮಂತ್ರಿತ್ವವನ್ನು ವಹಿಸಿದನು. ಕ್ಲ್ಯಾರೆನ್‌ಡನ್ ಎಂಬ ಮಂತ್ರಿಯಂತೆಯೇ ಈತನೂ ದೊರೆಯ ಅಧಿಕಾರವನ್ನು ಹೆಚ್ಚಿಸಲು ಪ್ರಯತ್ನ ಮಾಡಿದನು. ಅದು ಸಾಗದೆ ಹೋಯಿತು. ಈತನು ಪ್ರಜೆಗಳಿಗೆ ಗೊತ್ತಾಗದಂತೆ ಲೂಯಿದೊರೆಗೂ ಛಾರಲ್ಸ್ ದೊರೆಗೂ ಗುಪ್ತವಾದ ಒಪ್ಪಂದಗಳನ್ನು ಏರ್ಪಡಿಸಹೋಗಿ ಪ್ರತಿನಿಧಿಸಭೆಯವರ ಕೈಗೆ ಸಿಕ್ಕಿಬಿದ್ದನು. ಅವರು ಈತನನ್ನು ಶ್ರೀಮಂತಸಭೆಯ ವಿಚಾರಣೆಗೆ ಗುರಿಮಾಡಿ ಸೆರಮನೆಗೆ ಕಳುಹಿಸಿದರು.

---

## ಹದಿನೇಳನೆಯ ಪ್ರಕರಣ.

### ಪಾರ್ಲಿಮೆಂಟ್ ಸಭೆಯ ಹಕ್ಕು ಬಾಧ್ಯತೆಗಳು ಮತ್ತೂ ಹೆಚ್ಚುವಿಕೆ.

ಛಾರಲ್ಸ್ ದೊರೆಗೆ ಜೇಮ್ಸ್ ಎಂಬೊಬ್ಬ ತಮ್ಮನಿದ್ದನು. ಆತನು ಕ್ಯಾಥೊಲಿಕ್ ಮತದವನು. ಅವನು ಯಾರ್ಕಿನ ಡ್ಯೂಕನಾಗಿದ್ದನು. ಛಾರಲ್ಸ್ ದೊರೆಯ ಕಾಲಾನಂತರ ಅವನು ಪಟ್ಟಕ್ಕೆ ಬರಬೇಕಾಗಿತ್ತು. ಕ್ಯಾಥೊಲಿಕನಾಗಿದ್ದ ಜೇಮ್ಸನು ದೊರೆಯಾಗುವುದು ಸರಿಯಲ್ಲವೆಂದೆಣಿಸಿ, ಪಾರ್ಲಿಮೆಂಟಿನವರು ಡ್ಯಾನ್‌ಬಿಯನ್ನು ವಿಚಾರಣೆಗೆ ಗುರಿಮಾಡಿದಾಗಲೇ, ಈ ವಿಷಯವನ್ನೂ ವ್ಯವಸ್ಥೆಮಾಡಬೇಕೆಂದು ನಿಷ್ಕರ್ಷೆಮಾಡಿದರು. ಆದುದರಿಂದ, ದೊರೆಯು ಸಭೆಯನ್ನು ಮುಕ್ತಾಯಗೊಳಿಸಿದನು. ಈ ವೇಳೆಗೆ ಪಾರ್ಲಿಮೆಂಟಿನವರು, ಸರಿಯಾದ ವಿಚಾರಣೆ ಇಲ್ಲದೆ ಯಾರಿಗೂ ಶಿಕ್ಷೆಯನ್ನು ವಿಧಿಸಕೂಡದೆಂದೂ, ಅಪರಾಧಿಗಳೆಂದು ಶಂಕೆಯುಂಟಾದವರನ್ನು ದಸ್ತಗಿರಿ(Arrest) ಮಾಡಿದ ಇಪ್ಪತ್ತು ದಿನಗಳೊಳಗಾಗಿ ಅವರನ್ನು ವಿಚಾರಣೆಗೆ ಗುರಿಮಾಡಬೇಕೆಂದೂ, ಹೊಣೆಯಮೇಲೆ ಬಿಡಬಹುದೆಂದೂ, ಕಾನೂನನ್ನು ವಿಧಿಸಿದ್ದರು; ರಾಜದ್ರೋಹಿಗಳೆಂದು ಸಂಶಯವು ಹುಟ್ಟಿದವರನ್ನು ಕೂಡ ದಸ್ತಗಿರಿಯಾದ

ಮೇಲೆ ಬೇಗನೆ ವಿಚಾರಣೆಮಾಡಲಾಗದೇ ಇದ್ದರೆ ಹೊಣೆಯಮೇಲೆ ಅವರನ್ನು ಬಿಡಬಹುದೆಂದು ನಿಬಂಧನೆಯಾಗಿತ್ತು. ಈ ನಿಬಂಧನೆಗಳು ಮೊದಲಿನಿಂದಲೂ ಇದ್ದುವು; ಆದರೆ ಈಗ ಮತ್ತಷ್ಟು ದೃಢೀಕೃತವಾದುವು. ಇಲ್ಲಿಂದ ಮುಂದೆ, ದೊರೆಯು ತನ್ನ ದ್ವೇಷಿಗಳನ್ನು ನ್ಯಾಯಸ್ಥಾನದಲ್ಲಿ ವಿಚಾರಣೆಯೇ ಇಲ್ಲದೆ ಸೆರೆಯಲ್ಲಿಡಿಸದಂತೆ ಆಯಿತು.

ಪಾರ್ಲಿಮೆಂಟಿನವರು ಮತ್ತೊಮ್ಮೆ ಸಭೆಸೇರಿದರು. ಪ್ರತಿನಿಧಿಸಭೆಯವರು ದೊರೆಯ ತಮ್ಮನಿಗೆ ರಾಜ್ಯವಾಗದಂತೆ ಮಾಡುವುದಕ್ಕಾಗಿ "ಎಕ್ಸ್ ಕ್ಲೂಷನ್ ಬಿಲ್" (Exclusion Bill) ಎಂಬ ಮಸೂದೆಯನ್ನು ಶ್ರೀಮಂತ ಸಭೆಗೆ ಕಳುಹಿಸಿದರು. ಅವರು ಇದು ಆಚರಣೆಗೆ ಬರಕೂಡದೆಂದು ಹೇಳಿದರು. ಇದರಿಂದ ಎರಡು ಪಂಗಡಗಳು ಹುಟ್ಟಿದುವು. ಇವುಗಳಲ್ಲಿ ದೊರೆಯ ಪಕ್ಷವನ್ನು ವಹಿಸಿದ್ದ ಪಂಗಡಕ್ಕೆ ಟೋರಿ ಪಂಗಡವೆಂದೂ, ಈ ಪಂಗಡಕ್ಕೆ ವಿರೋಧವಾಗಿದ್ದುದಕ್ಕೆ ಹ್ವಿಗ್ ಪಂಗಡವೆಂದೂ,(Tories and Whigs)ಹೆಸರಾಯಿತು. ದೊರೆಯ ಹಕ್ಕು ಬಾಧ್ಯತೆಗಳು ಹಿಂದಿನಂತೆಯೇ ಒಂದೇ ಸಮವಾಗಿ ನಡೆದು ಬರಬೇಕೆಂಬುದೇ, ಟೋರಿ ಪಂಗಡದವರ ಕೋರಿಕೆ. ಪಾರ್ಲಿಮೆಂಟಿಗೆ ಪ್ರಾಬಲ್ಯವುಂಟಾಗಿ, ಸಮಯಕ್ಕೆ ತಕ್ಕಂತೆ ಪ್ರಜೆಗಳ ಮನೋಗತವನ್ನು ಅನುಸರಿಸಿ ದೇಶದ ನೆಮ್ಮದಿಗಾಗಿ ದೊರೆಯ ಹಕ್ಕು ಬಾಧ್ಯತೆಗಳನ್ನು ಸ್ವಲ್ಪ ಮಟ್ಟಿಗೆ ಬದಲಾಯಿಸುವುದರಿಂದ ಯಾವ ಕುಂದುಕವೂ ಇರದೆಂಬುದೇ ಹ್ವಿಗ್ ಪಂಗಡದವರ ಭಾವನೆ.

ಛಾರಲ್ಸ್ ದೊರೆಯು, ರಾಜನ ಪಕ್ಷವನ್ನು ವಹಿಸುತ್ತಿದ್ದ ಟೋರಿ ಪಂಗಡದವರಿಗೆ ಪ್ರಾಮುಖ್ಯತೆಯನ್ನುಂಟುಮಾಡಿ ತನ್ನ ಕಾರ್ಯವನ್ನು ಗೆಲ್ಲಬೇಕೆಂದೆಣಿಸಿದನು. 'ಕಾರ್ಪೊರೇಷನ್' (Corporation) ಗಳೆಂಬ ಪೌರಸಂಘಗಳನ್ನು ಪರಿಷ್ಕರಿಸಿ ಟೋರಿಗಳಿಗೆ ಪ್ರಾಬಲ್ಯವನ್ನುಂಟುಮಾಡಿಕೊಟ್ಟು, ತನ್ಮೂಲಕ ಪಟ್ಟಣಗಳಿಂದ ಪಾರ್ಲಿಮೆಂಟ್ ಸಭೆಗೆ ಪ್ರತಿನಿಧಿಗಳಾಗಿ ಬರುವವರೆಲ್ಲರೂ ಟೋರಿ ಪಂಗಡದವರಾಗಿರುವಂತೆ ಮಾಡಲು ಪ್ರಯತ್ನಿಸಿದನು.

ಈ ಕಾರ್ಪೊರೇಷನ್‌ಗಳೆಂಬ ಪೌರಸಂಘಗಳು ದೊರೆಯಿಂದ ಸನ್ನದನ್ನು ಪಡೆದು, ತನ್ಮೂಲಕ ತಮ್ಮ ತಮ್ಮ ಪಟ್ಟಣಗಳ ಆಡಳಿತಗಳನ್ನು ನಡೆಯಿಸುವ ಅಧಿಕಾರವನ್ನು ಪಡೆದುಕೊಂಡಿದ್ದುವು. ಈ ಸನ್ನದುಗಳಿಗಾಗಿ ದೊರೆಗೆ ಹಣವನ್ನು ಕೊಡಬೇಕಾಗಿತ್ತು; ಇಲ್ಲವೇ ಕ್ಲೃಪ್ತವಾದ ಕೆಲವು ಕರ್ತವ್ಯಗಳನ್ನು ನೆರವೇರಿಸಬೇಕಾಗಿತ್ತು. ಆದರೆ ಕಾಲಕ್ರಮದಲ್ಲಿ ಈ ಕರ್ತವ್ಯಗಳನ್ನು

ನಡೆಯಿಸುವ ವಿಷಯದಲ್ಲಿ ಉದಾಸೀನತೆಯನ್ನು ತೋರಿಸಿದ್ದ ಕೆಲವು ಸಂಘಗಳ ಸನ್ನದುಗಳನ್ನು ಛಾರಲ್ಸ್ ದೊರೆಯು ರದ್ದುಮಾಡಿದನು. ಆದರೆ ತಮ್ಮ ಅಧಿಕಾರಗಳನ್ನು ಹಿಂದಕ್ಕೆ ಕೊಡಬೇಕೆಂದು ಅವರು ಪ್ರಾರ್ಥಿಸಿದಾಗ, ಒಂದೊಂದು ಸಂಘದಲ್ಲಿಯೂ ಯಾರು ಸದಸ್ಯರಾಗಿರಬೇಕೆಂಬುದನ್ನು ಗೊತ್ತು ಮಾಡಿ ಒಂದೊಂದು ಪಟ್ಟಣಕ್ಕೂ ಟೋರಿ ಪಂಗಡದಿಂದ ಆರಿಸಿದಾತನನ್ನು 'ಮೇಯರ್' ಎಂಬ ಪುರಾಧಿಪತಿಯ ಅಧಿಕಾರಕ್ಕೆ ನಿಯಮಿಸುವುದರಿಂದ, ಛಾರಲ್ಸ್ ದೊರೆಯು ತನ್ನ ಅಭಿಮತವನ್ನು ಪೂರ್ತಿ ಮಾಡಿಕೊಳ್ಳಲಾರಂಭಿಸಿದನು. ಪಾರ್ಲಿಮೆಂಟಿನವರ ಇಷ್ಟಕ್ಕೆ ವಿರೋಧವಾಗಿ ನಡೆಯುವುದು ಅಸಾಧ್ಯವಾದ ಕಾರ್ಯವೆಂದರಿತುಕೊಂಡು, ಉಪಾಯದಿಂದ ಪಾರ್ಲಿಮೆಂಟ್ ಸಭೆಗೆ ಟೋರಿ ಪಂಗಡದವರೇ ಹೆಚ್ಚಾಗಿ ಬರುವಂತೆ ಮಾಡಿ, ಹೆಸರಿಗೆ ಮಾತ್ರ ಪಾರ್ಲಿಮೆಂಟ್ ಸಭೆಯು ಜನಾಂಗದ ಪ್ರತಿನಿಧಿತ್ವವನ್ನು ವಹಿಸಿ, ವಸ್ತುತಃ ತನಗೆ ಅನುಕೂಲವಾಗಿರುವಂತೆ ಮಾಡಿಕೊಳ್ಳಲು ಯತ್ನಿಸಿದ ಛಾರಲ್ಸ್ ದೊರೆಯ ಪ್ರಯತ್ನವು ಶ್ಲಾಘ್ಯವಾದುದೇಸರಿ: ಆದರೆ, ತನ್ನ ಪ್ರಯತ್ನಗಳಿಗನುರೂಪವಾದ ಸತ್ಫಲಗಳನ್ನು ಅನುಭವಿಸುವಷ್ಟರಲ್ಲಿಯೇ ಛಾರಲ್ಸ್ ದೊರೆಯು ಮೃತನಾದನು. ಬಳಿಕ ಆತನ ತಮ್ಮನೇ ಪಟ್ಟಕ್ಕೆ ಬಂದನು. ಈ ಎರಡನೆಯ ಜೇಮ್ಸ್ ದೊರೆಯು ವಿವೇಕಿಯೂ, ಚಾತುರ್ಯವಂತನೂ ಆಗಿಲ್ಲದೇ ಇದ್ದುದರಿಂದ ಕಾರ್ಯಗಳು ಹದಗೆಟ್ಟುವು.

ಈತನು ಪಟ್ಟಕ್ಕೆ ಬಂದಮೇಲೆ ಮೊತ್ತಮೊದಲು ಸಭೆಸೇರಿದ ಪಾರ್ಲಿಮೆಂಟಿನಲ್ಲಿ (ಛಾರಲ್ಸ್ ದೊರೆಯು ವ್ಯವಸಾಯದ ಪ್ರಭಾವದಿಂದ) ಟೋರಿಪಂಗಡದವರೇ ಹೆಚ್ಚಾಗಿದ್ದರು. ಆದುದರಿಂದ ಸಭೆಯು ದೊರೆಗೆ ಅನುಕೂಲವಾಗಿತ್ತು. ಪಾರ್ಲಿಮೆಂಟಿನವರು ಛಾರಲ್ಸ್ ದೊರೆಗೆ ಕೊಟ್ಟದ್ದಂತೆಯೇ ಈತನಿಗೂ ವೆಚ್ಚಕ್ಕೆ ಹಣವನ್ನು ಕೊಟ್ಟರು. ಸಕ್ಕರೆಯ ಮತ್ತು ಹೊಗೆಯಸೊಪ್ಪಿನ ಮೇಲೆ ವಿಧಿಸಿದ್ದ ತೆರಿಗೆಯಿಂದ ಬಂದ ಹಣವೂ ದೊರೆಗೇ ಸೇರತಕ್ಕುದೆಂದು ಗೊತ್ತಾಯಿತು. ಪಾರ್ಲಿಮೆಂಟಿನವರಿಂದ ಹೀಗೆ ಹಣವು ಬಂದುದೂ ಅಲ್ಲದೆ ಫ್ರಾನ್ಸಿನ ಲೂಯಿ ದೊರೆಯಿಂದಲೂ ಸಹಾಯವು ದೊರೆಯುವಂತಿದ್ದುದರಿಂದ ಜೇಮ್ಸ್ ದೊರೆಗೆ ದುಡ್ಡಿನ ಯೋಚನೆಯು ತಪ್ಪಿತು. ಈ ಮಧ್ಯದಲ್ಲಿ ನಡೆದ ಆರ್ಗೈಲಿನ ಡ್ಯೂಕನ ಮತ್ತು ಮಾನ್ಮತ್ತಿನ (Monmouth) ದಂಗೆಗಳನ್ನು ಅಡಗಿಸಿದುದರಿಂದ ದೊರೆಗೆ ನಿರಾತಂಕವಾಯಿತು. ಬಳಿಕ ಜೇಮ್ಸ್ ದೊರೆಯು ಪಾರ್ಲಿಮೆಂಟಿನವರ ಸಲಹೆಗಳನ್ನು ಅನುಮೋದಿಸಿ, ಪ್ರಜೆಗಳ ಸುಖಕ್ಕೆ ಗಮನಕೊಟ್ಟು ರಾಜ್ಯವಾಳಿದ್ದರೆ ಎಷ್ಟೋ ಚೆನ್ನಾಗಿತ್ತು.

ಆದರೆ, ಅವನು ಹಾಗೆ ಮಾಡದೆ, ಅನೇಕ ಅಚಾತುರ್ಯಗಳನ್ನು ನಡೆಯಿಸಿದನು. "ಡಿಸ್ಪೆನ್ಸಿಂಗ್ ಪವರ್" (Dispensing Power) ಎಂಬ ಅಧಿಕಾರವನ್ನು ವಹಿಸಿ, ಅದರ ಉಪಯೋಗದಿಂದ ಕ್ಯಾಥೊಲಿಕ್ ಪಂಗಡದವರಿಗೆ ಪ್ರಾಬಲ್ಯವನ್ನುಂಟುಮಾಡಲು ಯತ್ನಿಸಿದನು. ಪ್ರಾಟೆಸ್ಟೆಂಟ್ ಪಂಗಡಕ್ಕೆ ಸೇರಿದವರ ಅಧಿಕಾರಗಳನ್ನು ಕಿತ್ತುಕೊಂಡನು. ಪಾರ್ಲಿಮೆಂಟಿನವರು ತೆಗೆದು ಹಾಕಿದ್ದ ಹೈ ಕಮಿಷನ್ ನ್ಯಾಯಸ್ಥಾನವನ್ನು ಮತ್ತೆಸ್ಥಾಪಿಸಿದನು. 'ಇಂಗ್ಲಿಷ್‌ಚರ್ಚ್' ಪಂಗಡದ ಪ್ರಾಟೆಸ್ಟೆಂಟ್ ಮತದವರಿಗೆ ಕಿರುಕುಳವನ್ನು ತಂದಿಟ್ಟು, ಏಳು ಜನ ಬಿಷಪ್ಪುಗಳನ್ನು ವಿಚಾರಣೆಗೆ ಗುರಿ ಮಾಡಿಸಿದನು. ಆಕ್ಸ್‌ಫರ್ಡ್ ಮತ್ತು ಕೇಂಬ್ರಿಜ್ ವಿಶ್ವವಿದ್ಯಾನಿಲಯಗಳನ್ನು ಆಕ್ರಮಣಮಾಡಿದನು. ಈ ವಿಧವಾದ ಅತ್ಯಾಚರಣೆಗಳಿಂದ ಪ್ರಜೆಗಳ ವಿರೋಧವನ್ನು ಕಟ್ಟಿಕೊಂಡು ತನ್ನ ಕೇಡಿಗೆ ತಾನೇ ಮಾರ್ಗವನ್ನು ಕಲ್ಪಿಸಿಕೊಂಡನು.

ಪ್ರಾಟೆಸ್ಟೆಂಟ್ ಮತದವನಾದ ವಿಲಿಯಂ ಎಂಬಾತನನ್ನು ವರಿಸಿದ್ದ ಜೇಮ್ಸಿನಮಗಳಾದ ಮೇರಿಯೆಂಬಾಕೆಯೇ ಮುಂದೆ ಪಟ್ಟಕ್ಕೆ ಬರುವಳೆಂದರಿತು, ಜನರೆಲ್ಲರೂ ಜೇಮ್ಸ್ ದೊರೆಯ ಕಿರುಕುಳವನ್ನು ಕಷ್ಟದಿಂದ ಸಹಿಸುತ್ತಿದ್ದರು. ಆದರೆ, ಅಷ್ಟರಲ್ಲಿ ಜೇಮ್ಸ್ ದೊರೆಗೆ ಪುತ್ರೋತ್ಸವವಾದುದರಿಂದ ಅವರ ಆಸೆಯು ಬಯಲಾಯಿತು. ಈ ರಾಜಕುಮಾರನೂ ತಂದೆಯಂತೆಯೇ ಕ್ಯಾಥೊಲಿಕರ ಪಕ್ಷಪಾತಿಯಾಗಬಹುದೆಂಬ ಶಂಕೆಯು ತಲೆದೋರಿತು. ಹೆಚ್ಚೇಕೆ? ಜೇಮ್ಸ್ ದೊರೆಗೆ ಪಟ್ಟವಾದ ಮೂರು ವರುಷಗಳಲ್ಲಿ ಒಟ್ಟು ಜನಾಂಗವೇ ಅವನಿಗೆ ವಿರೋಧವಾಗಿ ನಿಂತಿತು. ಆದರೂ ದೊರೆಯ ಬಳಿಯಲ್ಲಿ ಸೈನ್ಯವಿದ್ದುದರಿಂದ ಅವರು ಧಾರಾಳವಾಗಿ ತಮ್ಮ ಅಭಿಪ್ರಾಯವನ್ನು ಹೊರಪಡಿಸಲಾಗಲಿಲ್ಲ. ಆದರೆ, ಶೀಘ್ರವಾಗಿಯೇ ದೊರೆಯ ಅಳಿಯನಾದ ವಿಲಿಯಮನ (William of Orange) ಸಹಾಯವು ದೊರೆತುದರಿಂದ, ಪಾರ್ಲಿಮೆಂಟ್ ಸಭೆಯಲ್ಲಿ ಜನಾಂಗದ ನಿಜವಾದ ಅಭಿಮತವು ಚರ್ಚೆಯಾಗಲು ಅನುಕೂಲವಾಯಿತು. ವಿಲಿಯಮನ ಸೈನ್ಯವು ಬಂದಿಳಿದಿದ್ದುದರಿಂದ ತಮ್ಮ ಮುಖ್ಯಸ್ಥರು ಕೈಬಿಟ್ಟುದರಿಂದಲೂ, ಜನರೆಲ್ಲರೂ ತಮಗೆ ವಿರೋಧಿಗಳಾಗಿದ್ದುದರಿಂದಲೂ, ದೊರೆಯ ಸೈನಿಕರು ಕೈಯೆತ್ತದೇಹೋದರು. ದೈವಾನುಗ್ರಹದಿಂದ ಯುದ್ಧವು ತಪ್ಪಿತು. ಜೇಮ್ಸ್ ದೊರೆಯು ಫ್ರಾನ್ಸಿಗೆ ಓಡಿಹೋದನು. ವಿಲಿಯಮನಿಗೂ, ಮೇರಿಗೂ, ಸಿಂಹಾಸನವನ್ನು ಒಪ್ಪಿಸಲಾಯಿತು ಪಾರ್ಲಿಮೆಂಟಿನವರು "ಬಿಲ್ ಆಫ್ ರೈಟ್ಸ್" (Bill of Rights) ಎಂಬ ಕಾನೂನಿನಿಂದ ತಮ್ಮ ಹಕ್ಕುಬಾಧ್ಯತೆಗಳನ್ನೂ, ದೊರೆಯ ಅಧಿಕಾರಗಳನ್ನೂ ನಿರ್ಧರಿಸಿದರು. ಇದರಿಂದ ಹಿಂದಿದ್ದ ವಿಷಯಗಳನ್ನೇ ಒತ್ತಿಹೇಳಿದರು. ಪಾರ್ಲಿಮೆಂಟಿನ ಅನುಮತಿಯಿಲ್ಲದೆ ತೆರಿಗೆಯನ್ನು

ಹಾಕಕೂಡದೆಂದೂ, ಪ್ರತಿನಿಧಿಗಳನ್ನು ಆರಿಸುವುದರಲ್ಲಿಯೂ ರಾಜಕೀಯ ವಿಚಾರಗಳಲ್ಲಿಯೂ, ಹೆಚ್ಚು ಸ್ವಾತಂತ್ರ್ಯವಿರಬೇಕೆಂದೂ ಪಾರ್ಲಿಮೆಂಟಿನವರು ಬೇಗಬೇಗನೆ ಸಭೆಸೇರುವಂತಾಗಬೇಕೆಂದೂ, ಅವರ ಒಪ್ಪಿಗೆಯಿಲ್ಲದೆ ಕಾಯಿದೆಗಳನ್ನು ಬದಲಾಯಿಸಕೂಡದೆಂದೂ, ಅವರು ಸಮ್ಮತಿಸಿದಲ್ಲದೆ ಸಮಾಧಾನಕಾಲದಲ್ಲಿ ಸೈನ್ಯವನ್ನಿಡಕೂಡದೆಂದೂ ವಿಧಾಯುಕವಾಯಿತು.

೧೬೮೮ ರಲ್ಲಿ ನಡೆದ ಈ ರಾಜ್ಯವಿಪ್ಲವ (Revolution) ದಿಂದ, ಕೇವಲ ಪ್ರಭುತ್ವ ಮಾಡುವವರು ಬದಲಾಯಿಸಿದುದು ಮಾತ್ರವೇ ಫಲವಾಗಲಿಲ್ಲ. ಈ ರಾಜ್ಯವಿಪ್ಲವದಿಂದ ಹೊಸ ಸಂಗತಿಗಳಾವುವೂ ಆಚರಣೆಗೆ ಬಾರದೇ ಇದ್ದರೂ, ಹಿಂದಿನಿಂದ ಇದ್ದ ವಿಚಾರಗಳೇ ಸರಿಯಾಗಿ, ಕ್ರಮವರಿತು ಆಚರಣೆಗೆ ಬಂದು, ಬೇರೂರಿ ನಿಂತುವು. ೧೬೮೮ ರಲ್ಲಿ ನಡೆದ ರಾಜ್ಯ ವಿಪ್ಲವ ಎಂದರೆ ಜೇಮ್ಸ್ ದೊರೆಯನ್ನೂ, ಅವನ ಮಗನನ್ನೂ, ರಾಜ್ಯದಿಂದ ಓಡಿಸಿದುದು ಮಾತ್ರವೇ ಎಂದು ಕೆಲವರು ಅರ್ಥಮಾಡುತ್ತಾರೆ. ಆದರೆ, ದೊರೆಗೆ ಇದ್ದ ಅಪ್ರತಿಹತವಾದ ಹಕ್ಕುಗಳು ಪಾರ್ಲಿಮೆಂಟಿಗೆ ಬಂದುದೇ ಇದರ ನಿಶ್ಚಯವಾದ ಅರ್ಥವು. ಇಲ್ಲಿಂದ ಮುಂದೆ, ದೊರೆಯು ಭಗವಂತನ ಅಂಶದಿಂದ ಹುಟ್ಟಿದವನೆಂಬ ಭಾವನೆಯು ಸಂಪೂರ್ಣವಾಗಿ ತಪ್ಪಿಹೋಯಿತು; ಜನರೆಲ್ಲರೂ, ದೊರೆಯು ದೇಶದಲ್ಲೆಲ್ಲಾ ಅತಿಪ್ರಮುಖನಾದ ಅಧಿಕಾರಿಯೆಂದು ತಿಳಿದುಕೊಂಡರು.

ಪಾರ್ಲಿಮೆಂಟ್ ಸಭೆಯವರು ದೊರೆಯ ವೆಚ್ಚಕ್ಕೆ ಹಣವನ್ನು ಕೊಡುವ ಅಧಿಕಾರವನ್ನು ತಮ್ಮ ಕೈಯಲ್ಲಿಯೇ ಇಟ್ಟುಕೊಂಡು, ಯಾವ ಯಾವ ವಿಚಾರಗಳಿಗೆ ಎಷ್ಟೆಷ್ಟು ಹಣವು ವಿನಿಯೋಗವಾಗಬೇಕೆಂಬುದನ್ನು ಗೊತ್ತುಮಾಡಿದರು. ಅಲ್ಲದೆ, ದೊರೆಗೆ ಹಣವು ಜನ್ಮಾವಧಿ ಬಾರದಂತೆಮಾಡಿ, ಅವನ ವೆಚ್ಚಕ್ಕಾಗಿ ವರುಷ ವರುಷವೂ ಹಣವನ್ನು ಕೊಡತಕ್ಕುದೆಂದು ನಿರ್ಧರಿಸಿದರು. ಇದರಿಂದ, ಪಾರ್ಲಿಮೆಂಟಿನವರನ್ನು ಬೇಗ ಬೇಗನೆ ಸಭೆಸೇರಿಸಬೇಕಾಗಿ ಬಂತು. ಏಕೆಂದರೆ, ಪಾರ್ಲಿಮೆಂಟಿನವರು ಸಭೆಸೇರಿದಲ್ಲದೆ ದೊರೆಯ ವೆಚ್ಚಕ್ಕೆ ಹಣವು ಬರುತ್ತಿರಲಿಲ್ಲ. ಒಂದು ಉದ್ದೇಶಕ್ಕಾಗಿ ಕೊಟ್ಟ ಹಣವನ್ನು ಮತ್ತೊಂದಕ್ಕೆ ವಿನಿಯೋಗಿಸಕೂಡದೆಂದು ಕೋಶಾಧ್ಯಕ್ಷರಿಗೆ ಅಪ್ಪಣೆಯಾಯಿತು. ಅಂತು, ದೊರೆಯ ಆದಾಯ ವೆಚ್ಚದ ಮೇಲೆ ಪಾರ್ಲಿಮೆಂಟಿನವರಿಗೆ ಪೂರ್ಣಾಧಿಕಾರವು ಬಂತು. ದೊರೆಯು ಉಪಾಯಾಂತರದಿಂದ ತನ್ನ ಪಕ್ಷವನ್ನು ವಹಿಸುವ ಸದಸ್ಯರನ್ನು ತಂದು, ಪಾರ್ಲಿಮೆಂಟ್ ಸಭೆಯನ್ನು ತನ್ನ ಕಡೆಗೆ ಮಾಡಿಕೊಂಡು, ಎಂದೆಂದಿಗೂ ಅದೇ ಸದಸ್ಯರೇ ಇರುವಂತೆ ಏರ್ಪಡಿ

ಸುವುದನ್ನು ತಪ್ಪಿಸುವುದಕ್ಕಾಗಿ "ಟ್ರೈಯೆನಿಯಲ್ ಆಕ್ಟ್" ಎಂಬ ನಿಬಂಧನೆಯನ್ನು ಮಾಡಿದರು. ಹಿಂದೆ ಮೊದಲನೆಯ ಛಾರಲ್ಸ್ ದೊರೆಯ ಕಾಲದಲ್ಲಿ ಸಭೆಯು ಕ್ರಮವಾಗಿ ಸೇರಲು ಅನುಕೂಲಿಸುವಂತೆ ನಡೆದಿದ್ದ ಟ್ರೈಯೆನಿಯಲ್ ಆಕ್ಟಿಗೂ, ಈ ಟ್ರೈಯೆನಿಯಲ್ ಆಕ್ಟಿಗೂ ಉದ್ದೇಶದಲ್ಲಿ ಪರಸ್ಪರವಾಗಿ ವ್ಯತ್ಯಾಸವಿತ್ತು. ಆದುದರಿಂದ ಹಿಂದಿದ್ದ ಆಕ್ಟನ್ನೇ ಮತ್ತೊಂದುಸಲ ವಿಧಿಸಿದರೆಂದು ತಿಳಿಯಲಾಗದು.

ಮೇಲೆ ಹೇಳಿದಂತೆ "ಬಿಲ್ ಆಫ್ ರೈಟ್ಸ್" (Bill of Rights) ಎಂಬುದರಿಂದ ಪಾರ್ಲಿಮೆಂಟನವರ ಅನುಮತಿಯಿಲ್ಲದೆ ಸಮಾಧಾನಕಾಲದಲ್ಲಿ ಸೈನ್ಯವನ್ನಿಟ್ಟುಕೊಳ್ಳಲು ದೊರೆಗೆ ಅಧಿಕಾರವು ತಪ್ಪಿತು. ಆದರೂ, ಪಾರ್ಲಿಮೆಂಟನವರು ದೇಶರಕ್ಷಣೆಯ ವಿಚಾರಕ್ಕೆ ಗಮನಕೊಡದೇ ಇರಲಿಲ್ಲ; ಆಗ ಅಪಾಯವೂ ಒದಗುವಂತಿತ್ತು. "ಮ್ಯೂಟನಿ ಆಕ್ಟ್" (Mutiny Act) ಎಂಬ ನಿಬಂಧನೆಯು ಹುಟ್ಟಿತು. ಇದರಿಂದ, ದೇಶರಕ್ಷಣೆಗಾಗಿ ಸೈನ್ಯವು ಏರ್ಪಡಬಹುದೆಂದೂ, ಆದರೆ ಹಾಗೆ ಸೈನ್ಯವನ್ನಿಡುವ ವಿಚಾರದಲ್ಲಿ ವರುಷ ವರುಷವೂ ಪಾರ್ಲಿಮೆಂಟನವರ ಅನುಮತಿಯನ್ನು ಪಡೆಯಬೇಕೆಂದೂ ಗೊತ್ತಾಯಿತು. ದೊರೆಗೂ, ಪಾರ್ಲಿಮೆಂಟಿಗೂ ಪರಸ್ಪರವಾಗಿ ಮನಸ್ತಾಪವು ಬಂದಾಗ ಸೈನ್ಯವನ್ನಿಡಲು ಅವರು ಒಪ್ಪುತ್ತಲೂ ಇರಲಿಲ್ಲ; ಸೈನ್ಯದ ವೆಚ್ಚಕ್ಕಾಗಿ ದುಡ್ಡನ್ನು ಕೊಡುತ್ತಲೂ ಇರಲಿಲ್ಲ. ದೊರೆಗೆ ಸೈನಿಕರ ಸಂಬಳವನ್ನು ಕೊಡುವುದಕ್ಕೆ ಹಣವಿಲ್ಲದೆ ಸೈನ್ಯವು ಕರಗಿಹೋಗುವಂತಾಯಿತು.

ಹೈ ಕಮಿಷನ್ ನ್ಯಾಯಸ್ಥಾನವನ್ನು ತೆಗೆದುಹಾಕಲಾಯಿತು. ನ್ಯಾಯಸ್ಥಾನಗಳು ಪರಿಷ್ಕಾರವಾದುವು; ಪಾರ್ಲಿಮೆಂಟನವರು ಅಪೇಕ್ಷಿಸುವುದಾದರೆ, (ಅವರಿಗೆ ಇಷ್ಟವಿಲ್ಲದ) ನ್ಯಾಯಾಧಿಪತಿಗಳನ್ನು ಕೆಲಸದಿಂದ ತೆಗೆದುಹಾಕಬಹುದೆಂದು ಗೊತ್ತಾಯಿತು; ನಿಷ್ಪಕ್ಷಪಾತವಾದ ನ್ಯಾಯವಿಮರ್ಶೆಗೆ ಅವಕಾಶವಾಯಿತು.

---

# ಹದಿನೆಂಟನೆಯ ಪ್ರಕರಣ.

## ಹ್ವಿಗ್ ಮತ್ತು ಟೋರಿ ಪಂಗಡಗಳ ಪ್ರಭುತ್ವ.

ಹಿಂದೆ ಹೇಳಿದ ನಿಬಂಧನೆಗಳ ಜೊತೆಗೆ "ಆಕ್ಟ್ ಆಫ್ ಸೆಟ್ಲ್ಮೆಂಟ್" (Act of Settlement) ಎಂಬ ನಿಬಂಧನೆಯೂ ಆಯಿತು. ಇದರಿಂದ ಮುಂದೆ ಮೇರಿಯ ತಂಗಿಯಾದ ಆನ್ (Anne) ಎಂಬಾಕೆಯು ಪಟ್ಟಕ್ಕೆ ಬರಬೇಕೆಂದೂ, ಆಕೆಯ ಮಕ್ಕಳೆಲ್ಲಾ ಮೃತರಾಗಿ ಹೋಗಿದ್ದುದರಿಂದ, ಅವಳ ಕಾಲಾನಂತರ "ಎಲೆಕ್ಟ್ರೆಸ್ ಸೋಫಿಯಾ" (Electress Sophia ಎಂಬಾಕೆಗೆ ರಾಜ್ಯವಾಗಬೇಕೆಂದೂ ಗೊತ್ತಾಯಿತು.

ಪ್ರತಿನಿಧಿಸಭೆಯವರ ಅನುಮತಿಗನುಸಾರವಾಗಿ ನಡೆದಲ್ಲದೆ ಪ್ರಭುತ್ವ ಮಾಡುವುದು ಅಸಾಧ್ಯವೆಂಬುದು ಮೂರನೆಯ ವಿಲಿಯಂದೊರೆಗೆ ಸ್ವಲ್ಪಕಾಲ ದಲ್ಲಿಯೇ ಗೊತ್ತಾಯಿತು. ವರುಷ ವರುಷವೂ ರಾಜನ ವೆಚ್ಚಕ್ಕೆ ಹಣವನ್ನು ಕೊಡುತ್ತಿದ್ದವರು ಅವರು; ಅವರು "ಮ್ಯೂಟನಿ ಆಕ್ಟನ್ನು" ಪ್ರತಿವರುಷವೂ ಅನುಮೋದಿಸಿದಲ್ಲದೆ ಸೈನ್ಯವನ್ನು ಇಡುವುದಕ್ಕಿಲ್ಲ. ಆದುದರಿಂದ, ದೊರೆಯು ಅವರ ಅನುಮತಿಯಂತೆ ನಡೆದಲ್ಲದೆ ಮಾರ್ಗವಿರಲಿಲ್ಲ; ಅಂತು ಪ್ರತಿನಿಧಿಸಭೆ ಯಲ್ಲಿ ಟೋರಿ ಪಂಗಡದವರು ಹೆಚ್ಚಾಗಿದ್ದರೆ ಅವರ ಅಭಿಮತವನ್ನೂ, ಹ್ವಿಗ್ ಪಂಗಡದರು ಹೆಚ್ಚಾಗಿದ್ದರೆ ಅವರ ಅಭಿಮತವನ್ನೂ, ದೊರೆಯು ಅನುಸರಿಸಿ ನಡೆಯಬೇಕಾಗಿ ಬಂತು. ಇದರಿಂದ, ವಿಲಿಯಂ ದೊರೆಯು ಒಂದು ಪಂಗಡ ದವರಿಗೆ ಮಾತ್ರವೇ ರಾಜನಾಗಿರದೆ ಒಟ್ಟುಜನಾಂಗಕ್ಕೇ ರಾಜನಾಗಿರಬೇಕೆಂದು ಮಾಡಿಕೊಂಡಿದ್ದ ಸಂಕಲ್ಪವು ನೆರವೇರಿದಂತಾಯಿತು. ಎರಡು ಪಂಗಡದವರೂ ಸೇರಿ ತನ್ನನ್ನು ದೊರೆಯಾಗಿ ಮಾಡಿದ್ದುದರಿಂದ, ಅವರ ರಾಜಭಕ್ತಿಗೆ ಪುರಸ್ಕಾ ರವನ್ನು ಕೊಟ್ಟು ನಿಷ್ಪಕ್ಷಪಾತವಾಗಿ ಎರಡು ಪಂಗಡಗಳಲ್ಲಿ ಯಾರು ದಕ್ಷರೋ ಅವರನ್ನು ದೊಡ್ಡ ದೊಡ್ಡ ಅಧಿಕಾರಗಳಿಗೆ ತರಬೇಕೆಂಬುದೇ ಅವನ ಅಭಿಮತ ವಾಗಿತ್ತು. ಆದರೆ, ಇದು ಸಾಗಲಿಲ್ಲ. ಪ್ರತಿನಿಧಿ ಸಭೆಯಲ್ಲಿ ಟೋರಿ ಪಂಗಡ ದವರು ಹೆಚ್ಚಾಗಿದ್ದಾಗ ದೊರೆಯು ನಿಯಮಿಸಿದ್ದ ಹ್ವಿಗ್ ಪಂಗಡದ ಮಂತ್ರಿಗಳ ಮಾತು ಏನೇನೂ ಸಾಗುತ್ತಿರಲಿಲ್ಲ. ಅಲ್ಲಿ ಹ್ವಿಗ್ ಪಂಗಡದವರು ಹೆಚ್ಚಾಗಿದ್ದಾಗ, ಟೋರಿ ಪಂಗಡದಿಂದ ಆರಿಸಿದ್ದ ಮಂತ್ರಿಗಳು ಯಾವ ಕೆಲಸವನ್ನೂ ಮಾಡಲಾರ ದವರಾಗಿದ್ದರು. ಆದುದರಿಂದ ಪ್ರತಿನಿಧಿಸಭೆಯಲ್ಲಿ ಯಾವ ಪಂಗಡದವರು ಹೆಚ್ಚಾಗಿದ್ದರೆ ಆ ಪಂಗಡದವರಿಗೆ ಮಂತ್ರಿತ್ವವನ್ನು ವಹಿಸಿದಲ್ಲದೆ ಆಡಳಿತಗಳು ಸಾಗದೇ ಹೋದುವು. ದೊರೆಯು ಇದೇ ಕ್ರಮವನ್ನು ಕೈಗೊಳ್ಳಬೇಕಾಗಿ ಬಂತು.

ಈ ಕ್ರಮಕ್ಕೆ "ಪಾರ್ಟಿ ಗವರ್ನ್ಮೆಂಟ್" (Party Government) ಎಂದರೆ ಪಂಗಡದ ಆಧಿಪತ್ಯವೆಂದು ಹೆಸರು ಬಂತು. ಇದನ್ನು ಸಂಡರ್‍ಲೆಂಡ್ (Sunderland) ಎಂಬಾತನು ಮೊತ್ತಮೊದಲು ಸ್ಥಾಪಿಸಿದನು. ಈತನು ಹ್ವಿಗ್ ಪಂಗಡದವರಿಗೆ ಮಂತ್ರಿತ್ವವನ್ನು ವಹಿಸಿದಲ್ಲದೆ ದೊರೆಯ ಮನೋರಥಗಳು ಚೆನ್ನಾಗಿ ನೆರವೇರಲಾರವೆಂದು ೧೬೯೩ರಲ್ಲಿ ಸಲಹೆಯನ್ನು ಕೊಟ್ಟನು. ಅದಕ್ಕನುಸಾರವಾಗಿ ನಡೆಯುವುದು ಒಡನೆಯೇ ಸಾಧ್ಯವಾಗಲಿಲ್ಲ. ಟೋರಿ ಪಂಗಡದವರನ್ನೆಲ್ಲಾ ಮಂತ್ರಿತ್ವದಿಂದ ಒಟ್ಟಿಗೆ ಹೊರಡಿಸುವುದಾದರೆ ಅವರೆಲ್ಲಾ ಜೇಮ್ಸಿನ ಪಕ್ಷವನ್ನು ವಹಿಸಿ ತನಗೆ ತೊಂದರೆಯನ್ನುಂಟುಮಾಡಬಹುದೆಂಬ ಭಯದಿಂದ ವಿಲಿಯಂ ದೊರೆಯು ಟೋರಿ ಪಂಗಡದ ಮಂತ್ರಿಗಳಲ್ಲಿ ಒಬ್ಬೊಬ್ಬನನ್ನಾಗಿ ಕೆಲಸದಿಂದ ತೆಗೆದು ಅವನ ಸ್ಥಾನಕ್ಕೆ ಹ್ವಿಗ್ ಪಂಗಡದವನನ್ನು ನಿಯಮಿಸುತ್ತಾ ಬಂದು ಕೊನೆಗೆ ೧೬೯೭ರಲ್ಲಿ ಎಲ್ಲಾ ಮಂತ್ರಿಗಳೂ ಹ್ವಿಗ್ ಪಂಗಡದವರೇ ಆಗುವಂತೆ ಮಾಡಿದನು. ಆದರೇನು? ಆಗ ಪ್ರತಿನಿಧಿಸಭೆಯಲ್ಲಿ ಟೋರಿ ಪಂಗಡದವರಿಗೆ ಪ್ರಾಬಲ್ಯವಿದ್ದುದರಿಂದ ತೊಂದರೆಯು ತಪ್ಪಲಿಲ್ಲ. ಎರಡನೆಯ ಛಾರಲ್ಸ್ ದೊರೆಯು ಕಾರ್ಪೊರೇಷನ್‌ಗಳೆಂಬ ಪೌರಸಂಘಗಳಿಗೆಲ್ಲಾ ಟೋರಿ ಪಂಗಡದವರನ್ನೇ ತುಂಬಿದ್ದುದರಿಂದ ಪ್ರತಿನಿಧಿಸಭೆಗೆ ಆ ಪಂಗಡದವರೇ ಹೆಚ್ಚಾಗಿ ಪ್ರತಿನಿಧಿಗಳಾಗಿ ಬರುತ್ತಿದ್ದರು. ಆದುದರಿಂದ, ಪ್ರತಿನಿಧಿಸಭೆಯಲ್ಲಿ ಟೋರಿ ಪಂಗಡದವರೇ ಹೆಚ್ಚಾಗಿದ್ದರು. ಅವರೆಲ್ಲರೂ ತಮ್ಮ ಪಂಗಡದವರಿಗೆ ಮಂತ್ರಿತ್ವವು ತಪ್ಪಿಹೋದುದರಿಂದ ಸ್ವಲ್ಪಮಟ್ಟಿಗೆ ಅಸಮಾಧಾನವನ್ನು ಹೊಂದಿ ವಿಲಿಯಂ ದೊರೆಗೆ ತೊಂದರೆಯನ್ನು ಕೊಡಲಾರಂಭಿಸಿದರು. ಸರಕಾರದಲ್ಲಿ ಅಸಂತುಷ್ಟರಾಗಿದ್ದ ಕೆಲವು ಮಂದಿ ಹ್ವಿಗ್ ಪಂಗಡದವರೂ ಇವರ ಜೊತೆಗೆ ಸೇರಿದರು. ಅಂತು ಇವರೆಲ್ಲರೂ ಒಟ್ಟಿಗೆ ಸೇರಿ, ಸೈನ್ಯವನ್ನು ಕಡಿಮೆ ಮಾಡಬೇಕೆಂದೂ, ಟೋರಿ ಪಂಗಡದಿಂದ ಕೆಲವು ಮಂದಿಗಳನ್ನು ಮಂತ್ರಿತ್ವಕ್ಕೆ ತೆಗೆದುಕೊಳ್ಳಬೇಕೆಂದೂ, ವಿಲಿಯಮನನ್ನು ನಿರ್ಬಂಧಿಸಿದರು. ಆತನು ಇದಕ್ಕೆ ಒಪ್ಪಿದನು. ಇದರಿಂದ ಅವರೆಲ್ಲರೂ ಉಬ್ಬಿಹೋಗಿ, ದೊರೆಯು ತನ್ನ ಮಿತ್ರರಿಗೆ ಪಾರಿತೋಷಿಕಗಳನ್ನು ಕೊಟ್ಟುದಕ್ಕಾಗಿ ಆಕ್ಷೇಪಿಸಿ ಪ್ರಮುಖರಾಗಿದ್ದ ಹ್ವಿಗ್ ಪಂಗಡದವರಮೇಲೆಲ್ಲಾ ದೋಷಾರೋಪಣೆಮಾಡಿ ವಿಚಾರಣೆಗೆ ಗುರಿಮಾಡಿದರು. ಆದರೆ, ಇಷ್ಟರಲ್ಲಿ ಫ್ರಾನ್ಸಿನಲ್ಲಿ ಲೂಯಿ ದೊರೆಯ ಬಳಿಗೆ ಓಡಿಹೋಗಿದ್ದ ಜೇಮ್ಸನು ಮೃತನಾದನು; ಜೇಮ್ಸ್ ದೊರೆಯಮಗನೇ ಇಂಗ್ಲೆಂಡಿನ ದೊರೆಯೆಂದು ಲೂಯಿಯು, ಒಪ್ಪಿದನು. ಮುಂದೆ, ಅವನ ದೆಸೆಯಿಂದ ತೊಂದರೆಯಾದೀತೆಂದು ಭಾವಿಸಿ, ಎಲ್ಲರೂ ವಿಲಿಯಮನ ಪಕ್ಷವನ್ನು ವಹಿಸಿದರು. ಆತನು ಮತ್ತೊಮ್ಮೆ ಹ್ವಿಗ್ ಪಂಗಡದವರಿಗೇ ಮಂತ್ರಿತ್ವವನ್ನು ವಹಿಸಿದನು.

ಟೋರಿ ಪಂಗಡದವನೂ, ದೊರೆಯ ಆಪ್ತನೂ, ಆಗಿದ್ದ ಮಾರಲ್‌ಬರೊ (Duke of Marlborough) ಎಂಬ ದಳಪತಿಯು ಉಭಯಪಂಗಡದವರಿಂದಲೂ ಕೂಡಿದ್ದ ಮಂತ್ರಿತ್ವವನ್ನು ಏರ್ಪಡಿಸಿದನು. ಆದರೆ ಕೆಲಸಗಳು ಸಮರ್ಪಕವಾಗಿ ನಡೆಯುಲಿಲ್ಲ. ಆದುದರಿಂದ ಹ್ವಿಗ್ ಪಂಗಡದವರಿಗೇ ಮಂತ್ರಿತ್ವವನ್ನು ವಹಿಸಬೇಕಾಯಿತು. ಈತನ ಕಾಲದಿಂದ, ಪ್ರತಿನಿಧಿಸಭೆಯಲ್ಲಿ ಯಾವ ಪಂಗಡದವರು ಹೆಚ್ಚಾಗಿರುವರೋ ಆ ಪಂಗಡದವರಿಗೆ ಮಂತ್ರಿತ್ವವನ್ನು ವಹಿಸತಕ್ಕದೆಂದು ನಿಷ್ಕರ್ಷೆಯಾಯಿತು.

ದೊರೆಯು, ತನ್ನ ಕಡೆಯ ಅಧಿಕಾರಿಗಳು ಪ್ರತಿನಿಧಿಸಭೆಯಲ್ಲಿ ಕುಳ್ಳಿರುವಂತೆ ಮಾಡುವುದರಿಂದಲೂ, ಬರೋಗಳನ್ನೇರ್ಪಡಿಸಿ ತನ್ನ ಪಕ್ಷವನ್ನು ವಹಿಸುವಂತಹವರೇ ಅಲ್ಲಿಂದ ಪ್ರತಿನಿಧಿಗಳಾಗಿ ಬರುವಂತೆ ಮಾಡುವುದರಿಂದಲೂ, ಪ್ರತಿನಿಧಿಸಭೆಯಲ್ಲಿ ತನ್ನ ಉದ್ದೇಶಗಳಿಗೆ ಉತ್ತೇಜನವು ದೊರೆಯುವಂತೆ ಏರ್ಪಾಡು ಮಾಡಿದ್ದುದನ್ನು ತಪ್ಪಿಸಲಾಯಿತು. ಇದಕ್ಕಾಗಿ, ದೊರೆಯ ಕೈಕೆಳಗಿನ ಅಧಿಕಾರಿಗಳು ಪಾರ್ಲಿಮೆಂಟಿನಲ್ಲಿ ಕುಳ್ಳಿರಕೂಡದೆಂದು ನಿಬಂಧನೆಯಾಯಿತು. ಇದರಿಂದ ಕೆಲವು ತೊಂದರೆಗಳುಂಟಾದುವು. ಆದುದರಿಂದ ಪಾರ್ಲಿಮೆಂಟಿನವರು ಈ ನಿಬಂಧನೆಯನ್ನು ಸ್ವಲ್ಪಮಟ್ಟಿಗೆ ತಿದ್ದುಪಾಟು ಮಾಡಿ, ಪ್ರತಿನಿಧಿಸಭೆಯವರಲ್ಲಿ ಯಾರಿಗಾದರೂ ಅಧಿಕಾರವಾಗುವುದಾದರೆ, ಅವರು ತತ್ಕಾಲಿಕವಾಗಿ ಪಾರ್ಲಿಮೆಂಟ್‌ಸಭೆಯಲ್ಲಿ ಕುಳ್ಳಿರದೇಇದ್ದು, ಮುಂದೆ ಸದಸ್ಯರ ಚುನಾವಣೆಯು ನಡೆದಾಗ ಅವರನ್ನು ಆರಿಸುವುದಾದರೆ ಸದಸ್ಯರಾಗಿರಬಹುದೆಂದು ಏರ್ಪಡಿಸಿದರು. ಇಲ್ಲಿಂದ ಮುಂದೆ ಪ್ರತಿನಿಧಿಸಭೆಯಲ್ಲಿ ಯಾವ ಪಂಗಡದವರು ಹೆಚ್ಚಾಗಿದ್ದರೆ ಆ ಪಂಗಡದವರಿಗೆ ಮಂತ್ರಿತ್ವವನ್ನು ವಹಿಸಬೇಕಾಯಿತು. ಈವಿಧವಾದ ಪಂಗಡದ ಆಡಳಿತವು ವಿಲಿಯಂ, ಆನ್ ರಾಣಿ (Queen Anne), ಮೊದಲನೆಯ ಜಾರ್ಜ್ ಮತ್ತು ಎರಡನೆಯ ಜಾರ್ಜ್--ಇವರ ಕಾಲದಲ್ಲಿ ಬಹುಮಟ್ಟಿಗೆ ಗಟ್ಟಿಯಾಗಿ, ಕ್ರಮಕ್ಕೆ ಬಂತು. ವಿಲಿಯಂ ದೊರೆಯೂ, ಆನ್ ರಾಣಿಯೂ, ಪಾರ್ಲಿಮೆಂಟಿನವರು ತಮ್ಮ ಅಭಿಪ್ರಾಯಕ್ಕೆ ಅನುಸಾರವಾಗಿ ನಡೆಯದೇಇದ್ದಾಗ ತಾವೇ ಪಾರ್ಲಿಮೆಂಟಿನವರ ಕೋರಿಕೆಯಂತೆ ನಡೆಯಲು ಸಿದ್ಧವಾಗಿದ್ದರು.

ವಿಲಿಯಂ ದೊರೆಯ ಮರಣಾನಂತರ ಆನ್ ರಾಣಿಯು ಪಟ್ಟಕ್ಕೆ ಬಂದಳು. ಆಕೆಯು, ತನ್ನ ಆಪ್ತಸಚಿವನೂ ಸಮರ್ಥನಾದ ದಳಪತಿಯೂ ಆಗಿದ್ದ ಮಾರಲ್‌ಬರೋ ಡ್ಯೂಕನ (Duke of Marlborough) ಸಲಹೆಗಳಿಗೆ ತಕ್ಕಂತೆ ನಡೆಯಲು ಸಿದ್ಧಳಾಗಿದ್ದಳು. ಆತನೂ ಕೂಡ ಜನಾಂಗದ ವಿಶ್ವಾಸಕ್ಕೆ ಪಾತ್ರ

ನಾಗಿದ್ದುಕೊಂಡು ಕೆಲಸಮಾಡಿದನು. ಅವನು ಮೊದಲು ಮೊದಲು ಉಭಯ ಪಂಗಡದಿಂದಲೂ ಮಂತ್ರಿಗಳನ್ನು ಆರಿಸಿದನು. ಬಳಿಕ, ಕ್ರಮಕ್ರಮವಾಗಿ ಟೋರಿ ಪಂಗಡದ ಮಂತ್ರಿಗಳನ್ನು ತೆಗೆದುಹಾಕಿ ಅವರ ಸ್ಥಾನಕ್ಕೆ ಹ್ವಿಗ್ ಪಂಗಡದವರನ್ನು ತರಬೇಕಾಯಿತು. ಹ್ವಿಗ್ ಪಂಗಡದವರ ಮಂತ್ರಿತ್ವವೂ ಸ್ವಲ್ಪಕಾಲ ಸಾಗಿತು. ಬಳಿಕ, ಪ್ರತಿನಿಧಿಸಭೆಯಲ್ಲಿ ಟೋರಿ ಪಂಗಡದವರು ಹೆಚ್ಚಾದುದರಿಂದ, ಆ ಪಂಗಡದವರಿಗೇ ಮಂತ್ರಿತ್ವವನ್ನು ವಹಿಸಬೇಕಾಯಿತು. ಅಂತು ಯಾವ ಪಂಗಡದವರು ಮಂತ್ರಿತ್ವವನ್ನು ವಹಿಸಿಕೊಂಡರೂ, ಮಂತ್ರಿಗಳೇ ಎಲ್ಲಾ ಆಡಳಿತಗಳನ್ನೂ ನಡೆಯಿಸುತ್ತಿದ್ದರು. ಆನ್ ರಾಣಿಯು ಮರಣಾನಂತರ, ಸೋಫಿಯಾದ ಎಲೆಕ್ಟ್ರೆಸ್ಸಳ ಮಗನಾದ ಮೊದಲನೆಯ ಜಾರ್ಜ್ ದೊರೆಗೆ ಪಟ್ಟವಾಯಿತು. ಈತನೂ, ಈತನ ಮಗನೂ, ರಾಷ್ಟ್ರೀಯ ವಿಚಾರಗಳಿಗೆ ಹೆಚ್ಚು ಗಮನಕೊಡದೇ ಇದ್ದುದರಿಂದ ಪಾರ್ಲಿಮೆಂಟಿನವರು ರಾಜ್ಯದ ಆಡಳಿತದ ವಿಚಾರದಲ್ಲಿ ಪ್ರಾಬಲ್ಯವನ್ನು ಹೊಂದಲು ಅನುಕೂಲವಾಯಿತು. ಹೀಗಿದ್ದರೂ ಕೂಡ, ಸಚಿವನಾಗಿದ್ದ ವಾಲ್ಪೋಲ್ ಎಂಬಾತನಿಗೆ ರಾಜ್ಯದ ಆಡಳಿತಗಳನ್ನು ನಡೆಯಿಸುವುದು ತುಂಬಾ ಕಷ್ಟವಾಯಿತು. ಅತ್ತ ಪ್ರತಿನಿಧಿಸಭೆಯವರು ಠರಾವು ಮಾಡುತ್ತಿದ್ದರು. ಇತ್ತ, ಸಚಿವನು ದೊರೆಯನ್ನು ಮೆಚ್ಚಿಸಬೇಕಾಗಿತ್ತು; ಈ ಉಭಯಪಕ್ಷದವರ ಮನಸ್ಸಿಗೂ ಅಸಮಾಧಾನವಾಗದಂತೆ ನಡೆಯುವುದು ಸುಲಭಸಾಧ್ಯವಾಗಿರಲಿಲ್ಲ. ಪ್ರತಿನಿಧಿಸಭೆಯಲ್ಲಿ ಯಾವ ಪಂಗಡದವರು ಹೆಚ್ಚಾಗಿದ್ದರೆ ಆ ಪಂಗಡದಿಂದ ದೊರೆಯು ಮಂತ್ರಿತ್ವಕ್ಕೆ ಜನರನ್ನು ನಿಯಮಿಸಿಕೊಳ್ಳಬೇಕಾಗಿದ್ದುದೇನೋ ನಿಜ; ಆದರೆ ಆ ಪಂಗಡಕ್ಕೆ ಸೇರಿದ ಅನೇಕಾನೇಕ ಜನರಲ್ಲಿ ದೊರೆಯು ತನಗೆ ಬೇಕಾಗಿದ್ದವರನ್ನು ಮಂತ್ರಿತ್ವಕ್ಕೆ ಆರಿಸಿಕೊಳ್ಳಬಹುದಾಗಿತ್ತು; ಅಲ್ಲದೆ, ಹಾಗೆ ಆರಿಸಿದವರ ವಿಷಯದಲ್ಲಿ ಬೇಸರ ಹುಟ್ಟಿದಾಗ ಅವರನ್ನು ಕೆಲಸದಿಂದ ತೆಗೆದು, ಅವರ ಪಂಗಡಕ್ಕೆ ಸೇರಿದ್ದ ಮತ್ತಾರಿಗೆ ಬೇಕಾದರೂ ಅಧಿಕಾರವನ್ನು ಕೊಡಬಹುದಾಗಿತ್ತು. ಆದಕಾರಣ, ಸಚಿವನು ಕೆಲಸದಲ್ಲಿರಬೇಕಾದರೆ ದೊರೆಯನ್ನು ಮೆಚ್ಚಿಸುವುದು ಆವಶ್ಯಕವಾಗಿತ್ತು.

ಮೊದಲನೆಯ ಜಾರ್ಜ್ ದೊರೆಯು ಹ್ವಿಗ್ ಪಂಗಡದವರಲ್ಲಿ ವಿಶ್ವಾಸವಿಟ್ಟನು. ಇದರಿಂದ, ಟೋರಿ ಪಂಗಡದವರಿಗೆ ಅಸಮಾಧಾನವಾಗಿ ಅವರೆಲ್ಲರೂ ಹಿಂದಿನ ಜೇಮ್ಸ್ ದೊರೆಯನ್ನು ಜ್ಞಾಪಿಸಿಕೊಂಡು ಅವನ ಮಗನನ್ನು ಪಟ್ಟಕ್ಕೆ ತರುವುದರಲ್ಲಿ ಉತ್ಸಾಹಿಗಳಾದರು. ಈ ಮಧ್ಯೆ, ವಾಲ್ಪೋಲನು ಅಪ್ರತಿಹತವಾಗಿ ತನ್ನ ಅಧಿಕಾರವನ್ನು ನಡೆಯಿಸತೊಡಗಿದುದರಿಂದ ಹ್ವಿಗ್ ಪಂಗಡದವರಲ್ಲಿ ಕೆಲವರಿಗೆ ಅಸಮಾಧಾನವಾಗಿ ಅವರೆಲ್ಲರೂ ತಮ್ಮ ಪಂಗಡದವರಲ್ಲಿ ವಾಳ್

ಪೋಲಿನ ಪಕ್ಷವನ್ನು ವಹಿಸಿದ್ದವರೊಡನೆ ಹೋರಾಡತೊಡಗಿದರು. ಮೂರನೆಯ ಜಾರ್ಜ್ ದೊರೆಗಳ ಕಾಲದಲ್ಲಿಯೂ ಕೂಡ, ದೊರೆಗೂ, ಆತನ ಹಿರಿಯ ಮಗನಾದ 'ಪ್ರಿನ್ಸ್ ಆಫ್ ವೇಲ್ಸ್' (Prince of Wales) ಎಂಬಾತನಿಗೂ, ಪರಸ್ಪರವಾಗಿ ವಿರೋಧಭಾವವು ಹುಟ್ಟಿದ್ದುದರಿಂದ, ಹೀಗೆ ಅಸಂತುಷ್ಟರಾದ ಹ್ವಿಗ್ ಮತ್ತು ಟೋರಿ ಪಂಗಡದವರೆಲ್ಲರೂ ಪ್ರಿನ್ಸ್ ಆಫ್ ವೇಲ್ಸರ ಪಕ್ಷವನ್ನು ವಹಿಸಿ, ದೊರೆಗೆ ಪ್ರತಿಭಟಿಸಿ ನಿಂತರು. ಇದರಿಂದ, ಅವರೆಲ್ಲರೂ ಜೇಮ್ಸ್ ದೊರೆಯ ಮಗನ ಪಕ್ಷವನ್ನು ವಹಿಸಿ ಜಾರ್ಜ್ ದೊರೆಯೊಡನೆ ಯುದ್ಧ ಮಾಡುವುದು ತಪ್ಪಿತು.

ದೊರೆಯು ಆಪ್ತಗಲ್ಲಿ ಪ್ರಿವಿ ಕೌನ್ಸಿಲಿನಿಂದ ಆರಿಸಿದ ಕೆಲವು ಮಂದಿ ಕೂಡಿದ್ದ ಸಭೆಗೆ ಕ್ಯಾಬಿನೆಟ್ ಎಂದು ಹೆಸರು ಬಂದುದು ಸರಿಯಷ್ಟೆ. ಸಾಮಾನ್ಯವಾಗಿ, ಕ್ಯಾಬಿನೆಟ್ಟಿನ ಸದಸ್ಯರಿಗೆ ದೊಡ್ಡ ದೊಡ್ಡ ಅಧಿಕಾರಗಳಿರುತ್ತಿದ್ದುವು; ಆದ ಮಾತ್ರವೇ ಎಲ್ಲಾ ದೊಡ್ಡ ಅಧಿಕಾರಿಗಳಿಗೂ ಕ್ಯಾಬಿನೆಟ್ಟಿನಲ್ಲಿಯೂ ಪ್ರಿವಿ ಕೌನ್ಸಿಲಿನಲ್ಲಿಯೂ ಸ್ಥಾನವು ಸಿಕ್ಕಬೇಕೆಂಬ ನಿಬಂಧನೆಯು ಇರಲಿಲ್ಲ ಕ್ಯಾಬಿನೆಟ್ಟಿನ ಸದಸ್ಯರಾಗುವುದೆಂದರೆ ಬಲುಗೌರವ. ಪ್ರಧಾನಸಚಿವನು ಕ್ಯಾಬಿನೆಟ್ಟಿಗೆ ಮುಖ್ಯಸ್ಥನಾಗಿರುವ ಪದ್ಧತಿ.

ನಾರ್ಮನರ ಕಾಲದಲ್ಲಿ 'ಲಾರ್ಡ್ ಛೀಫ್ ಜಸ್ಟಿಸ್' (Lord Chief Justice) ಎಂಬ ಅಧಿಕಾರಿಯೇ ಅತ್ಯಂತ ಮುಖ್ಯನಾಗಿದ್ದನು. ಬಳಿಕ ನಾಲ್ಕನೆಯ ಹೆನ್ರಿ ದೊರೆಯ ಕಾಲದಲ್ಲಿ ಛಾನ್ಸೆಲರ್ ಎಂಬ ಅಧಿಕಾರಿಗೆ ಪ್ರಾಮುಖ್ಯತೆಯುಂಟಾಯಿತು. ಟ್ಯೂಡರ್ ಸಂತತಿಯ ದೊರೆಗಳ ಕಾಲದಲ್ಲಿ ಕೆಲವು ವೇಳೆ 'ಟ್ರೆಷರರ್' ಎಂಬ ಕೋಶಾಧ್ಯಕ್ಷನೂ ಕೆಲವು ವೇಳೆ, ಛಾನ್ಸೆಲರ್ ಎಂಬ ಅಧಿಕಾರಿಯೂ ಪ್ರಾಬಲ್ಯವನ್ನು ಹೊಂದಿದ್ದರು. ಸ್ಟ್ಯೂಯರ್ಟ್ ಸಂತತಿಯ ದೊರೆಗಳ ಕಾಲದಲ್ಲಿ ಮತ್ತೊಮ್ಮೆ ಛಾನ್ಸೆಲರನಿಗೆ ಪ್ರಾಮುಖ್ಯತೆಯು ಬಂತು. ಆದರೆ ಛಾನ್ಸೆಲರನಾಗಿದ್ದ ಕ್ಲ್ಯಾರೆನ್‌ಡೆನ್ನಿನ ಕಾಲಾನಂತರ ಕೋಶಾಧ್ಯಕ್ಷನಾಗಿದ್ದ ಡ್ಯಾನ್ಬಿ ಎಂಬಾತನೇ ಎಲ್ಲಾ ಅಧಿಕಾರಿಗಳಿಗಿಂತಲೂ ಮುಖ್ಯನೆಂದು ಭಾವಿತನಾದನು. ಡ್ಯಾನ್ಬಿಯ ಕಾಲಾನಂತರ, ಟ್ರೆಷರರ್ ಎಂಬ ಒಬ್ಬನೇ ಅಧಿಕಾರಿ ಇದ್ದುದು ತಪ್ಪಿ, "ಲಾರ್ಡ್ಸ್ ಆಫ್ ದಿ ಟ್ರೆಷರಿ" (Lords of the Treasury) ಎಂಬ ಅಧಿಕಾರಿಗಳೂ, ಅವರೆಲ್ಲರಿಗೂ "ಫಸ್ಟ್ ಲಾರ್ಡ್ ಆಫ್ ದಿ ಟ್ರೆಷರಿ" (First Lord of the Treasury) ಎಂಬ ಅಧ್ಯಕ್ಷನೂ, ನಿಯಮಿತನಾಗಬೇಕೆಂದು ನಿಬಂಧನೆಯಾಯಿತು. ವಾಲ್‌ಪೋಲಿನ ಕಾಲದಿಂದೀಚೆಗೆ ಈ ಅಧ್ಯಕ್ಷನ ಅಧಿಕಾರವೇ ಅತ್ಯುಚ್ಚವಾದುದೆಂದೂ, ಆತನೇ ಕ್ಯಾಬಿನೆಟ್ಟಿಗೂ, ಸರಕಾರಕ್ಕೂ

ಮುಖ್ಯನೆಂದೂ, ಭಾವನೆಯುಂಟಾಯಿತು. ಈತನಿಗೆ 'ಪ್ರೈಮಿಯರ್'(Premier) ಎಂದು ಹೆಸರು ಬಂತು.

ಈ ಮಧ್ಯೆ, ಅತಿ ಮುಖ್ಯವಾದ ಇನ್ನೊಂದು ಬದಲಾವಣೆಯುಂಟಾಯಿತು. ಮಂತ್ರಿಗಳಲ್ಲಿ ಪರಸ್ಪರವಾಗಿ ಪ್ರತ್ಯೇಕಭಾವವು ನೆಲೆಗೊಂಡಿದ್ದುದು ಹೋಗಿ, ಅವರಲ್ಲಿ ಐಕಮತ್ಯವು ನೆಲೆಗೊಂಡಿತು. ಇದುವರೆಗೆ ಯಾವ ಮಂತ್ರಿಯು ತಪ್ಪುಮಾಡಿದರೆ ಅವನನ್ನು ಮಾತ್ರವೇ ಕೆಲಸದಿಂದ ತೆಗೆದು ಹಾಕುತ್ತಿದ್ದುದು ಹೋಯಿತು. ಒಬ್ಬ ಮಂತ್ರಿಯನ್ನು ಹಿಡಿದು ಶಿಕ್ಷಿಸಿದರೆ, ಎಲ್ಲರನ್ನೂ ಶಿಕ್ಷೆ ಮಾಡಿದಂತೆ ಮಂತ್ರಿಗಳೆಲ್ಲರೂ ಭಾವಿಸತೊಡಗಿದರು.

ಇಷ್ಟರಲ್ಲಿ, ಪ್ರತಿನಿಧಿಸಭೆಯವರಿಗುಂಟಾಗಿದ್ದ ಪ್ರಾಬಲ್ಯದ ದೆಸೆಯಿಂದ ಅವರಿಗೂ ಶ್ರೀಮಂತಸಭೆಯವರಿಗೂ ಮನಸ್ತಾಪವು ಹುಟ್ಟಿತು. ಆನ್ ರಾಣಿಯು ಪಟ್ಟಕ್ಕೆ ಬಂದಾಗ ಶ್ರೀಮಂತಸಭೆಯಲ್ಲಿ ೧೬೦ಮಂದಿ ಸದಸ್ಯರಿದ್ದರು. ಇವರಲ್ಲಿ ಬಹು ಮಂದಿ ಹ್ವಿಗ್ ಪಂಗಡದವರು. ೧೭೧೦ರಲ್ಲಿ ನಡೆದ ಪ್ರತಿನಿಧಿಗಳ ಚುನಾವಣೆಯಿಂದ ಪ್ರತಿನಿಧಿಸಭೆಯಲ್ಲಿ ಟೋರಿ ಪಂಗಡದವರು ಹೆಚ್ಚಾದರು. ಆದಕಾರಣ, ಎರಡು ಸಭೆಯವರಿಗೂ ಹೋರಾಟಕ್ಕಾರಂಭವಾಯಿತು. ಇದನ್ನು ತಪ್ಪಿಸುವುದಕ್ಕಾಗಿ ಶ್ರೀಮಂತಸಭೆಯಲ್ಲಿ ಕುಳ್ಳಿರುವಂತೆ ಟೋರಿ ಪಂಗಡದ ಹನ್ನೆರಡು ಮಂದಿ ಸಾಮಾನ್ಯರಿಗೆ ರಾಣಿಯು ಶ್ರೀಮಂತ ಪದವಿಯನ್ನು ಕೊಟ್ಟಳು. ಇದರಿಂದ ಶ್ರೀಮಂತಸಭೆಯಲ್ಲಿ ಹ್ವಿಗ್ ಪಂಗಡದವರು ಹೆಚ್ಚಾಗಿದ್ದುದು ತಪ್ಪಿ, ಟೋರಿ ಪಂಗಡದವರು ಹೆಚ್ಚಾದರು. ಬಳಿಕ ಹ್ವಿಗ್ ಪಂಗಡದವರು ಏನನ್ನೂ ಮಾಡುವುದಕ್ಕಿಲ್ಲವಾಯಿತು. ರಾಣಿಯು ಹೀಗೆ ಹನ್ನೆರಡು ಮಂದಿ ಶ್ರೀಮಂತರನ್ನು (Peers) ನೇಮಿಸಿದುದು ಶ್ರೀಮಂತರಿಗೆ ಸರಿಬೀಳದೆ ಇನ್ನು ಮುಂದಾದರೂ ಹೀಗಾಗದಿರಲೆಂಬ ಉದ್ದೇಶದಿಂದ ಶ್ರೀಮಂತ ಸಭೆಯಲ್ಲಿ ೧೮೪ಕ್ಕಿಂತಲೂ ಹೆಚ್ಚು ಮಂದಿ ಸದಸ್ಯರಿರಕೂಡದೆಂದು ಅವರು ಒಂದು ನಿಬಂಧನೆಯನ್ನು ವಿಧಿಸಿದರು. ಇದು ಆಚರಣೆಗೆ ಬಂದಿದ್ದರೆ ಇದರಿಂದ ಅತಿಮುಖ್ಯವಾದ ಎರಡು ಫಲಗಳುಂಟಾಗುತ್ತಿದ್ದುವು. (೧) ಪ್ರತಿನಿಧಿಸಭೆಯವರಿಗೂ, ಶ್ರೀಮಂತ ಸಭೆಯವರಿಗೂ, ವಿರೋಧವು ಹುಟ್ಟಿದಾಗ ಶ್ರೀಮಂತ ಸಭೆಯವರು ಪ್ರತಿನಿಧಿ ಸಭೆಯವರ ಅಭಿಮತವನ್ನನುಸರಿಸಿ ನಡೆಯುವಂತೆ ಮಾಡುವುದು ಮಂತ್ರಿಗಳಿಗೆ ಅಸಾಧ್ಯವಾಗುತ್ತಿತ್ತು. ಆದಕಾರಣ, ಆಡಳಿತಗಳ ವಿಚಾರಗಳಲ್ಲಿ ಶ್ರೀಮಂತಸಭೆಯವರಿಗೆ ಪ್ರಾಬಲ್ಯ ಉಂಟಾಗುತ್ತಿತ್ತು. (೨) ಪ್ರತಿನಿಧಿಸಭೆಯವರಿಗೆ ಶ್ರೀಮಂತಪದವಿಯನ್ನು ಕರುಣಿಸಿ, ಅವರನ್ನು ಶ್ರೀಮಂತಸಭೆಯ ಸದಸ್ಯರನ್ನಾಗಿ ಮಾಡುವುದು ಅಸಾಧ್ಯವಾಗುತ್ತಿತ್ತು.

ಆದರೆ ಪ್ರತಿನಿಧಿಸಭೆಯುವರು ಜಾಗರೂಕರಾಗಿದ್ದು ಇದಕ್ಕೆ ಅವಕಾಶವನ್ನು ಕೊಡದೆ ತಮ್ಮ ಪ್ರಾಮುಖ್ಯತೆಯನ್ನು ಕಾಪಾಡಿಕೊಂಡರು. ಪ್ರತಿನಿಧಿಸಭೆಯುವರೇ ರಾಷ್ಟ್ರದಲ್ಲೆಲ್ಲಾ ಪ್ರಾಬಲ್ಯವನ್ನು ಹೊಂದಿದರು. ಪ್ರಭುತ್ವ ಕ್ರಮವನ್ನು ನಿರ್ದೇಶಿಸುತ್ತಿದ್ದವರು ಅವರೇ ಹೊರತು ದೊರೆಯಲ್ಲ.

---

## ಹತ್ತೊಂಬತ್ತನೆಯ ಪ್ರಕರಣ.

### ದೊರೆಯು ಅಡ್ಡಿಬರುವುದರಿಂದ ಕಾರ್ಯಗಳ ವೈಪರೀತ್ಯ.

ಮೊದಲನೆಯ ಜಾರ್ಜ್ ದೊರೆಗೆ ಪಟ್ಟವಾದಾಗಿನಿಂದ ಪಿಟ್ಟನಿಗೆ ಪ್ರಧಾನ ಮಂತ್ರಿತ್ವವಾಗುವವರೆಗೂ, ಅರ್ಲ್ ಮುಂತಾದ ದೊಡ್ಡಮನುಷ್ಯರ ಪ್ರಾಬಲ್ಯಕ್ಕೆ ಗೊತ್ತು ಗುರಿಯೇ ಇರಲಿಲ್ಲ; ಕೊನೆಗೆ ರಾಜಕೀಯವಿಚಾರವೆಲ್ಲಾ ಸಂಪೂರ್ಣವಾಗಿ ಅವರಕೈಯಲ್ಲಿಯೇ ಇತ್ತೆಂದು ಹೇಳಿದರೂ ಅತಿಶಯೋಕ್ತಿಯಾಗದು. ಮೂರನೆಯ ಹೆನ್ರಿ ದೊರೆ, ಎರಡನೆಯ ರಿಚರ್ಡ್ ದೊರೆ, ಇವರುಗಳ ಕಾಲದಲ್ಲಿ ಈ ದೊಡ್ಡಮನುಷ್ಯರು ಬಹಳ ಪ್ರಬಲರಾಗಿದ್ದುದೇನೋ ನಿಜ. ಆದರೂ ೧೭೧೪ರಿಂದ ಹಿಡಿದು ೧೭೮೩ರ ವರೆಗೆ ಈ ದೊಡ್ಡಮನುಷ್ಯರಿಗೆ ಇದ್ದಷ್ಟು ಪ್ರಾಬಲ್ಯವು ಹಿಂದೆ ಯಾವಾಗಲೂ ಇರಲಿಲ್ಲ; ರಾಜ್ಯದ ಆಡಳಿತವೆಲ್ಲಾ ಅವರ ಕೈಯಲ್ಲಿಯೇ ಇತ್ತು. ಅವರಿಗೆ ಇದಿರಾಳುಗಳೇ ಇರಲಿಲ್ಲ. ಈ ದೊಡ್ಡಮನುಷ್ಯರ ಪ್ರಾಬಲ್ಯವು ಈಗಿನಂತೆ ವೃದ್ಧಿಯಾಗುವುದಕ್ಕೆ ಹಿಂದೆ ಯಾವಾಗಲೂ, ದೊರೆಯು ಅವಕಾಶವನ್ನು ಕೊಟ್ಟಿರಲಿಲ್ಲ. ಆದರೂ, ಮುಂದೆ ಇವರ ಪ್ರಾಬಲ್ಯವು ನಿಂತು ಹೋಗಿ ಮಹಾಜನರಿಗೆ ಪ್ರಾಮುಖ್ಯತೆಯು ಬಂತು. ಯಾವ ದೇಶದ ಚರಿತ್ರೆಯಲ್ಲಿಯೂ ಕೂಡ, ಮೊದಲು ಪ್ರಾಬಲ್ಯವು ದೊರೆಗೂ, ಬಳಿಕ ಪ್ರಾಮುಖ್ಯತೆಯು ದೊಡ್ಡಮನುಷ್ಯರಿಗೂ ಬಂದು, ಕೊನೆಗೆ ಮಹಾಜನರು ಪ್ರಮುಖರಾಗುವುದೇ ಸ್ವಾಭಾವಿಕ. ಗ್ರೀಸಿನಲ್ಲಿಯೂ, ರೋಮಿನಲ್ಲಿಯೂ ಹೀಗೆಯೇ ನಡೆಯಿತು; ಇಂಗ್ಲೆಂಡಿನಲ್ಲಿಯೂ ಹೀಗೆಯೇ ನಡೆಯಬೇಕಾಯಿತು.

ವಿಲಿಯಮನಿಗೆ ಆಹ್ವಾನವನ್ನು ಕಳುಹಿಸಿ ೧೬೮೮ನೆಯ ಇಸವಿಯಲ್ಲಿ ನಡೆದ ರಾಜ್ಯವಿಪ್ಲವಕ್ಕೆ ಕಾರಣಭೂತರಾದವರು ಈ ದೊಡ್ಡಮನುಷ್ಯರೇ. ವಿಲಿಯಂ ದೊರೆಯು ಪಂಗಡದ ಆಧಿಪತ್ಯವನ್ನು ಏರ್ಪಡಿಸುವಂತೆ ನಿರ್ಬಂಧಿಸಿದುದೂ ಈ ದೊಡ್ಡಮನುಷ್ಯರು ಪ್ರತಿನಿಧಿಸಭೆಯ ಮುಖಾಂತರವಾಗಿ

ಪ್ರಯೋಗಿಸಿದ ಪ್ರಾಬಲ್ಯದಿಂದಲೇ. ಅಂತು, ಪ್ರತಿನಿಧಿಸಭೆಯವರು ಪ್ರಮುಖರಾಗುವವರೆಗೂ, ಈ ದೊಡ್ಡಮನುಷ್ಯರ ಪ್ರಾಬಲ್ಯವು ಸಾಗಿತು ; ಪ್ರತಿನಿಧಿಸಭೆಗೂ, ಶ್ರೀಮಂತಸಭೆಗೂ ಪರಸ್ಪರವಾಗಿ ಸ್ನೇಹಭಾವವಿತ್ತು. ಆದರೂ "ಐಲ್ಸ್‌ಬರಿ ಪಿಟಿಷನ್" (Aylesbury Petition) ಎಂಬ ಅರ್ಜಿಯಿಂದ ಶ್ರೀಮಂತಸಭೆಯು ನ್ಯಾಯಸ್ಥಾನವಾಗಿದ್ದುದು ತಪ್ಪಿ ಹೋದಾಗಲೂ "ಪಿಯರೇಜ್ ಬಿಲ್ಲಿ" (Peerage Bill) ನಿಂದ ಪ್ರತಿನಿಧಿಸಭೆಯವನನ್ನು ಶ್ರೀಮಂತನನ್ನಾಗಿಮಾಡಿ ಸಾಮಂತಸಭೆಯಲ್ಲಿ ಕುಳ್ಳಿರಿಸಲಾಗದೆಂದು ವಿಧಾಯಕವಾದಾಗಲೂ—ಈ ಎರಡು ವೇಳೆಗಳಲ್ಲಿ ಹೊರತು ಉಳಿದ ವೇಳೆಗಳಲ್ಲಿ ಎರಡು ಸಭೆಯವರಿಗೂ ಪರಸ್ಪರವಾಗಿ ಸೌಹಾರ್ದಭಾವವಿತ್ತು. ಮೊದಲನೆಯ ಜಾರ್ಜ್ ದೊರೆಯ ಕಾಲದಲ್ಲಿ ಟೋರಿ ಪಂಗಡದವರ ಪ್ರಾಬಲ್ಯವು ಅಡಗಿದ ಮೇಲಂತೂ ಎರಡುಸಭೆಯವರಿಗೂ ಪರಸ್ಪರವಾಗಿ ಯಾವ ಭಿನ್ನಭಾವವೂ ಹುಟ್ಟಲೇಇಲ್ಲ.

ಹೀಗೆ, ದೊಡ್ಡಮನುಷ್ಯರು ಪ್ರಬಲರಾಗಿದ್ದುದಕ್ಕೆ ಕಾರಣವಿತ್ತು. ರಾಜಕೀಯ ವಿಚಾರಗಳು ಶಕ್ತರಾದವರ ಕೈಯಲ್ಲಿರುವುದು ಸ್ವಾಭಾವಿಕ. ಹದಿನೆಂಟನೆಯ ಶತಮಾನದಲ್ಲಿ ಹ್ವಿಗ್ ಪಂಗಡದ ಶ್ರೀಮಂತರು ಬಹಳ ಧನಿಕರಾಗಿಯೂ ಶಕ್ತರಾಗಿಯೂ ಇದ್ದರು. ರಾಜ್ಯದಲ್ಲಿ ಅವರಿಗೆ ಸಮಾನರಾದವರಾರೂ ಇರಲಿಲ್ಲ. ಕೈಗಾರಿಕೆಯು ವೃದ್ಧಿಯಾದ ಮೇಲೆ ಅವರನ್ನು ಮೀರಿಸುವ ಹಣಗಾರರು ಪ್ರಬಲರಾದರು. ಅದಕ್ಕೆ ಮೊದಲು ಈ ಶ್ರೀಮಂತರೇ ಪ್ರಮುಖರಾಗಿದ್ದರು. ಇವರಿಗೂ, ಲಂಡನ್ ನಗರದ ವರ್ತಕರಿಗೂ, ಮೈತ್ರಿಯು ಇದ್ದುದದರಿಂದ "ಹ್ಯಾನೋವೇರಿಯನ್" (Hanoverian) ಮನೆತನದ ಜಾರ್ಜ್ ಮುಂತಾದ ದೊರೆಗಳಿಗೆ ಬಹಳ ಬತ್ತಾಸೆಯುಂಟಾಯಿತು. ಲಂಡನ್ ಕಾರ್ಪೊರೇಷನ್ನಿಗೂ ಪ್ರತಿನಿಧಿಸಭೆಗೂ ವಿವಾದವು ಹುಟ್ಟದಂದಿನಿಂದ ಈ ದೊಡ್ಡಮನುಷ್ಯರು ಹಿಂದೆಬೀಳುವುದಕ್ಕೆ ಮೊದಲಾಯಿತು. ಅದು ಹಾಗಿರಲಿ. ರಾಜಕೀಯ ವಿಚಾರದಲ್ಲಿ ಇವರಿಗೆ ಇದ್ದಷ್ಟು ತಿಳಿವಳಿಕೆಯು ಮತ್ತಾರಿಗೂ ಇರಲಿಲ್ಲ. ಅಂತು, ಹದಿನೆಂಟನೆಯ ಶತಮಾನದ ಆದಿಭಾಗದಲ್ಲಿ ಇವರ ಶಕ್ತಿಗೆ ಇದಿರೇ ಇರಲಿಲ್ಲ ; ಆಸ್ಥಾನದ ಮುಖ್ಯವಾದ ಅಧಿಕಾರಗಳೆಲ್ಲಾ ಅವರಿಗೇ ಇದ್ದುದರಿಂದ, ಅನೇಕವೇಳೆ ರಾಜನೂ ಕೂಡ ಅವರ ಕೋರಿಕೆಯ ಪ್ರಕಾರ ನಡೆಯಬೇಕಾಗಿತ್ತು. ಮಂತ್ರಿತ್ವವನ್ನು ಅವರಿಗೇ ವಹಿಸಿದ್ದುದರಿಂದ ರಾಜ್ಯದ ಆಡಳಿತಗಳನ್ನು ನಡೆಯಿಸುವವರೂ ಅವರೇ ಆಗಿದ್ದರು. ಪ್ರತಿನಿಧಿಸಭೆಯಲ್ಲಿ ಅವರ ಪಂಗಡದವರೇ ಹೆಚ್ಚಾಗಿದ್ದುದರಿಂದ, ಅಲ್ಲಿ ಕೂಡ ಅವರಿಗೆ ಪ್ರಾಮುಖ್ಯತೆಯು ಇತ್ತು. ಜನರೆಲ್ಲರೂ ಅವರ ಮಾತೇ ದೈವವಾಕ್ಯವೆಂದು ಭಾವಿಸು

ವಂತಿದ್ದುದರಿಂದ ಅವರಿಗೆ ಸಮಾಜದಲ್ಲಿಯೂ ವಿಶೇಷ ಪುರಸ್ಕಾರವು ದೊರೆಯುತ್ತಿತ್ತು. ಅವರೆಲ್ಲರೂ ಗ್ರಂಥಕರ್ತರಿಗೆ ಬಹಳ ಆಶ್ರಯವನ್ನು ಕೊಡುತ್ತಿದ್ದುದರಿಂದ ಅವರಿಗೆ ಲೇಖಕರ ಸನ್ಮಾನವೂ ದೊರೆಯುತ್ತಿತ್ತು. ವಿಶ್ವವಿದ್ಯಾನಿಲಯಗಳಲ್ಲಂತೂ, ಅವರ ಹೇಳಿಕೆಗೆ ಇದಿರೇ ಇರಲಿಲ್ಲ. ಸಾಮಾನ್ಯಜನರು ಓದುಬರೆಹಗಳನ್ನರಿಯದೆ ಮೂಢರಾಗಿದ್ದುದರಿಂದ, ಈ ದೊಡ್ಡ ಮನುಷ್ಯರ ಪ್ರಾಬಲ್ಯಕ್ಕೆ ಸಹಾಯವಾಯಿತು. ಆದುದರಿಂದ, ಇವರೆಲ್ಲರೂ ಅಪ್ರತಿಹತವಾದ ಅಧಿಕಾರವನ್ನು ನಡೆಯಿಸತೊಡಗಿದರು. ಆದರೂ, ಇದರಿಂದ ಜನರಿಗೆ ಸ್ವಲ್ಪ ಒಳ್ಳೆಯದಾಯಿತು. ೧೬೮೮ ರಲ್ಲಿ ನಡೆದ ರಾಜ್ಯವಿಪ್ಲವಕ್ಕೆ ಇವರೇ ಮೂಲಸ್ತಂಭವಾಗಿದ್ದರು. ೧೬೮೯ ರಲ್ಲಿ ಇವರ ಸಹಾಯದಿಂದ ವಿಧಿತವಾದ "ಟಾಲರೇಷನ್ ಆಕ್ಟಿ" (Toleration Act) ನಿಂದ, ಮತವಿಚಾರದಲ್ಲಿ ಜನರಿಗೆ ತೊಂದರೆಯು ತಪ್ಪಿ, ಯಾರು ಯಾವ ಮತವನ್ನು ಬೇಕಾದರೂ ಅವಲಂಬಿಸಲು ಅವಕಾಶವು ದೊರೆಯಿತು. ಅಲ್ಲದೆ, ಈ ದೊಡ್ಡಮನುಷ್ಯರ ಸಹಾಯದಿಂದ ಅನೇಕ ಯುದ್ಧಗಳು ಸಂಭವಿಸುವಂತಿದ್ದುದು ತಪ್ಪಿ ಜನರಿಗೆ ಎಷ್ಟೋ ಅನುಕೂಲವಾಯಿತು. ಆದರೂ, ಪರಿಣಾಮದಲ್ಲಿ ಇವರ ಪ್ರಾಬಲ್ಯಕ್ಕೆ ಹಾನಿಯುಂಟಾಯಿತು. ಪ್ರತಿನಿಧಿಸಭೆಯಲ್ಲಿ ಸರಿಯಾದ ಪ್ರತಿನಿಧಿತ್ವವನ್ನು ಪಡೆಯುವುದಕ್ಕಾಗಿ ಪ್ರಜೆಗಳೂ, ರಾಜ್ಯದ ಆಡಳಿತಗಳನ್ನು ನಡೆಯಿಸುವುದರಲ್ಲಿ ಹೆಚ್ಚು ಅಧಿಕಾರವನ್ನು ಪಡೆದುಕೊಳ್ಳುವುದಕ್ಕಾಗಿ ದೊರೆಯೂ, ಏಕ ಕಾಲದಲ್ಲಿ ಇವರನ್ನು ಕಾಡತೊಡಗಿದರು.

ಮೊದಲನೆಯ ಮತ್ತು ಎರಡನೆಯ ಜಾರ್ಜ್ ದೊರೆಗಳ ಕಾಲದಲ್ಲಿ ಚೆನ್ನಾಗಿ ವೃದ್ಧಿಹೊಂದಿದ್ದ ಸಂಗಡದ ಆಧಿಪತ್ಯವನ್ನು ಧ್ವಂಸಮಾಡಬೇಕೆಂಬ ಉದ್ದೇಶದಿಂದ, ಹಟವಾದಿಯಾದ ಮೂರನೆಯ ಜಾರ್ಜ್ ದೊರೆಯು ಸಿಂಹಾಸನವನ್ನೇರಿದನು. ಹೀಗೆ ಮಾಡುವುದರಿಂದ ಪ್ರಜೆಗಳಿಗೆ ಎಷ್ಟೋ ಉಪಕಾರ ಮಾಡಿದಂತಾಗುವುದೆಂದು ಆತನಿಗೆ ಕೆಲವರು ದೊಡ್ಡ ಮನುಷ್ಯರು ಸಲಹೆಗಳನ್ನು ಬೇರೇ ಕೊಟ್ಟರು. ಟೋರಿ ಪಂಗಡದವರಿಗೂ, ಅಸಂತುಷ್ಟರಾಗಿದ್ದ ಕೆಲವು ಮಂದಿ ಹ್ವಿಗ್ ಪಂಗಡದವರಿಗೂ, ಹೀಗಾಗುವುದು ಬಹಳ ಇಷ್ಟವಾಗಿತ್ತು. ಇದಲ್ಲದೆ, ೧೭೪೫ ರಲ್ಲಿ ಎರಡನೆಯ ಜೇಮ್ಸ್ ದೊರೆಯ ಮಗನಾದ ಛಾರಲ್ಸನು (Charles the Pretender) ಸಂಪೂರ್ಣವಾಗಿ ವಿಜಿತನಾದುದರಿಂದ, ಸ್ಟ್ಯುಯರ್ಟ್ ಸಂತತಿಯವರು ಮತ್ತೊಮ್ಮೆ ಸಿಂಹಾಸನಕ್ಕೆ ಬರಬಹುದೆಂದು ಕುತೂಹಲಪಡುತ್ತಿದ್ದ ಹಲವು ಮಂದಿ ಟೋರಿ ಪಂಗಡದವರು ನಿರಾಶರಾಗಿ ಜಾರ್ಜ್ ದೊರೆಯ ಕಡೆಗೆ ಸೇರಿದರು. ಇದರ ಮೇಲೆ ಜಾರ್ಜ್ ದೊರೆಯು

ಬಾಲಕನಾಗಿದ್ದಾಗಿನಿಂದಲೂ ಟೋರಿ ಪಂಗಡದವರ ಕೈಯಿಂದಲೇ ವಿದ್ಯಾಭ್ಯಾಸ ವನ್ನು ಪಡೆದಿದ್ದನು.; ಆದಕಾರಣ, ತಾನು ದೇಶಭಕ್ತಿಯುಕ್ತನಾಗಿ ಚೆನ್ನಾಗಿ ಪ್ರಭುತ್ವಮಾಡುವುದಕ್ಕೆ ಹ್ವಿಗ್ ಪಂಗಡದವರು ಅಡಚಣೆಯನ್ನುಂಟುಮಾಡುವ ರೆಂದು ಬಗೆದು, ಅವನು ಅವರನ್ನು ನಿಗ್ರಹಿಸಲುದ್ಯುಕ್ತನಾದನು. ಸಾಲದು ದಕ್ಕೆ, ಇಂತಹ ಭಾವನೆಗಳಿಂದಲೇ ಕೂಡಿದ್ದ ಲಾರ್ಡ್ ಬ್ಯೂಟ್ (Lord Bute) ಎಂಬಾತನು ದೊರೆಗೆ ಮಂತ್ರಾಲೋಚನೆಯನ್ನು ಹೇಳತೊಡಗಿದನು.

ಆದರೂ ಕೂಡ, ಎಲ್ಲಾ ದೊಡ್ಡ ಅಧಿಕಾರಗಳಲ್ಲಿಯೂ ತಾವೇ ತಾವಾಗಿ ವಿಜೃಂಭಿಸುತ್ತಿದ್ದ ಹ್ವಿಗ್ ಪಂಗಡದವರ ಪ್ರಾಬಲ್ಯವನ್ನು ಅಡಗಿಸುವುದು ಸುಲಭ ಕಾರ್ಯವಾಗಿರಲಿಲ್ಲ. ಅವರು ಮಾತ್ರ ಐಕಮತ್ಯದಿಂದ ಇದ್ದಿದ್ದರೆ ದೊರೆಯ ಪ್ರಯತ್ನವು ಏನೇನೂ ಸಾಗುತ್ತಿರಲಿಲ್ಲ. ಪ್ರತಿನಿಧಿಸಭೆಯಲ್ಲಿಯೂ, ಶ್ರೀಮಂತ ಸಭೆಯಲ್ಲಿಯೂ ಹ್ವಿಗ್ ಪಂಗಡದವರಿಗೆ ಬಹಳ ಪ್ರಾಬಲ್ಯವಿತ್ತು. ಮುಖ್ಯ ಪ್ರಧಾನನಾದ ಪಿಟ್ಟನು ಬಹಳ ದರ್ಪದಿಂದ ಜನರಿಗೆ ಅಚ್ಚುಮೆಚ್ಚಾಗುವಂತೆ ಆಡಳಿತಗಳನ್ನು ನಡೆಯಿಸುತ್ತಿದ್ದನು. ಆದುದರಿಂದ ದೊರೆಯು ಹ್ವಿಗ್ ಪಂಗಡ ದವರ ಪ್ರಾಬಲ್ಯವನ್ನು ಮುರಿಯುವುದು ಅಸಾಧ್ಯವಾಗಿತ್ತು. ಆದರೇನು? ಸ್ವಲ್ಪ ಕಾಲದಲ್ಲಿಯೇ ಹ್ವಿಗ್ ಪಂಗಡದ ಶ್ರೀಮಂತರಲ್ಲಿ ಐಕಮತ್ಯವು ತಪ್ಪಿತು; ಅನೇಕ ಪಂಗಡಗಳು ಹುಟ್ಟಿದುವು; ಅವರು ಬಲಶಾಲಿಗಳಾಗಿರುವಂತೆ ಮೇಲೆ ಕಂಡು ಬರುತ್ತಿದ್ದರೂ ವಸ್ತುತಃ ದುರ್ಬಲರಾಗಿದ್ದರು. ಸಮರ್ಥನಾದ ಜಾರ್ಜ್ ದೊರೆಯು ಈ ಮರ್ಮವನ್ನರಿತುಕೊಂಡು ತನ್ನ ಉದ್ದೇಶವನ್ನು ಸಾಧಿಸಿ ಕೊಳ್ಳಲು ಪ್ರಯತ್ನ ಮಾಡಿದನು.

ಹ್ವಿಗ್ ಪಂಗಡಕ್ಕೆ ಸೇರಿ ಬಹಳ ಪ್ರಮುಖನಾಗಿದ್ದ ಪಿಟ್ಟನು ಕೆಲಸ ವನ್ನು ಬಿಡಬೇಕಾಯಿತು. ಫ್ರೆಂಚರ ಮೇಲಿನ ಯುದ್ಧದಲ್ಲಿ ಆತನ ಕಾರ್ಯದಕ್ಷತೆಯಿಂದ ಇಂಗ್ಲಿಷರಿಗೆ ಜಯವಾದಕಾರಣ, ಆತನಲ್ಲಿ ಜನರಿಗೆ ಬಹಳ ವಿಶ್ವಾಸವು ಹುಟ್ಟಿತು. ಬಳಿಕ ಪಿಟ್ಟನು ಸ್ಪೇನಿನವರ ಮೇಲೆ ಯುದ್ಧ ಮಾಡಲಪೇಕ್ಷಿಸಿದನು. ಆತನ ಸಲಹೆಯು ಸರಿಯಾದುದಾಗಿತ್ತು. ಆದರೂ ಜಾರ್ಜ್ ದೊರೆಯು ಇದಕ್ಕೆ ಸಮ್ಮತಿಸಲಿಲ್ಲ. ಆದುದರಿಂದ ಪಿಟ್ಟನು ಕೆಲಸಕ್ಕೆ ರಾಜಿನಾಮೆಕೊಟ್ಟು ಹೊರಟುಹೋದನು.

ಈ ಮಧ್ಯದಲ್ಲಿ ದೊರೆಯು ಕೆಲವರಲ್ಲಿ ಸ್ನೇಹವನ್ನು ಬಳಯಿಸಿದನು. ಅವರು ಹ್ವಿಗ್ ಪಂಗಡಕ್ಕಾಗಲೀ, ಟೋರಿ ಪಂಗಡಕ್ಕಾಗಲೀ, ಸೇರದೆ ನ್ಯೂನತೆಗಳನ್ನೆಲ್ಲಾ ತಿಳಿಸಿ ಒಂದು ಸಣ್ಣ ಪುಸ್ತಕವನ್ನು ಬರೆದನು. ದೊರೆಯ ಮಿತ್ರರು ಮಂತ್ರಿಗಳ ಸಲಹೆಗೆ ವಿರೋಧವಾಗಿ ಓಟುಗಳನ್ನು

ಕೊಡಲಾರಂಭಿಸಿದರು. ಇವರು, ಮಂತ್ರಿಗಳು ನಡೆಯಿಸಬೇಕೆಂದಿದ್ದ ಕಾರ್ಯಗಳಿಗೆ ವಿರೋಧವಾಗಿ ಓಟುಗಳನ್ನು ಕೊಟ್ಟು ಅವರ ಕೆಲಸಕ್ಕೆ ಅಡಚಣೆಯನ್ನುಂಟುಮಾಡತೊಡಗಿದರು. ಈ ವಿಧವಾದ ಕಿರುಕುಳವನ್ನು ತಾಳಲಾರದೆ ಹ್ವಿಗ್ ಪಂಗಡದ ಮಂತ್ರಿಗಳು ಒಬ್ಬೊಬ್ಬರಾಗಿ ಕೆಲಸವನ್ನು ಬಿಡಬೇಕಾಯಿತು. ಲಾರ್ಡ್‌ನ್ಯೂಕ್ಯಾಸಲನೂ (Lord Newcastle) ಕೆಲಸಕ್ಕೆ ರಾಜಿನಾಮೆಕೊಟ್ಟನು.

ಬಳಿಕ, ಲಾರ್ಡ್ ಬ್ಯೂಟನು 'ಪ್ರೀಮಿಯರ್' (Premier) ಎಂಬ ಮುಖ್ಯ ಮಂತ್ರಿಯಾದನು. ಆತನು ಫ್ರಾನ್ಸ್ ದೇಶದವರೊಡನೆ ಸಮಾಧಾನಮಾಡಿ ಕೊಂಡನು. ಇದರಿಂದ, ಜನರಿಗೆ ಬಹಳ ಅತೃಪ್ತಿಯಾಯಿತು. ತನ್ನ ಹೇಳಿಕೆಯಂತೆ ನಡೆದುಕೊಳ್ಳುವವರೇ ಮಂತ್ರಿಗಳಾಗಿರಬೇಕೆಂಬುದೇ ಜಾರ್ಜ್ ದೊರೆಯ ಸಂಕಲ್ಪವಾಗಿತ್ತು. ಈಗ, ಅದಕ್ಕೆ ಅನುಸಾರವಾದವರೇ ಮಂತ್ರಿಗಳಾಗಿದ್ದುದರಿಂದ, ದೊರೆಯು ಅವರೆಲ್ಲರಿಗೂ ತುಂಬಾ ಒತ್ತಾಸೆಕೊಡಲಾರಂಭಿಸಿದನು. ಮಂತ್ರಿತ್ವವನ್ನು ಬಿಟ್ಟ ನ್ಯೂಕ್ಯಾಸಲ್ ಮುಂತಾದವರನ್ನು ಅಲ್ಲಿಗೂ ಸುಮ್ಮನೆ ಬಿಡದೆ ಅವರ ಲಾರ್ಡ್‌ಲೆಫ್ಟಿನೆಂಟ್ (Lord-lieutenant) ಅಧಿಕಾರವನ್ನು ಕಿತ್ತು ಕೊಂಡನು. ಹ್ವಿಗ್ ಪಂಗಡದವರನ್ನೆಲ್ಲಾ ಅಧಿಕಾರಗಳಿಂದ ಓಡಿಸಿದರೂ ಅವನ ಕೋಪವುಬೇರೇ ಅಡಗಲಿಲ್ಲ. ಈ ವೇಳೆಗೆ ಲಾರ್ಡ್ ಬ್ಯೂಟನಮೇಲೆ ಬಹಳ ಅಸಮಾಧಾನವು ಹುಟ್ಟಿತು. ಪ್ರಜೆಗಳು ಅಸಂತುಷ್ಟರಾದ ಮೇಲೆ ಇನ್ನು ಅಧಿಕಾರದಲ್ಲಿರುವುದು ಸರಿಯಲ್ಲವೆಂದು ತಿಳಿದು ಬೇರೆಮಾರ್ಗವಿಲ್ಲದೆ ಬ್ಯೂಟನು ಕೆಲಸಕ್ಕೆ ರಾಜಿನಾಮೆಯನ್ನು ಕೊಟ್ಟನು. ಪಂಗಡದಲ್ಲಿ ದ್ವೇಷಕಟ್ಟಿಕೊಳ್ಳುವುದು ಕೆಟ್ಟದೆಂಬುದು ಜಾರ್ಜ್ ದೊರೆಗೆ ಆಗ ಗೊತ್ತಾಗಿರಬೇಕು. ಮುಂದೆ ಗ್ರೆನ್‌ವಿಲ್ ಎಂಬಾತನು ಪ್ರಧಾನಸಚಿವನಾದನು. ಬ್ಯೂಟನು ದೊರೆಗೆ ಆಪ್ತನಾಗಿಯೇ ಇದ್ದನು. ಗ್ರೆನ್‌ವಿಲನು ತನ್ನ ಹೇಳಿಕೆಯನ್ನೂ, ಬ್ಯೂಟನ ಅಭಿಮತವನ್ನೂ ಅನುಸರಿಸಿ ನಡೆಯಬೇಕೆಂದು ದೊರೆಯ ಕೋರಿಕೆಯಾಗಿತ್ತು.

ಹ್ವಿಗ್ ಪಂಗಡದವರು ಒಕ್ಕಟ್ಟಾಗಿನಿಂತು ಟೋರಿ ಪಂಗಡದವರಿಗೂ ದೊರೆಯ ಸ್ನೇಹಿತರಿಗೂ ಪ್ರತಿಭಟಿಸಿದ್ದರೆ, ದೊರೆಯು ಅವರೆಲ್ಲರನ್ನೂ ಏಕೀಭಾವದಿಂದ ಕಂಡು ಸನ್ಮಾನಮಾಡಬೇಕಾಗುತ್ತಿತ್ತು. ಆದರೆ ಅವರು ಹೀಗೆ ಮಾಡಲಿಲ್ಲ. ಈಮಧ್ಯದಲ್ಲಿ ದೊರೆಯ ಹೇಳಿಕೆಗೆ ಕಿವಿಗೊಟ್ಟು, ಅಮೇರಿಕದಲ್ಲಿ ವಸತಿಗಳನ್ನು ಕಲ್ಪಿಸಿಕೊಂಡಿದ್ದ ಬ್ರಿಟಿಷ್ ಜನರಿಗೆ ಕಂದಾಯವನ್ನು ಹಾಕಬೇಕೆಂದು ಪ್ರಯತ್ನಪಟ್ಟರು. ಹೀಗೆ ಮಾಡುವುದು, 'ತಾವಾಗಲೀ ತಮ್ಮ

ಪ್ರತಿನಿಧಿಗಳಾಗಲೀ ಸಮ್ಮತಿಪಡದೆ ಇರುವವರೆಗೆ ಕಂದಾಯುವನ್ನು ಹಾಕ ಕೂಡದು' ಎಂಬ ನಿಯಮಕ್ಕೆ ವಿರೋಧವಾಗಿತ್ತು. ಆದುದರಿಂದ ವಿಲ್ಕ್ಸ ಎಂಬಾತನು ಅವರೊಡನೆ ವಿವಾದಮಾಡಿದನು. ನ್ಯಾಯಸ್ಥಾನಗಳವರು ಕೂಡ ಸ್ವಾಸ್ಥ್ಯಗಳಿಗೆ ತೆರಿಗೆಯನ್ನು ಹಾಕುವುದಕ್ಕೆ ಸಮ್ಮತಿಸಲಿಲ್ಲ.

ಜಾರ್ಜ್ ದೊರೆಯು ಹ್ವಿಗ್ ಪಂಗಡವರಲ್ಲಿ ದ್ವೇಷವನ್ನು ಕಟ್ಟಿಕೊಳ್ಳುವುದು ಸರಿಯಲ್ಲವೆಂದೆಣಿಸಿದನು. ಅವರೆಲ್ಲರೂ ಐಕಮತ್ಯವಾಗಿ ನಿಂತು ರಾಜನ ಸೇವೆಗೆ ಬಂದಿದ್ದರೆ ಅವನಿಗೆ ಸಂತೋಷವೇ ಆಗುತ್ತಿತ್ತು. ಆದರೆ ಅವರು ಬೇರೆ ಹಾಗೆ ಮಾಡಲಿಲ್ಲ. ಜಾರ್ಜ್ ದೊರೆಯು, ಪಿಟ್ಟಗೆ ಅನೇಕ ಆಶೋತ್ತರಗಳನ್ನು ಕಳ್ಳಿಸಿ ಗ್ರೆನ್‌ವಿಲನಿಗೆ ಸಹಾಯ ಮಾಡಬೇಕೆಂದು ಎಷ್ಟೋಸಾರಿ ಹೇಳಿಕಳುಹಿಸಿದನು. ಆದರೂ ಪಿಟ್ಟನು ಬರಲಿಲ್ಲ. ಹ್ವಿಗ್ ಪಂಗಡದವರು ಅನೇಕ ಗುಂಪುಗಳಾಗಿ ವಿಭಾಗವಾಗಿದ್ದರಷ್ಟೆ? ಈ ಗುಂಪುಗಳಲ್ಲಿ ಬೆಡ್‌ಫರ್ಡನೂ, ಅವನ ಮಿತ್ರರೂ ಒಂದು ಪಂಗಡವನ್ನು ಕಟ್ಟಿಕೊಂಡಿದ್ದರು. ಪಿಟ್ಟನು ನಿರಾಕರಿಸಿದ ಮೇಲೆ ಇವರು ಸಹಾಯಕ್ಕೆ ಬಂದರು. ಇಷ್ಟರಲ್ಲಿ ಪ್ರಧಾನಸಚಿವನಾಗಿದ್ದ ಗ್ರೆನ್‌ವಿಲ್ಲನಿಗೂ ಜಾರ್ಜ್ ದೊರೆಗೂ, ಮನಸ್ತಾಪವು ಹುಟ್ಟಿ ಗ್ರೆನ್‌ವಿಲ್ಲನು ಕೆಲಸವನ್ನು ಬಿಡಬೇಕಾಯಿತು. ಮುಂದೆ, ಐಕಮತ್ಯದಿಂದ ಕೂಡಿದ ಹ್ವಿಗ್ ಪಂಗಡದ ಮಂತ್ರಿತ್ವವನ್ನು ಕಲ್ಪಿಸಲು ಪ್ರಯತ್ನವು ನಡೆದು ಅದು ವಿಫಲವಾಯಿತು. ಬಳಿಕ ಜಾರ್ಜ್ ದೊರೆಯು ಹ್ವಿಗ್ ಪಂಗಡದ ರಾಕಿಂಘಾಂ ಎಂಬಾತನನ್ನೂ ಅವನ ಮಿತ್ರರನ್ನೂ ಮಂತ್ರಿತ್ವಕ್ಕೆ ತಂದನು. ಅವರೇನೋ ರಾಜ್ಯಭಾರದಲ್ಲಿದ್ದ ನ್ಯೂನತೆಗಳನ್ನು ಪರಿಹರಿಸಲು ಯತ್ನಿಸಿದರು. ಆದರೆ ಅವರು ಸಮರ್ಥರಲ್ಲದೇ ಇದ್ದುದರಿಂದಲೂ, ಹ್ವಿಗ್ ಪಂಗಡದವರಲ್ಲಿ ಮತ್ತಾರೂ ಅವರ ಸಹಾಯಕ್ಕೆ ಬಾರದೇ ಇದ್ದುದರಿಂದಲೂ, ದೊರೆಯ ಸ್ನೇಹಿತರು ಅವರನ್ನು ದ್ವೇಷಿಸುತ್ತಿದ್ದುದರಿಂದಲೂ, ಅತ್ತಕಡೆ ದೊರೆಯು ಅವರಿಗೆ ಸ್ವಾತಂತ್ರ್ಯವನ್ನು ಕೊಡದೆ ತೊಂದರೆಪಡಿಸುತ್ತಿದ್ದುದರಿಂದಲೂ, ಅವರ ಯತ್ನವು ಸಾಗಲಿಲ್ಲ. ಅಂತು, ಒಂದು ವರುಷದಲ್ಲಿ ಅವರ ಅಧಿಕಾರವು ಕೊನೆಗಂಡಿತು. ಬಳಿಕ ಉಭಯಪಕ್ಷದವರಿಂದಲೂ ಕೂಡಿದ್ದ ಮಂತ್ರಿತ್ವಕ್ಕಾರಂಭವಾಗಿ ಗ್ರಾಫ್ಟನ್ (Grafton) ಎಂಬಾತನು ಪ್ರಧಾನಸಚಿವನಾದನು. ಈಗ (ಛಾತಾಮಿನ ಅರ್ಲನಾಗಿದ್ದ) ಪಿಟ್ಟನು ಈತನಿಗೆ ಒತ್ತಾಸೆಕೊಡಲಾರಂಭಿಸಿದನು. ಇದು, ಬಹುಕಾಲ ಸಾಗಲಿಲ್ಲ. ಪಿಟ್ಟನು ಅಸ್ವಸ್ಥನಾದುದೇ ಇದಕ್ಕೆ ಕಾರಣ. ಆದರೂ, ದೊರೆಯು ಗ್ರಾಫ್ಟನನಿಗೆ ಪ್ರೋತ್ಸಾಹವನ್ನು ಕೊಟ್ಟು ಆತನು ಬೇಕಾದಂತೆ ವರ್ತಿಸಲು ಸಮ್ಮತಿಸಿದನು. ರಾಕಿಂಘಾಮನ ಕಾಲದಲ್ಲಂತೆಯೇ ಅಮೇರಿಕಾ ಖಂಡದಲ್ಲಿಯ ಸ್ವಾಸ್ಥ್ಯಗಳಿಗೆ ಕಂದಾಯುವನ್ನು

ಹಾಕುವ ಪ್ರಯತ್ನವು ಈತನ ಕಾಲದಲ್ಲಿಯೂ ನಡೆಯಿತು. ಇಷ್ಟರಲ್ಲಿ ಪ್ರತಿನಿಧಿಸಭೆಯವರು ಪ್ರತಿನಿಧಿಗಳನ್ನು ಆರಿಸುವುದರಲ್ಲಿ ಸ್ವಾತಂತ್ರ್ಯವಿರಬೇಕೆಂಬ ನಿಯಮವನ್ನು ಅನುಸರಿಸದೆ, ಮಿಡ್ಲಸೆಕ್ಸ್ ಷೈರಿನವರು ವಿಲ್ಕ್ಸ (Wilkes) ಎಂಬಾತನನ್ನು ತಮ್ಮ ಪ್ರತಿನಿಧಿಯಾಗಿ ಆರಿಸಕೂಡದೆಂದು ವಾದಿಸಿದರು. ಆತನನ್ನು ಮೂರು ಸಾರಿ ಆರಿಸಿದರೂ, ೧೧೪೩ ಓಟುಗಳು ಬಂದಿದ್ದ ಆತನನ್ನು ಸಭೆಗೆ ಸೇರಿಸಲು ಸಭೆಯವರು ಒಪ್ಪದೆ, ೨೯೬ ಓಟುಗಳು ಮಾತ್ರವೇ ಬಂದಿದ್ದ ಆತನ ಪ್ರತಿಕಕ್ಷಿಯಾದ ಲಟ್ರೆಲ್ (Colonel Luttrel) ಎಂಬಾತನನ್ನು ಪ್ರತಿನಿಧಿಯಾಗಿ ತೆಗೆದುಕೊಂಡರು. . ಇದರಿಂದ ಎಲ್ಲರಿಗೂ ಅಸಮಾಧಾನವಾಯಿತು. ಇದಾದ ಸ್ವಲ್ಪ ಕಾಲದ ಮೇಲೆ ಜೂನಿಯಸ್ ಎಂಬಾತನ ವ್ಯಂಗ್ಯೋಕ್ತಿಗಳನ್ನು ತಾಳಲಾರದೆ ಪ್ರಧಾನಸಚಿವನಾದ ಗ್ರಾಫ್ಟನನು ಕೆಲಸದಲ್ಲಿ ಬೇಸತ್ತು ಮಂತ್ರಿತ್ವದಿಂದ ನಿವೃತ್ತನಾದನು. ಬಳಿಕ ಟೋರಿ ಪಂಗಡದವನಾದ ಲಾರ್ಡ್ ನಾರ್ತನು ಆತನ ಸ್ಥಾನಕ್ಕೆ ಬಂದನು. ಈತನು ೧೭೭೦ ರಿಂದ ೧೭೮೨ ರ ವರೆಗೆ ಕೆಲಸದಲ್ಲಿದ್ದನು. ಈತನ ಕಾಲದಲ್ಲಿ ಅಮೇರಿಕಾದ ಸ್ವಾಸ್ಥ್ಯಗಳು ಕೈಬಿಟ್ಟುಹೋದುವು. ಇದರಿಂದ ಎಲ್ಲರಿಗೂ ಬಹಳ ಅಸಮಾಧಾನವಾಯಿತು. ಅಂತು, ಮೂರನೆಯ ಜಾರ್ಜ್ ದೊರೆಯ ಪ್ರಭುತ್ವವು ಜನರಂಜಕವಾಗಲಿಲ್ಲ. ದೊರೆಯು ತನಗೆ ಬೇಕಾದ ಪಂಗಡದವರನ್ನು ಮಂತ್ರಿತ್ವಕ್ಕೆ ನಿಯಮಿಸದಂತೆ ಮಾಡಬೇಕೆಂದು ಎಲ್ಲರಿಗೂ ಮನಸ್ಸಿಗೆ ಹತ್ತಿತು. ವಿಲ್ಕ್ಸ ಎಂಬಾತನ ವಿಚಾರದಲ್ಲಿ ಪ್ರತಿನಿಧಿಸಭೆಯವರು ನಡೆಯಿಸಿದ ಅನ್ಯಾಯದಿಂದಲೂ, ಆ ಸಭೆಯಲ್ಲಿ ನಡೆಯುತ್ತಿದ್ದ ಚರ್ಚೆಗಳನ್ನು ಪ್ರಜೆಗಳಿಗೆ ಗೊತ್ತಾಗದಂತೆ ಗುಪ್ತವಾಗಿಡುತ್ತಿದ್ದುದರಿಂದಲೂ, ಎಲ್ಲರಿಗೂ ಅಸಮಾಧಾನವಾಯಿತು. ದೊರೆಯ ನಿರಂಕುಶಪ್ರವರ್ತನೆಯು ಸಾಗದಂತೆ ಮಾಡುವುದಕ್ಕಾಗಿ ಪಾರ್ಲಿಮೆಂಟಿನವರು ನಿಯಮಿತರಾಗಿದ್ದರು. ಸದಸ್ಯರು ಇದನ್ನು ಮನಸ್ಸಿನಲ್ಲಿಟ್ಟುಕೊಂಡು ಜನರಿಗೆ ಕೃತಜ್ಞರಾಗಿರದೆ ವಿಪರೀತಾಚರಣೆಗೆ ಆರಂಭಿಸಿದರು ಈ ನ್ಯೂನತೆಯನ್ನು ಸರಿಪಡಿಸಬೇಕಾದರೆ ಸದಸ್ಯರ ಪ್ರಾಬಲ್ಯವನ್ನಡಗಿಸುವುದೇ ಮುಖ್ಯವಾದ ಮಾರ್ಗವೆಂದು ರಾಕಿಂಘಾಮನ ಕಡೆಯವರು ಹೇಳಿದರು. ಹೀಗಾಗಬೇಕಾದರೆ ಸಭೆಯನ್ನು ಸರಿಯಾಗಿ ಪರಿಷ್ಕರಿಸುವುದೇ ಮುಖ್ಯವಾದ ಮಾರ್ಗವೆಂದು ಪಿಟ್ಟನ ಕಡೆಯವರು ವಾದಿಸಿ, ಯಾವ ಯಾವ ಪರಿಷ್ಕರಣಗಳಾಗಬೇಕೆಂಬುದನ್ನೂ ಸೂಚಿಸಿದರು. ರಾಕಿಂಘಾಮನ ಕಡೆಗೆ ಸೇರಿದವರಲ್ಲಿ ಬರ್ಕ್ (Burke) ಎಂಬಾತನು ಮೂಲಸ್ತಂಭದಂತಿದ್ದನು. ಈತನು ರಾಜ್ಯಭಾರದಲ್ಲಿದ್ದ ನ್ಯೂನತೆಗಳನ್ನೆಲ್ಲಾ ತಿಳಿಸಿ

ಒಂದು ಸಣ್ಣ ಪುಸ್ತಕವನ್ನು ಬರೆದನು. ದೊರೆಯ ಮಿತ್ರರು ಮಂತ್ರಿಗಳ ಸೂಚನೆಗಳಿಗೆ ವಿರೋಧವಾಗಿ ಓಟುಗಳನ್ನು ಕೊಡುತ್ತಿದ್ದುದರಿಂದ ರಾಜ್ಯಭಾರವು ಕೆಡುವುದಕ್ಕವಕಾಶವಾಯಿತೆಂಬುದೂ, ಅವರ ಪ್ರಾಬಲ್ಯಕ್ಕೆ ದೊರೆಯು ಸೂತ್ರಧಾರನಾಗಿದ್ದುದರಿಂದ ಆತನ ಪ್ರಾಮುಖ್ಯತೆಯನ್ನು ತಗ್ಗಿಸಬೇಕೆಂಬುದೂ, ಬರ್ಕನ ಅಭಿಪ್ರಾಯಗಳು. ಈ ಮಧ್ಯೆ, ಅಮೇರಿಕಾದಲ್ಲಿ ನಡೆದ ಅನರ್ಥಗಳಿಂದ ಜನರೆಲ್ಲರೂ ಕುಪಿತರಾಗಿ ಬರ್ಕನ ಅನುಮತಿಗೆ ಬೆಂಬಲ ಉತ್ತೇಜನ ಕೊಟ್ಟರು. ೧೭೮೦ರಲ್ಲಿ, ಬಹಳ ಹೆಚ್ಚಾಗಿಯೂ ಹೆಚ್ಚುತ್ತಲೂ ಇದ್ದ ದೊರೆಯ ಅಧಿಕಾರವನ್ನು ತಗ್ಗಿಸುವುದು ಅವಶ್ಯವೆಂದು ಡನಿಂಗ್ ಎಂಬಾತನು ನಿರ್ಣಯ ಮಾಡಿದ್ದನು. ೨೩೩ ಜನರು ಅದನ್ನು ಅನುಮೋದಿಸಿದ್ದರು; ೨೧೫ ಜನರು ಅದಕ್ಕೆ ವಿರೋಧವಾಗಿ ಓಟುಗಳನ್ನು ಕೊಟ್ಟಿದ್ದರು. ಅಂತು, ಅನುಮೋದಿಸಿದವರ ಸಂಖ್ಯೆಯು ಹೆಚ್ಚಾಗಿದ್ದುದರಿಂದ ಅವನ ಸಲಹೆಗೆ ಪುರಸ್ಕಾರವು ದೊರೆಯಿತು. ಆದರೆ, ಅವಶ್ಯವಾಗಿ ನಡೆಯಬೇಕಾಗಿದ್ದ ಪರಿಷ್ಕರಣಗಳನ್ನೆಲ್ಲಾ ವಿಸ್ತಾರವಾಗಿ ಸೂಚಿಸಿ, ದೊರೆಯ ಯಾವ ಯಾವ ಅಧಿಕಾರಗಳನ್ನು ತೆಗೆದುಹಾಕಬೇಕೆಂಬುದನ್ನು ಗೊತ್ತು ಮಾಡಿ, ಬರ್ಕನು ತಂದಿದ್ದ ಬಿಲ್ಲಿಗೆ ದೊರೆಯ ಪಕ್ಷಪಾತಿಗಳು (ವಿರೋಧವಾಗಿ ಓಟುಗಳನ್ನು ಕೊಡುವುದರ ಮೂಲಕ) ವಿಘಾತವನ್ನುಂಟುಮಾಡಿದರು. ಆದರೇನು? ಮಾರನೆಯ ವರುಷ ಲಾರ್ಡ್ ನಾರ್ತನು ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟುದರಿಂದ, ರಾಕಿಂಘಾಮನು ಪ್ರಧಾನಸಚಿವನಾದನು; ಬರ್ಕನಿಗೆ ಅನುಕೂಲವಾಯಿತು. ಈ ಮಂತ್ರಿತ್ವದಲ್ಲಿ ಹ್ವಿಗ್ ಪಂಗಡದವರಲ್ಲಿ ಬಹಳ ಐಕಮತ್ಯವಿತ್ತು. ಆವಶ್ಯಕವಿಲ್ಲದ ಅಧಿಕಾರಗಳನ್ನೆಲ್ಲಾ ತೆಗೆದುಹಾಕಿ, ದೊರೆಗೆ ಯಾವ ಅನಾನುಕೂಲ್ಯವೂ ಆಗದೆ ಬಹಳ ಹಣವೂ ಮಿಗುವಂತೆ ಮಾಡಿದರು. ಸಿಕ್ಕಿದವರಿಗೆಲ್ಲಾ ಗೋಪ್ಯವಾಗಿ ಕೊಡುತಿದ್ದ ಪೆನ್ಷನ್ ಎಂಬ ವೇತನಗಳನ್ನು ನಿಲ್ಲಿಸಿದರು. ದೊರೆಯು ಸರಕಾರದಿಂದ ಕೆಲಸಗಳ ಗುತ್ತಿಗೆಯನ್ನು (Contract) ಪ್ರತಿನಿಧಿಸಭೆಯ ಸದಸ್ಯರಿಗೆ ಕೊಟ್ಟು, ಅದರಿಂದ ಅವರು ತನ್ನ ಕಡೆಗಿರುವಂತೆ ಮಾಡಿಕೊಂಡಿದ್ದನು. ಇದನ್ನು ತಪ್ಪಿಸುವುದಕ್ಕಾಗಿ ಇಂತಹ ಗುತ್ತಿಗೆದಾರರು ಪ್ರತಿನಿಧಿಸಭೆಗೆ ಬರಕೂಡದೆಂದು ವಿಧಿಸಿದರು. ಪ್ರತಿನಿಧಿಗಳ ಚುನಾವಣೆಯಲ್ಲಿ ದೊರೆಯ ಹೇಳಿಕೆಯು ನಡೆಯುತ್ತಿತ್ತು. ಹೇಗೆಂದರೆ—'ರೆವೆನ್ಯೂ' ಅಧಿಕಾರಿಗಳೆಲ್ಲರೂ ಪ್ರತಿನಿಧಿಗಳನ್ನು ಆರಿಸುವುದಕ್ಕೆ ಓಟುಗಳನ್ನು ಕೊಡಬಹುದಾಗಿತ್ತು. ಇವರ ಸಂಖ್ಯೆಯು ಸುಮಾರು ೧೧,೫೦೦ರವರೆಗಿದ್ದುದರಿಂದ ಸುಮಾರು ಎಪ್ಪತ್ತು ಬರೋಗಳಿಂದ ದೊರೆಯು ಅಪೇಕ್ಷಿಸಿದವರು ಪ್ರತಿನಿಧಿಗಳಾಗಿ ಬರುವಂತಾಗಿತ್ತು. ಇದನ್ನು ತಪ್ಪಿಸು

ವುದಕ್ಕಾಗಿ ದೊರೆಯ ಹೇಳಿಕೆಯಂತೆ ನಡೆಯುತ್ತಿದ್ದ ಈ ಅಧಿಕಾರಿಗಳು ಪ್ರತಿನಿಧಿತ್ವವಿಚಾರದಲ್ಲಿ ಓಟುಗಳನ್ನು ಕೊಡಲಾಗದೆಂದು ವಿಧಿಸಿದರು. ಈ ಪರಿಷ್ಕರಣದಿಂದ ಪ್ರತಿನಿಧಿಗಳನ್ನು ಆರಿಸುವ ವಿಷಯದಲ್ಲಿ ದೊರೆಯ ಅಧಿಕಾರವು ಬಹಳ ಕಡಿಮೆಯಾಗಿಹೋಯಿತು. ಈ ವೇಳಗೆ ರಾಕಿಂಘಾಮನು ಮೃತನಾದನು. ಹ್ವಿಗ್ ಪಂಗಡದವರಲ್ಲಿ ಐಕ್ಯಮತ್ಯವು ತಪ್ಪಿ ಅವರ ಪ್ರಾಬಲ್ಯವು ಕಡಿಮೆಯಾಯಿತು. ರಾಕಿಂಘಾಮನ ತರುವಾಯ, ಪಿಟ್ಟನ ಪಂಗಡದವನಾದ ಲಾರ್ಡ್ ಷೆಲ್‌ಬರ್ನ್ (Lord Shelburne) ಎಂಬಾತನು ಪ್ರಧಾನಸಚಿವನಾದನು ರಾಕಿಂಘಾಮನಿಗೆ ಸಂಪೂರ್ಣವಾಗಿ ಒತ್ತಾಸೆ ಕೊಡುತ್ತಿದ್ದ ಬರ್ಕ್ ಮತ್ತು ಫಾಕ್ಸ್ (Fox) ಎಂಬಿಬ್ಬರೂ, ರಾಜಕೀಯವಿಚಾರಗಳಲ್ಲಿ ತಮ್ಮ ಮನೋಭಾವಗಳೂ ಷೆಲ್‌ಬರ್ನ್ ಎಂಬಾತನ ಮನೋಭಾವಗಳೂ, ಒಂದೇ ಆಗಿದ್ದರೂ ಕೂಡ, ಆತನೊಡನೆ ಸೇರದೆ, ಅದುವರೆಗೂ ತಾವು ದೂಷಿಸುತ್ತಿದ್ದ ಲಾರ್ಡ್ ನಾರ್ತನ ಪಕ್ಷವನ್ನು ವಹಿಸಿದರು. ಇವರು ಹೀಗೆ ಒಂದು ಪಕ್ಷವನ್ನು ಬಿಟ್ಟು ಮತ್ತೊಂದು ಪಕ್ಷಕ್ಕೆ ಹೋದುದರಿಂದ, ಜನರಿಗೆ ಹ್ವಿಗ್ ಪಂಗಡದವರಲ್ಲಿದ್ದ ಗೌರವವು ಕಡಿಮೆಯಾಯಿತು. ಅವರು ಕ್ಷಣಿಕಚಿತ್ತರೆಂದು ಎಲ್ಲರೂ ಬೇಸರಪಟ್ಟರು.

ಫಾಕ್ಸ್ ಮತ್ತು ಲಾರ್ಡ್ ನಾರ್ತ್ ಎಂಬಿಬ್ಬರೂ ತಮ್ಮಿಂದ ದೊರೆಯ ಪ್ರಾಬಲ್ಯವು ಕಡಿಮೆಯಾದುದರಿಂದ, ತಾವು ದೊರೆಗಿಂತಲೂ ಹೆಚ್ಚಾಗಿ ಪ್ರಾಮುಖ್ಯತೆಯನ್ನು ಪಡೆದುಕೊಳ್ಳಲು ಯತ್ನಮಾಡಿದರು. ಇಂಡಿಯಾ ದೇಶವನ್ನಾಳುತಿದ್ದ ಈಸ್ಟ್ ಇಂಡಿಯಾ ಕಂಪೆನಿಯನ್ನು ಪರಿಷ್ಕರಿಸುವುದು ಅವಶ್ಯವಾಗಿತ್ತು. ಅದನ್ನು ಪರಿಷ್ಕರಿಸುವಂತೆ ನಟಿಸಿ, ತಾವು ಪ್ರಬಲರಾಗಬೇಕೆಂಬ ಉದ್ದೇಶದಿಂದ, ಅವರು ಒಂದು ತಂತ್ರವನ್ನು ಮಾಡಿದರು. ಕಂಪೆನಿಯವರು ಏಳು ಮಂದಿ ಕಮಿಷನರುಗಳಿಗೆ ಅಧೀನರಾಗಿರಬೇಕೆಂದೂ, ಅವರನ್ನು ಮೊದಲು ನಾಲ್ಕು ವರುಷಗಳ ವರೆಗೆ ಪಾರ್ಲಿಮೆಂಟಿನವರೂ, ಬಳಿಕ ದೊರೆಯೂ, ಆರಿಸಬೇಕೆಂದು, ಒಂದು ನಿಬಂಧನೆ (Bill) ಆಗಬೇಕೆಂದು ಫಾಕ್ಸನೂ, ನಾರ್ತನೂ, ಅಪೇಕ್ಷಿಸಿದರು. ಪಾರ್ಲಿಮೆಂಟಿನಲ್ಲಿ ತಮ್ಮ ಕಡೆಯವರೇ ಹೆಚ್ಚಾಗಿದ್ದುದರಿಂದ ಈ ಕಮಿಷನರುಗಳ ಕೆಲಸಕ್ಕೆ ತಾವೇ ನಿಯಮಿತರಾಗಬಹುದೆಂದೂ, ನಾಲ್ಕು ವರುಷಗಳಾದಮೇಲೆ ತಮ್ಮ ಮಿತ್ರರನ್ನೇ ಈ ಕೆಲಸಕ್ಕೆ ಆರಿಸುವಂತೆ ದೊರೆಯನ್ನು ನಿರ್ಬಂಧಿಸಿ, ಇಂಡಿಯಾ ದೇಶದ ವಿಷಯದಲ್ಲಿ ತಾವು ಏಕಾಧಿಪತ್ಯಮಾಡಲಾಗುವುದೆಂದೂ ಅವರ ತಾತ್ಪರ್ಯ. ಜಾರ್ಜ್ ದೊರೆಯು ಈ ಸಂಗತಿಯನ್ನರಿತುಕೊಂಡು, ಮೇಲೆ ಹೇಳಿದ ಇಂಡಿಯಾ ಬಿಲ್ಲನ್ನು ಆಚರಣೆಗೆ ತರಲು ಒಪ್ಪುವವರೆಲ್ಲರೂ ತನ್ನ ಶತ್ರುಗಳಾಗಬೇಕಾಗುವುದೆಂದು ಲಾರ್ಡ್

ಟೆಂಪಲ್ ಎಂಬಾತನೊಡನೆ ಹೇಳಿಕಳುಹಿಸಿದನು. ಇದರಿಂದ ಇಂಡಿಯಾ ಬಿಲ್ಲಿನ ಸೊಲ್ಲೇ ಅಡಗಿ ಹೋಯಿತು. ಫಾಕ್ಸ್, ಲಾರ್ಡ್ ನಾರ್ತ್ ಮುಂತಾದವರು ಕೆಲಸವನ್ನು ಕಳೆದುಕೊಂಡರು.

ಬಳಿಕ ಜಾರ್ಜ್ ದೊರೆಯು ಮೇಲೆ ಹೇಳಿದ ಪಿಟ್ಟನ ಮಗನಾದ ವಿಲಿಯಂ ಪಿಟ್ಟನಿಗೆ ಪ್ರಧಾನಮಂತ್ರಿತ್ವವನ್ನು ಕೊಟ್ಟು, ಅವನನ್ನು ತನ್ನ ಸಹಾಯಕ್ಕೆ ಕರೆದನು. ವಿಲಿಯಂ ಪಿಟ್ಟನ ಹೇಳಿಕೆಗೆ ವಿರೋಧವಾದ ಮನೋಭಾವವುಳ್ಳವರು ಪಾರ್ಲಿಮೆಂಟಿನಲ್ಲಿ ಬಹಳ ಹೆಚ್ಚಾಗಿದ್ದರು. ಆದರೂ ಪಿಟ್ಟನು ಎದೆಗೆಡದೆ ಅವರೊಡನೆ ಹೋರಾಡತೊಡಗಿದನು. ಆತನು ಪ್ರಜೆಗಳ ಪಕ್ಷವಾಗಿ ಎಷ್ಟು ಹೆಣಗಾಡುತ್ತಿದ್ದನೆಂಬುದು ಅವರಿಗೆ ಗೊತ್ತಾಯಿತು. ಬಳಿಕ, ಅವರೆಲ್ಲರೂ ಅವನಿಗೆ ಬತ್ತಾಸೆಕೊಟ್ಟರು; ಅಲ್ಲದೆ ತಮ್ಮ ಉದ್ಧಾರಕ್ಕಾಗಿ ಮನಸ್ಸುಕೊಟ್ಟು ಪಿಟ್ಟನ ಮೂಲಕ ಕಾರ್ಯಗಳನ್ನು ನಡೆಯಿಸಿದ ಜಾರ್ಜ್ ದೊರೆಯನ್ನು ಪ್ರೀತಿಸತೊಡಗಿದರು. ಮೂರನೆಯ ಜಾರ್ಜ್ ದೊರೆಗೆ ಜನಾನುರಾಗವು ದೊರೆತುದು ಅದೇ ಮೊದಲು. ಅಂತು ಪಿಟ್ಟಗೆ ಜಯವಾಯಿತು; ಫಾಕ್ಸ್ ಮುಂತಾದವರ ಪಕ್ಷವನ್ನು ವಹಿಸಿ ಪಿಟ್ಟನೊಡನೆ ಹೋರಾಡಿದ ೧೬೦ ಮಂದಿಗಳಿಗೆ ಸಭೆಯಿಂದ ಉಚ್ಚಾಟನೆಯಾಯಿತು. ಬಹುಮಂದಿ ಪಿಟ್ಟನ ಪಕ್ಷವನ್ನು ವಹಿಸಿದರು. ಹಿಂದೆ ಯಾವ ಪ್ರಧಾನಸಚಿವನಿಗೂ ಇಷ್ಟೊಂದು ಸಹಾಯವು ದೊರೆತಿರಲಿಲ್ಲ. ಈತನು ಚಿಕ್ಕವಯಸ್ಸಿನವನು ಆಗಿದ್ದರೂ ಬಹಳ ಸಮರ್ಥನಾಗಿದ್ದನು. ಅಲ್ಲದೆ ಈತನ ಮನೋಭಾವಗಳೂ, ಜಾರ್ಜ್ ದೊರೆಯ ಮನೋಭಾವಗಳೂ ಒಂದೇ ಆಗಿದ್ದುವು. ಆದುದರಿಂದ, ಜಾರ್ಜ್ ದೊರೆಯು ಆಡಳಿತಗಳನ್ನು ಸಂಪೂರ್ಣವಾಗಿ ಪಿಟ್ಟಗೆ ವಹಿಸಿ ತಾನು ಸುಮ್ಮನೆ ಕುಳಿತನು. ದೊರೆಯೇ ಸ್ವಂತವಾಗಿ ರಾಜ್ಯದ ಆಡಳಿತಗಳನ್ನು ನಡೆಯಿಸುವುದರಲ್ಲಿ ಭಾಗಿಯಾಗುವ ಪದ್ಧತಿಯು ಇಲ್ಲಿಗೆ ಕೊನೆಗಂಡಿತು. ರಾಕಿಂಘಾಮನ ಕಾಲದಲ್ಲಿ ನಡೆದ ನಿಬಂಧನೆಯಿಂದ ದೊರೆಯ ಪ್ರಾಬಲ್ಯವು ಕಡಿಮೆಯಾಯಿತಾದರೂ, ಮಂತ್ರಿಗಳಿಗೆ ದೊರೆಯ ಅವಲಂಬನವು ಇದ್ದೇತೀರಬೇಕಾಗಿತ್ತು. ೧೭೮೮ರಲ್ಲಿ, ಸ್ವಲ್ಪ ಕಾಲ ಜಾರ್ಜ್ ದೊರೆಗೆ ಬುದ್ಧಿಯು ಸ್ವಾಧೀನವಿಲ್ಲದೇ ಹೋಯಿತು. ಆಗ, ಪ್ರಿನ್ಸ್ ಆಫ್ ವೇಲ್ಸನು ರೀಜಂಟ (Regent) ನಾಗುವುದಾದರೆ ವಿಲಿಯಂ ಪಿಟ್ಟನ್ನು ಕೆಲಸದಿಂದ ತೆಗೆದು, ದೊರೆಯ ಸ್ನೇಹಿತರಲ್ಲಿ ಯಾರನ್ನಾದರೂ ಅವನ ಸ್ಥಾನಕ್ಕೆ ನಿಯಮಿಸಬಹುದೆಂದು ಎಲ್ಲರೂ ಭಾವಿಸಿದ್ದರು. ಆದರೆ ಇದು ಸಾಗಲಿಲ್ಲ. ೧೮೦೧ರಲ್ಲಿ ಕ್ಯಾಥೊಲಿಕರಿಗೆ ಸ್ವಾತಂತ್ರ್ಯವನ್ನು ಕೊಡುವ ವಿಚಾರದಲ್ಲಿ ದೊರೆಗೂ, ಪಿಟ್ಟಗೂ, ಭಿನ್ನಭಾವವುಂಟಾ

ದುದರಿಂದ ಆತನು ಕೆಲಸಕ್ಕೆ ರಾಜೀನಾಮೆಕೊಡಬೇಕಾಯಿತು. ಆದರೂ ಜನರಿಗೆ ಅವನಲ್ಲಿ ಬಹಳ ವಿಶ್ವಾಸವಿತ್ತು. ೧೮೧೧ರಲ್ಲಿ ರೀಜೆಂಟನಾಗಿದ್ದ ಪ್ರಿನ್ಸ್ ಆಫ್ ವೇಲ್ಸನು, ಮಂತ್ರಿಗಳನ್ನು ಬದುಲಾಯಿಸಬಹುದೆಂಬ ಭಾವನೆ ಇತ್ತು. ಡನಿಂಗ್ ಎಂಬಾತನು ೧೭೮೦ ರಲ್ಲಿ ನಿರ್ಣಯಮಾಡಿದಾಗಿನಿಂದೀಚೆಗೆ ದೊರೆಯ ಪ್ರಾಬಲ್ಯವು ಹೆಚ್ಚಾಯಿತೆಂದೂ, ದೊರೆಯ ಪ್ರಾಬಲ್ಯವು ಹೆಚ್ಚಿದಷ್ಟು ಪಾರ್ಲಿಮೆಂಟಿನ ಸ್ವಾತಂತ್ರ್ಯವು ಕಡಿಮೆಯಾಗುವುದೆಂದೂ, ೧೮೨೦ ರಲ್ಲಿ ಬ್ರೋಹ್ಯಾಮನು (Brougham) ನಿರ್ಣಯಮಾಡಿದನು. ೧೮೩೪ ರಲ್ಲಿ ಕೂಡ, ನಾಲ್ಕನೆಯ ವಿಲಿಯಂ ದೊರೆಯು ಪಾರ್ಲಿಮೆಂಟಿನಲ್ಲಿ ಹ್ವಿಗ್ ಪಂಗಡದವರು ಹೆಚ್ಚಾಗಿದ್ದರೂ ಕೂಡ, ಹ್ವಿಗ್ ಪಂಗಡದ ಲಾರ್ಡ್ ಮೆಲ್‌ಬರ್ನ್ (Lord Melbourne) ಮುಂತಾದ ಮಂತ್ರಿಗಳನ್ನು ಕೆಲಸದಿಂದ ತೆಗೆದನು. ಆದರೆ ದೊರೆಯು ಇಷ್ಟೊಂದು ಸ್ವಾತಂತ್ರ್ಯವನ್ನು ವಹಿಸಿದುದಕ್ಕೆ ಇದೇ ಕೊನೆ.

---

## ಇಪ್ಪತ್ತನೆಯ ಪ್ರಕರಣ.

### ಪಾರ್ಲಿಮೆಂಟ್ ಸಭೆಯ ಪರಿಷ್ಕರಣವಿಚಾರ.

ಈಗಿನ ಕಾಲದಲ್ಲಿ ಪ್ರತಿನಿಧಿಸಭೆಗೆ ತಮ್ಮ ಪ್ರತಿನಿಧಿಗಳನ್ನು ಕಳುಹಿಸುವ ವಿಷಯದಲ್ಲಿ ಪಟ್ಟಣಿಗರು ಬಹಳ ಉತ್ಸಾಹಯುಕ್ತರಾಗಿರುವುದನ್ನು ನೋಡಿ, ಅವರೆಲ್ಲರೂ ಹಿಂದಿನಿಂದಲೂ ಹಾಗೆಯೇ ಇದ್ದರೆಂದು ಯಾರೂ ಭಾವಿಸಲಾಗದು. ಹಿಂದಿನ ಕಾಲದಲ್ಲಿ ಪ್ರತಿನಿಧಿಗಳನ್ನು ಕಳುಹಿಸುವುದರಲ್ಲಿಯೂ, ಕ್ರಮವರಿತು ಪ್ರತಿನಿಧಿಗಳನ್ನು ಆರಿಸುವ ವಿಚಾರದಲ್ಲಿಯೂ, ಎಷ್ಟೋ ಅವ್ಯವಸ್ಥೆಯು ನೆಲೆಗೊಂಡಿತ್ತು. ಬಹಳ ಜನಭರಿತವಾಗಿ ಉಚ್ಛ್ರಾಯಸ್ಥಿತಿಯಲ್ಲಿದ್ದ ಬರ್ಮಿಂಘಾಂ ಪಟ್ಟಣದಿಂದ ಪ್ರತಿನಿಧಿಗಳೇ ಬರುತ್ತಿರಲಿಲ್ಲ. ಅತ್ಯಂತ ಹೀನಸ್ಥಿತಿಯಲ್ಲಿದ್ದ ಸ್ಯಾರಮ್ಮಿನಿಂದ (Sarum) ಇಬ್ಬರು ಪ್ರತಿನಿಧಿಗಳು ಬರುತ್ತಿದ್ದರು.

ಮೊದಲು ಮೊದಲು, ಜನರಿಗೆ ಪ್ರತಿನಿಧಿತ್ವದ ಅನುಕೂಲ್ಯಗಳು ಚೆನ್ನಾಗಿ ಗೊತ್ತಿರಲಿಲ್ಲ. ಅವುಗಳು ಗೊತ್ತಾಗಲು ಬಹಳ ಕಾಲವು ಹಿಡಿಯಿತು. ಆದರೆ, ಅವರಿಗೆ ಈ ತಿಳಿವಳಿಕೆಯುಂಟಾಗುವುದಕ್ಕೆ ಮೊದಲು ಪ್ರತಿನಿಧಿಗಳನ್ನು ಕಳುಹಿಸುವ ವಿಚಾರದಲ್ಲಿ ಯಾರಿಗೂ ಉತ್ಸಾಹವಿರಲಿಲ್ಲ. ಒಬ್ಬೊಬ್ಬ ಷೆರೀಫನೂ, ಒಟ್ಟು ಷೈರಿನ ಪ್ರತಿನಿಧಿಗಳಾಗಿ ಇಬ್ಬರು 'ನೈಟು' (Knights) ಗಳನ್ನೂ, ಷೈರಿನಲ್ಲಿರುವ ಒಂದೊಂದು ಪಟ್ಟಣಕ್ಕೂ ಬರೋವಿಗೂ

ಇಬ್ಬಿಬ್ಬರಂತೆ ಪ್ರತಿನಿಧಿಗಳನ್ನೂ ಕಳುಹಿಸಬೇಕಾಗಿತ್ತು. ಹೀಗೆ ಪ್ರತಿನಿಧಿಗಳನ್ನು ಕಳುಹಿಸುವುದು ಬಲುಕಷ್ಟವಾಗಿತ್ತು. ಕೆಲಸಗಳನ್ನೆಲ್ಲಾ ಬಿಟ್ಟು, ಕಳ್ಳ ಕಾಕರಹಾವಳಿಗೆ ಈಡಾಗಿದ್ದ ದಾರಿಯಲ್ಲಿ ಬಲುದೂರ ಪ್ರಯಾಣಮಾಡಿ, ಕೊನೆಗೆ ಲಂಡನ್ ನಗರಕ್ಕೆ ತಲುಪಿ, ತಮಗೆ ಪರಿಚಯವಿಲ್ಲದವರ ಸಂಗಡ ತಮಗೆ ಪ್ರಾಮುಖ್ಯತೆಯೇ ಇಲ್ಲದ ಸಭೆಯಲ್ಲಿ ಕುಳಿತುಕೊಳ್ಳುವುದಕ್ಕೆ ಯಾರೂ ಸಮ್ಮತಿಸುತ್ತಿರಲಿಲ್ಲ. ಹೆಚ್ಚೇಕೆ? ಪಾರ್ಲಿಮೆಂಟಿಗೆ ಪ್ರತಿನಿಧಿಗಳನ್ನು ಬರಮಾಡುತ್ತಿದ್ದುದು ಅಪರಾಧಿಗಳನ್ನು ನ್ಯಾಯಸ್ಥಾನಕ್ಕೆ ಬರಮಾಡಿದಂತೆ ಆಗುತ್ತಿತು. ಪ್ರತಿನಿಧಿಗಳನ್ನು ಬರಮಾಡುವುದು ಇಷ್ಟು ಕಷ್ಟವಾಗಿದ್ದರೂ, ಸಭೆಯು ಇದ್ದಲ್ಲದೆ ದೊರೆಗೆ ಮಾರ್ಗವಿರಲಿಲ್ಲ. ಜನಾಂಗದ ಪ್ರತಿನಿಧಿಯಾದ ಪಾರ್ಲಿಮೆಂಟ್ ಸಭೆಯ ಮೂಲಕವಾಗಿ ತೆರಿಗೆಯನ್ನು ವಿಧಿಸುವುದಾದರೆ ಜನರು ಸದ್ದುಗಲಗಿಲ್ಲದೆ ತೆರಿಗೆಗಳನ್ನು ಕೊಡುತ್ತಿದ್ದರು. ಹಾಗಿಲ್ಲದೆ, ದೊರೆಯೇ ಸ್ವಂತವಾಗಿ ಕಂದಾಯವನ್ನು ವಿಧಿಸಿದ ಪಕ್ಷಕ್ಕೆ ದಂಗೆಯು ನಡೆದು ದೊರೆಯು ಸಿಂಹಾಸನಚ್ಯುತನಾಗುವ ಸಂಭವವಿತ್ತು. 'ಪ್ಲಾಂಟಾಜೆನೆಟ್' ದೊರೆಗಳು ಈ ಮರ್ಮವನ್ನು ಅರಿತಿದ್ದರಾದಕಾರಣ, ಎಷ್ಟು ಕಷ್ಟವಾದರೂ ಸಹಿಸಿ ಪಾರ್ಲಿಮೆಂಟ್ ಸಭೆಯು ನೆರೆಯುವಂತೆ ಮಾಡುತ್ತಿದ್ದರು. ಜನರಿಗೇನೋ ಪ್ರತಿನಿಧಿತ್ವವಿಚಾರದಲ್ಲಿ ಲೇಶವೂ ಆಸಕ್ತಿ ಇರಲಿಲ್ಲ; ಅವರು ಪ್ರತಿನಿಧಿಗಳನ್ನು ಕಳುಹಿಸುವುದು ತಪ್ಪಿದರೆ ಸಾಕೆಂದಿದ್ದರು. ಡೆವನ್‌ಷೈರಿನಲ್ಲಿರುವ ಟಾರಿಂಗ್ಟನ್ನಿನವರು ತಾವು ೧೩೬೮ರವರೆಗೂ ಪ್ರತಿನಿಧಿಗಳನ್ನು ಕಳುಹಿಸಿರಲಿಲ್ಲವಾದ ಪ್ರಯುಕ್ತ, ಇನ್ನು ಮುಂದೆಯೂ ತಾವು ಪ್ರತಿನಿಧಿಗಳನ್ನು ಕಳುಹಿಸದೇ ಇರಲು ಸನ್ನದನ್ನು ಪಡೆದುಕೊಂಡರು. ಕಾಲ್ಚೆಸ್ಟರಿನವರು ಕೋಟೆಯನ್ನು ಸರಿಮಾಡಲು ಬಹಳ ಹಣವನ್ನು ವೆಚ್ಚಮಾಡಿದುದ್ದರಿಂದ, ಪ್ರತಿನಿಧಿಗಳನ್ನು ಕಳುಹಿಸಿ ಅವರ ವೆಚ್ಚಕ್ಕೆ ಹಣವನ್ನು ಕೊಡುವುದು ಕಷ್ಟವಾಗುವುದೆಂದು ಯೋಚಿಸಿ, ಐದು ವರುಷಗಳ ವರೆಗೆ ಪ್ರತಿನಿಧಿಗಳನ್ನು ಕಳುಹಿಸುವ ನಿರ್ಬಂಧದಿಂದ ಅವರನ್ನು ಪಾರುಮಾಡಿ, ಎರಡನೆಯ ರಿಚರ್ಡ್ ದೊರೆಯು ಅವರಿಗೆ ಸನ್ನದನ್ನು ಕೊಟ್ಟಿದ್ದನು.

ಪ್ರತಿನಿಧಿಗಳನ್ನು ಕಳುಹಿಸುವ ವಿಚಾರದಲ್ಲಿದ್ದ ಈ ಕೊರತೆಯನ್ನು ಪರಿಹರಿಸುವುದಕ್ಕಾಗಿ ಎರಡನೆಯ ರಿಚರ್ಡ್ ದೊರೆಯು ಪ್ರತಿನಿಧಿಗಳನ್ನು ಕಳುಹಿಸಲು ತಪ್ಪಿದ ಷೆರೀಫರಿಗೂ, ತಮ್ಮ ಕರ್ತವ್ಯವನ್ನು ನೆರವೇರಿಸದ ಪ್ರತಿನಿಧಿಗಳಿಗೂ ದಂಡದ್ರವ್ಯವನ್ನು ವಿಧಿಸುವುದಾಗಿ ನಿಬಂಧನೆಯನ್ನು ಮಾಡಿದ್ದನು. ಇದರಿಂದಲೂ ಬಹಳ ಫಲವಾಗಲಿಲ್ಲ. ಆದರೆ, ಪಾರ್ಲಿಮೆಂಟ್ ಸಭೆಯ ಪ್ರಾಬಲ್ಯವು ಹೆಚ್ಚಿದಹಾಗೆಲ್ಲಾ ಜನರಿಗೆ ಪ್ರತಿನಿಧಿಗಳನ್ನು ಕಳುಹಿಸುವ

ಕುತೂಹಲವು ಹೆಚ್ಚಿತು. ಪ್ರತಿನಿಧಿಗಳಾಗಲು ಜನರು 'ನಾನು ಮುಂದು, ತಾನು ಮುಂದು' ಎಂದು ಹೊರಟರು. ಲ್ಯಾಂಕ್ಯಾಸ್ಟರ್ ಮನೆತನದ ದೊರೆಗಳ ಕಾಲದಲ್ಲಿ ಪಾರ್ಲಿಮೆಂಟ್ ಸಭೆಯು ಬಹಳ ಪ್ರಬಲವಾಗಿದ್ದುದರಿಂದ, ಆಗ ಪ್ರತಿನಿಧಿತ್ವದ ವಿಚಾರದಲ್ಲಿ ಜನರಿಗೆ ಬಹಳ ಆಸಕ್ತಿಯಿತ್ತು. ಆರನೆಯ ಹೆನ್ರಿಯು ಪ್ರಾಪ್ತವಯಸ್ಕನಾಗುವ ವರೆಗೂ ಪಾರ್ಲಿಮೆಂಟ್ ಸಭೆಗೆ ರಾಜ್ಯ ಭಾರದ ವಿಷಯದಲ್ಲಿ ಬಹಳ ಅಧಿಕಾರವಿತ್ತು. ಆದುದರಿಂದ, ಪಾರ್ಲಿಮೆಂಟಿನಲ್ಲಿ ಸದಸ್ಯರಾಗುವುದೊಂದು ದೊಡ್ಡ ಗೌರವವೆಂದು ಜನರಿಗೆ ಭಾವನೆಯುಂಟಾಯಿತು. ಇದರಿಂದ ಎರಡು ಫಲಗಳು ಉಂಟಾದುವು; (೧) ಪ್ರತಿನಿಧಿಗಳಾಗತಕ್ಕವರು ತಮ್ಮ ವೆಚ್ಚಕ್ಕೆ ಹಣವನ್ನೇ ತೆಗೆದುಕೊಳ್ಳದೆ ಕೆಲಸಮಾಡುವುದಕ್ಕೆ ಸಿದ್ಧವಾದರು. (೨) ತನ್ನ ಪಕ್ಷಪಾತಿಗಳು ಪ್ರತಿನಿಧಿಗಳಾಗಿ ನಿಯಮಿತರಾಗುವಂತೆ ದೊರೆಯು ಮಾಡಲುದ್ಯುಕ್ತನಾಗಿದ್ದನು. ಪ್ರತಿನಿಧಿಗಳನ್ನು ಆರಿಸುವುದರಲ್ಲಿ ಸಿಕ್ಕಿದವರೆಲ್ಲಾ ಓಟುಗಳನ್ನು ಕೊಡದಂತೆ ಮಾಡುವುದಕ್ಕಾಗಿ ಎರಡು ಪೌಂಡುಗಳಿಗಿಂತಲೂ ಕಡಿಮೆಯಾಗಿ ಕಂದಾಯವನ್ನು ಕಟ್ಟುವವರಾರೂ ಪ್ರತಿನಿಧಿಗಳ ಚುನಾವಣೆಯಲ್ಲಿ ಓಟುಗಳನ್ನು ಕೊಡಕೂಡದೆಂದು ನಿಬಂಧನೆಯಾಯಿತು. ಈ ನಿಬಂಧನೆಗೆ ಅನುಸಾರವಾಗಿಯೇ ೧೮೩೨ನೆಯ ಇಸವಿಯ ವರೆಗೂ ಚುನಾವಣೆಯು ನಡೆಯುತ್ತಿತ್ತು. ಈ ಮಧ್ಯದಲ್ಲಿ, ದೊರೆಯೂ, ಅರ್ಲ್ ಮುಂತಾದ ದೊಡ್ಡಮನುಷ್ಯರೂ ಪ್ರತಿನಿಧಿತ್ವದ ವಿಚಾರದಲ್ಲಿ ತಮ್ಮ ಅಭಿಪ್ರಾಯಾನುಸಾರವಾಗಿ ಕಾರ್ಯಗಳು ನೆರವೇರುವಂತೆ ಮಾಡಲು ಪ್ರಯತ್ನಪಟ್ಟರು. ದೊರೆಯು ಬರೋಗಳನ್ನು ನಿರ್ಮಿಸಿ, ಅವುಗಳು ತನ್ನ ಅಧಿಕಾರದಲ್ಲಿರುವಂತೆ ಮಾಡಿಕೊಂಡು ಪ್ರತಿನಿಧಿತ್ವವು ತನಗೆ ಅನುಕೂಲವಾಗುವಂತೆ ಏರ್ಪಡಿಸಿದನು. ಅರ್ಲ್ ಮುಂತಾದವರು ತಮಗೆ ಬೇಕಾದವರು ಪ್ರತಿನಿಧಿಗಳಾಗಿ ಬರುವಂತೆ ಮಾಡಲು ಪ್ರಯತ್ನಪಟ್ಟರು. ಇಷ್ಟರಲ್ಲಿ, ದೊರೆಯು ಬರೋಗಳನ್ನು ನಿರ್ಮಿಸಿ ಅಲ್ಲಿಂದ ತನಗೆ ಅನುಕೂಲರಾದ ಪ್ರತಿನಿಧಿಗಳು ಬರುವಂತೆ ಮಾಡುತ್ತಿದ್ದುದರಿಂದ ಜನರಿಗೆ ಅಸಮಾಧಾನವಾಯಿತು. ಆದುದರಿಂದ ಈ ಪದ್ಧತಿಯು ಕಡಿಮೆಯಾಗುತ್ತಾ ಹೋಯಿತು. ಎಲಿಸಬೆತ್ ರಾಣಿಯು ಮೂವತ್ತು ಬರೋಗಳನ್ನೇರ್ಪಡಿಸಿದಳು. ಜೇಮ್ಸ್ ದೊರೆಯು ಹದಿಮೂರು ಬರೋಗಳನ್ನು ಕಳ್ಪಿಸಿದನು. ಮೊದಲನೆಯ ಛಾರಲ್ಸ್ ದೊರೆಯು ಒಂಬತ್ತು ಬರೋಗಳನ್ನೂ, ಎರಡನೆಯ ಛಾರಲ್ಸ್ ದೊರೆಯು ಒಂಬೇಬಂದು ಬರೋವನ್ನೂ, ಏರ್ಪಡಿಸಿದರು. ಬಳಿಕ ಈ ಪದ್ಧತಿಯು ನಿಂತುಹೋಯಿತು.

ಹೀಗೆ ಬರೋಗಳನ್ನು ಏರ್ಪಡಿಸುವುದು ನಿಂತುಹೋದ ಬಳಿಕ ಅನೇಕ ಕೆಡುಕುಗಳುಂಟಾದುವು. ಐಶ್ವರ್ಯವೂ, ಜನಸಂಖ್ಯೆಯೂ ಹೆಚ್ಚಿದಕಡೆಗಳಲ್ಲೆಲ್ಲಾ ದೊರೆಯು, ಬರೋಗಳನ್ನು ಏರ್ಪಡಿಸಿ, ಅಲ್ಲಿಂದ ಪ್ರತಿನಿಧಿಗಳು ಬರುವಂತೆಮಾಡಿ, ಪ್ರತಿನಿಧಿತ್ವದಲ್ಲಿ ಸಮತೆಯುಂಟಾಗುವಂತೆ ಮಾಡುತ್ತಿದ್ದನು. ಆತನು ಬರೋಗಳನ್ನೇರ್ಪಡಿಸುವುದು ನಿಂತಮೇಲೆ, ಧನದಲ್ಲಿಯೂ, ಜನಸಂಖ್ಯೆಯಲ್ಲಿಯೂ, ಉಛ್ರಾಯಸ್ಥಿತಿಗೆ ಬಂದಿದ್ದ ಕಡೆಗಳಿಂದ ಕೂಡ ಪ್ರತಿನಿಧಿಗಳು ಬರುವುದಕ್ಕಿಲ್ಲವಾಯಿತು. ಇದ್ದ ಬರೋಗಳಿಗೆ ದುರ್ದೆಸೆಯು ಪ್ರಾಪ್ತವಾದ ಕಾರಣ, ಅಲ್ಲಿಂದ ಪ್ರತಿನಿಧಿಗಳು ಬರುವುದು ಅಪೂರ್ವವಾಯಿತು. ಬರ್ಮಿಂಘಾಂ, ಮ್ಯಾಂಚೆಸ್ಟರ್ ಮುಂತಾದ ಪಟ್ಟಣಗಳಿಂದ ತಮಗೆ ಅನುಕೂಲರಾದ ಪ್ರತಿನಿಧಿಗಳು ಬರುವರೆಂಬ ನಂಬಿಕೆಯು ಇಲ್ಲದೇ ಇದ್ದುದರಿಂದ, ವ್ಯಾಪಾರದಲ್ಲಿಯೂ, ಕೈಗಾರಿಕೆಯಲ್ಲಿಯೂ ಬಹಳ ಅಭಿವೃದ್ಧಿಯನ್ನು ಹೊಂದಿದ್ದ ಈ ಸ್ಥಳಗಳಿಂದ ಮಂತ್ರಿಗಳು ಪ್ರತಿನಿಧಿಗಳನ್ನು ಬರಮಾಡಿಕೊಳ್ಳುತ್ತಿರಲಿಲ್ಲ. ಆಲಿವರ್ ಕ್ರಾಂವೆಲನು ಈ ನ್ಯೂನತೆಯನ್ನು ಸರಿಪಡಿಸುವುದಕ್ಕಾಗಿ, ಜನಸಂಖ್ಯೆಯನ್ನನುಸರಿಸಿ ಪ್ರತಿನಿಧಿಗಳು ಬರತಕ್ಕುದೆಂದು ಅಪ್ಪಣೆಮಾಡಿದನು. ಇದರಿಂದ ಜನಸಂಖ್ಯೆಯು ಹೆಚ್ಚಾಗಿದ್ದ ಕಡೆಗಳಿಂದ ಹೆಚ್ಚಾಗಿಯೂ, ಕಡಿಮೆಯಾಗಿದ್ದ ಪಟ್ಟಣಗಳಿಂದ ಕಡಿಮೆಯಾಗಿಯೂ ಪ್ರತಿನಿಧಿಗಳು ಬರುವಂತಾಯಿತು. ಇದು ಅನೇಕರಿಗೆ ಸರಿಬೀಳದೆ, ಕನ್‌ವೆನ್‌ಷನ್ ಪಾರ್ಲಿಮೆಂಟಿಗೆ ಹಿಂದಿನ ನಿಯಮಗಳನ್ನನುಸರಿಸಿ ಪ್ರತಿನಿಧಿಗಳು ನಿಯಮಿತರಾದರು. ಮುಂದೆಯೂ ಹೀಗೆಯೇ ನಡೆಯಿತು. ಪ್ರತಿನಿಧಿತ್ವದಲ್ಲಿ ಹೀಗೆ ಅವ್ಯವಸ್ಥೆಯು ನೆಲೆಗೊಂಡಿದ್ದರೂ ಒಟ್ಟಿನಲ್ಲಿ, ಪ್ರತಿನಿಧಿಸಭೆಯವರು ಇಂಗ್ಲಿಷ್ ಜನರ ಮನೋಭಾವಗಳನ್ನನುಸರಿಸಿದ್ದರೆಂದೂ, ದೊರೆಯ ಪ್ರಾಬಲ್ಯವನ್ನು ಮಟ್ಟುಮಾಡುವುದಕ್ಕಾಗಿ ಅವರು ಬಹಳ ಚೆನ್ನಾಗಿ ಹೋರಾಡಿದರೆಂದೂ ಹೇಳಬಹುದಾಗಿರುತ್ತದೆ. ಆದರೆ, ಈ ಹೋರಾಟದಲ್ಲಿ ಅವರು ಜಯಶಾಲಿಗಳಾದ ಬಳಿಕ ಅವರ ಸ್ವಭಾವವು ಬದಲಾಯಿಸಿತು. ಪಾರ್ಲಿಮೆಂಟಿನವರು ಮೊದಲು ಜನಾಂಗದ ಯೋಗಕ್ಷೇಮವನ್ನು ನೋಡುವುದು ಹೋಗಿ, ತಮ್ಮ ಸ್ವಂತ ಹಿತವೇ ಮುಖ್ಯವೆಂದೆಣಿಸಿದರು; ಅಲ್ಲಿಗೂ ನಿಲ್ಲದೆ, ದೊರೆಯ ನಿರಂಕುಶಪ್ರವರ್ತನೆಗೆ ಭಂಗವನ್ನುಂಟುಮಾಡುವುದಕ್ಕಾಗಿ ಪ್ರಜೆಗಳು ಕೊಟ್ಟಿದ್ದ ಹಕ್ಕು ಬಾಧ್ಯತೆಗಳನ್ನು ಪ್ರಜೆಗಳಿಗೇ ವಿರೋಧವಾಗುವಂತೆ ಉಪಯೋಗಿಸಲಾರಂಭಿಸಿದರು. ಹದಿನೆಂಟನೆಯ ಶತಮಾನದಲ್ಲಿಯೂ, ಪಾರ್ಲಿಮೆಂಟ್ ಸಭೆಯು ಕಲುಷಿತವಾಗಿತ್ತೆಂದೇ ಹೇಳಬೇಕು. ಆದರೂ, ಆಗ ಒದಗಿದ್ದ ಸಂದಿಗ್ಧಸಮಯದಲ್ಲಿ ಪ್ರತಿನಿಧಿಸಭೆಯವರು ಜನಾಂಗಕ್ಕೆ ಎಷ್ಟೋ ಉಪಕಾರಮಾಡಿ, ಜಾಣ್ಮೆಯಿಂದಲೂ ಸಹನೆ

ಯಿಂದಲೂ ವರ್ತಿಸಿದರು. ಆದರೆ ೧೭೪೫ನೆಯ ಇಸವಿಯಿಂದೀಚೆಗೆ ಪ್ರತಿನಿಧಿ ಸಭೆಯವರು ಬಹಳ ಹೀನರೀತಿಯಲ್ಲಿ ವರ್ತಿಸತೊಡಗಿದರು. ಮೂರನೆಯ ಜಾರ್ಜ್ ದೊರೆಯ ಪ್ರಭುತ್ವವು ಚೆನ್ನಾಗಿ ನಡೆಯದೇ ಇದ್ದುದರಿಂದಲೂ, ಕರ್ತವ್ಯಪರಾಯಣರಲ್ಲದೇ ಇದ್ದ ಹ್ವಿಗ್ ಸಂಗಡದ ಕೆಲವು ಮಂದಿ ದೊಡ್ಡ ಮನುಷ್ಯರ ಪ್ರಾಬಲ್ಯದಿಂದಲೂ, ಲಂಚವು ತಲೆಯೆತ್ತಿದ್ದುದರಿಂದಲೂ ಬಹಳ ತೊಂದರೆಯಾಗುತ್ತಿತ್ತು. ಆದುದರಿಂದ, ಯಾವುದಾದರೂ ಅನುಕೂಲವಾದ ಬದಲಾವಣೆಯಾದಲ್ಲದೆ ಮಾರ್ಗವಿಲ್ಲವೆಂದು ಎಲ್ಲರಿಗೂ ತೋರಿತು. ಬರ್ಕಿನ ಸಂಗಡದವರು ದೊರೆಯ ಪ್ರಾಬಲ್ಯವು ಕಡಿಮೆಯಾಗಬೇಕೆಂದೂ, ಪಿಟ್ಟನ ಕಡೆಯವರು ಪಾರ್ಲಿಮೆಂಟ್ ಸಭೆಯು ಪರಿಷ್ಕಾರವಾಗಬೇಕೆಂದೂ ವಾದಿಸಿದರು. ಈ ವಿಚಾರವನ್ನು ಹಿಂದೆಯೇ ತಿಳಿದುಕೊಂಡಿರುತ್ತೇವೆ.

ಈ ಪರಿಷ್ಕರಣದ ವಿಚಾರವು ಎರಡನೆಯಜಾರ್ಜ್ ದೊರೆಯ ಕಾಲದಿಂದಲೂ ಪ್ರಸ್ತಾವವಾಗುತ್ತಿತ್ತು. ಪಿಟ, ವಿಲ್ಕ್ಸ್, ಮುಂತಾದವರು ಎಷ್ಟೋ ಸಾರಿ ಈ ವಿಚಾರದಲ್ಲಿ "ಬಿಲ್ಲು"ಗಳನ್ನು ತಂದರೂ, ಅವು ನಿರಾಕೃತವಾದುವು. ಪಾರ್ಲಿಮೆಂಟಿನಲ್ಲಿ ನಡೆಯುತ್ತಿದ್ದ ಚರ್ಚೆಗಳನ್ನು ಪ್ರಜೆಗಳಿಗೆ ತಿಳಿಸಕೂಡದೆಂದು ಪ್ರತಿನಿಧಿಸಭೆಯವರು ಮುಷ್ಕರಹಿಡಿದುದನ್ನು ನೋಡಿ, ಸಭೆಯಲ್ಲಿ ಏನೋ ಒಂದು ಅಚಾತುರ್ಯವು ನಡೆಯುತ್ತಿರಬೇಕೆಂದೂ, ಅದು ಬಯಲಾದೀತೆಂಬ ಭಯದಿಂದ ಅವರು ಹಾಗೆ ಮಾಡುತ್ತಿರಬಹುದೆಂದೂ, ಎಲ್ಲರಿಗೂ ಸಂಶಯವು ಹುಟ್ಟಿತು. ವರ್ತಮಾನ ಪತ್ರಿಕೆಗಳು ಹೆಚ್ಚಿದುವು. ಅವುಗಳ ಮೂಲಕವಾಗಿ ಪಾರ್ಲಿಮೆಂಟಿನಲ್ಲಿ ನಡೆಯುತ್ತಿದ್ದ ಚರ್ಚೆಗಳನ್ನು ತಮಗೆ ತಿಳಿಸಬೇಕೆಂದು ಜನರು ಹಟಹಿಡಿದರು. ಆದರೂ ಪರಿಷ್ಕರಣವಿಚಾರದಲ್ಲಿ ಬಂದ ಬಿಲ್ಲುಗಳೆಲ್ಲಾ ನಿರಾಕೃತವಾದುವು. ಅಷ್ಟರಲ್ಲಿ, ಬರ್ಕ್ ಮುಂತಾದವರು ಉತ್ತಮ ರೀತಿಯಲ್ಲಿ ಕೆಲಸಮಾಡುತ್ತಿದ್ದ ಪಾರ್ಲಿಮೆಂಟ್ ಸಭೆಯನ್ನು ಪರಿಷ್ಕರಿಸಬೇಕಾಗಿಲ್ಲವೆಂದೂ, ದೊರೆಯ ಪ್ರಾಬಲ್ಯವನ್ನು ತಗ್ಗಿಸಿದರೆ ಎಲ್ಲಾ ಸರಿಹೋಗುವುದೆಂದೂ ವಾದಿಸಿದರು. ರಾಕಿಂಘಾಮನು ಪ್ರಧಾನಸಚಿವನಾಗಿದ್ದಾಗ ದೊರೆಯ ಪ್ರಾಬಲ್ಯವು ಕಡಿಮೆಯಾಯಿತು. ಬಳಿಕ ಬಂದೇಸಮನೆ ಪಾರ್ಲಿಮೆಂಟಿನ ಸಂಸ್ಕರಣಕ್ಕಾಗಿ ಹೋರಾಟವು ಹತ್ತಿತು. ಆದರೂ ಯಾವ ಪ್ರಯೋಜನವೂ ಆಗಲಿಲ್ಲ. ಪರಿಷ್ಕರಣದ ಬಿಲ್ಲುಗಳು ಮೊದಲಿನಂತೆಯೇ ಮೂಲೆಗೆ ಬಿದ್ದುವು. ೧೭೮೩ನೆಯ ಇಸವಿಯಲ್ಲಿ ಪಿಟ್ಟನು ಒಂದು ಬಿಲ್ಲನ್ನು ತಂದನು. ಅದಕ್ಕೂ ಇದೇ ಗತಿಯಾಯಿತು. ಅದೇ ವರುಷ ಪಿಟ್ಟನು ಪ್ರಧಾನ ಸಚಿವನಾದನು. ಈಗ, ಅವನ ಉದ್ಯಮವು ಫಲಕಾರಿಯಾದೀತೆಂದು ತೋರಿತು. ಆದರೆ, ಅಧಿಕಾರವಾಗುವುದಕ್ಕೆ ಮುಂಚೆ ಇದ್ದ ಪಿಟ್ಟನ

ಸ್ಥಿತಿಗೂ, ಈಗಿನ ಸ್ಥಿತಿಗೂ ತುಂಬ ವ್ಯತ್ಯಾಸವಿತ್ತು. ಒಂದು ವೇಳೆ ದೊರೆಯು ಈ ಬಿಲ್ಲಿನ ವಿಷಯಕ್ಕೆ ಗಮನಕೊಟ್ಟಿದ್ದರೆ, ಆದು ಆಚರಣೆಗೆ ಬರುತ್ತಿತ್ತು. ದೊರೆಯು ಈ ವಿಚಾರಕ್ಕೆ ಕೈಹಾಕದೇ ಇದ್ದುದರಿಂದ ಪಿಟ್ಟನ ಮನೋರಥವು ನೆರವೇರಲಿಲ್ಲ. ಅವನು ಸೂಚಿಸಿದ ಪರಿಷ್ಕರಣಕ್ರಮವು ಸ್ವಲ್ಪಕಾಲ ಪರ್ಯಾಲೋಚಿತವಾಗಿ ಕೊನೆಗೆ ನಿರಾಕೃತವಾಯಿತು.

ಅಲ್ಲಿಂದ ಮುಂದೆ ಪರಿಷ್ಕರಣದ ಸುದ್ದಿಯೇ ಇರಲಿಲ್ಲ. ಇದಕ್ಕೆ ಕಾರಣವೂ ಇತ್ತು. ಪಿಟ್ಟನ ಪ್ರಧಾನಮಂತ್ರಿತ್ವದಲ್ಲಿ ಸರಕಾರವು ಜನರಂಜಕವಾದುದಾಗಿಯೂ, ಆಡಳಿತವು ಚೆನ್ನಾಗಿಯೂ ಇದ್ದುದರಿಂದ ಪರಿಷ್ಕರಣದ ವಿಷಯದಲ್ಲಿ ಜನರ ಕಾತರವು ತಗ್ಗಿತು. ಪ್ರಭುತ್ವವು ಚೆನ್ನಾಗಿದ್ದರೂ ಮಂತ್ರಿಗಳು ನಿಯಮಕ್ಕೆ ಒಳಪಟ್ಟು ಅಚ್ಚುಕಟ್ಟಾಗಿ ಕೆಲಸಮಾಡುತ್ತಿದ್ದರೂ ಪರಿಷ್ಕರಣಗಳ ಕಡೆಗೆ ಗಮನ ಕೊಡುವವರಾರು ? ಪಾರ್ಲಿಮೆಂಟಿನವರೆಲ್ಲರೂ ತನ್ನ ಪಕ್ಷವನ್ನು ವಹಿಸಿ, ಸಹಾಯ ಮಾಡುತ್ತಿರುವಲ್ಲಿ ಪಿಟ್ಟನು ಮತ್ತೆ ಮತ್ತೆ ಪಾರ್ಲಿಮೆಂಟಿನ ಪರಿಷ್ಕರಣಕ್ಕಾಗಿ ಹೋರಾಡಿ ಅವರ ಮನಸ್ಸಿಗೆ ಬೇಸರವನ್ನುಂಟುಮಾಡುವುದು ಅನುಚಿತವೆಂದರಿತು ಅವನು ಸುಮ್ಮನಾದನು. ಅಂತು ೧೭೮೫ ರಿಂದ ೧೮೩೦ ರ ವರೆಗೂ ಪರಿಷ್ಕರಣದ ಪ್ರಸ್ತಾಪವೇ ಇರಲಿಲ್ಲ. ಇಷ್ಟರಲ್ಲಿ ಫ್ರಾನ್ಸ್ ದೇಶದ ವಿಪ್ಲವವು (French Revolution) ಬಂದೊದಗಿತು. ಇದರಿಂದ, ಮೊದಲಿನಿಂದಲೂ ಪರಿಷ್ಕರಣಕ್ಕಾಗಿ ಹೋರಾಡುತ್ತಿದ್ದವರಿಗೆ ಉತ್ಸಾಹಕಳೆಯು ತುಂಬಿತು. ಆದರೆ ಒಟ್ಟಿನಲ್ಲಿ, ಜನರೆಲ್ಲರೂ ಯಾವ ವಿಧವಾದ ಪರಿಷ್ಕರಣವೂ ನಡೆಯಲು ಅವಕಾಶ ಕೊಡದೆ, ಪರಿಷ್ಕರಣದ ಸುದ್ದಿಯನ್ನೆತ್ತಿದವರೊಡನೆ "ಪರಿಷ್ಕರಣಗಳಿಗಾಗಿ ಯತ್ನಿಸಿದ ಫ್ರಾನ್ಸ್ ದೇಶದ ಸ್ಥಿತಿಯನ್ನು ನೋಡಿರಿ!" ಎಂದು ಹೇಳಲಾರಂಭಿಸಿದರು. ಫ್ರಾನ್ಸ್ ದೇಶದ ಸಂದರ್ಭಗಳಿಗೂ, ಇಂಗ್ಲೆಂಡಿನ ಸಂದರ್ಭಗಳಿಗೂ ವ್ಯತ್ಯಾಸವಿತ್ತೆಂದು ಯಾರು ಎಷ್ಟು ಹೇಳಿದರೂ ಅವರು ಬೇರೆ ಕಿವಿಗೊಡಲಿಲ್ಲ. ಬರ್ಕನಂತೂ, ಯಾವ ವಿಧವಾದ ಪರಿಷ್ಕರಣವೂ ಅವಶ್ಯವಿಲ್ಲವೆಂದು ಮೊದಲಿಗಿಮ್ಮಡಿಯಾದ ಉತ್ಸಾಹದಿಂದ ವಾದಿಸುತ್ತಾ, ಆದೇ ಅಭಿಪ್ರಾಯವುಳ್ಳ ಹಲವು ಮಂದಿಗಳಿಗೆ ಮುಂದಾಳಾಗಿ ನಿಂತು ಪರಿಷ್ಕರಣದ ಮಾರ್ಗಕ್ಕೆ ಅಡ್ಡವಾದನು. ಪ್ರತಿನಿಧಿಸಭೆಯವರು ಸ್ವಲ್ಪ ಮಟ್ಟಿಗೆ ಪರಿಷ್ಕರಣಕ್ಕೆ ಅವಕಾಶವನ್ನು ಕೊಟ್ಟು, ಕೆಲಸಕ್ಕೆಬಾರದ ಬರೋಗಳಿಂದ ಪ್ರತಿನಿಧಿಗಳು ಬರುತ್ತಿದ್ದುದನ್ನು ತಪ್ಪಿಸಿ, ಅವರ ಸ್ಥಾನಕ್ಕೆ ಪ್ರತಿನಿಧಿತ್ವವೇ ಇಲ್ಲದಿದ್ದ ಪಟ್ಟಣಗಳಿಂದ ಪ್ರತಿನಿಧಿಗಳನ್ನು ಬರಮಾಡಿಕೊಂಡಿದ್ದರೆ ಅನೇಕ ಸತ್ಫಲಗಳುಂಟಾಗುತ್ತಿದ್ದುವೆಂದು ಹೇಳಬಹುದಾಗಿರುತ್ತದೆ. ಪ್ರತಿನಿಧಿಸಭೆ

ಯುವರು ಇದಕ್ಕೆ ಕೈಹಾಕಲಿಲ್ಲ. ಫ್ರಾನ್ಸ್ ದೇಶದ ವಿಪ್ಲವದಿಂದ ಇಂಗ್ಲೆಂಡಿಗೆ ಉಂಟಾದ ನಷ್ಟವು ಇದೇ.

ಪರಿಷ್ಕರಣವಾಗುವುದೇನೋ ಅತ್ಯವಶ್ಯವಾಗಿತ್ತು. ೧೭೯೨ನೆಯ ಇಸವಿಯಲ್ಲಿ "ಫ್ರೆಂಡ್ಸ್ ಆಫ್ ದಿ ಪೀಪಲ್ "(Friends of the People) "ಪ್ರಜಾಮಿತ್ರಮಂಡಲಿ "ಎಂಬ ಸಂಘವು ಏರ್ಪಟ್ಟು, ಗ್ರೇ (Grey) ಎಂಬಾತನ ಮೂಲಕವಾಗಿ ಪ್ರತಿನಿಧಿತ್ವದಲ್ಲಿದ್ದ ನ್ಯೂನತೆಗಳನ್ನೆಲ್ಲಾ ಕಾಣಿಸಿ, ಅವುಗಳನ್ನು ಸರಿಪಡಿಸಬೇಕೆಂದು ಪ್ರತಿನಿಧಿಸಭೆಯವರಿಗೆ ಅರ್ಜಿಯನ್ನು ಕಳುಹಿಸಿದುದಾಯಿತು. ಗ್ರೇ ಎಂಬಾತನು ಇದಕ್ಕೆ ಮೊದಲೇ ಒಂದು ಸಾರಿ ಈ ವಿಷಯದಲ್ಲಿ ಪ್ರಯತ್ನಪಟ್ಟು ನಿರಾಶನಾಗಿದ್ದನು. ಈ ಸಾರಿಯೂ ಆತನು ತಂದ ಅರ್ಜಿಯನ್ನು ಮೂಲೆಗೆ ಹಾಕಿದರು. ಅವನು ಮತ್ತೂ ಒಂದುಸಲ ಪ್ರಯತ್ನಿಸಿದನು. ಆಗಲೂ ಫಲವಾಗಲಿಲ್ಲ. ಬಳಿಕ ಹದಿನೈದು ವರುಷ ಕಾಲ ಪರಿಷ್ಕರಣದ ಸುದ್ದಿಯೇ ಇರಲಿಲ್ಲ. ಅನಂತರ ವಾಟರ್‌ಲೂ (Waterloo) ಕದನದಲ್ಲಿ ನೆಪೋಲಿಯನನನ್ನು ಸೋಲಿಸಿದ ಮೇಲೆ ಶತ್ರುಭೀತಿಯು ಅಡಗಿದುದರಿಂದ ಇಂಗ್ಲಿಷರು ವಿದೇಶಗಳ ವಿಚಾರಕ್ಕೆ ತಮ್ಮ ಕಾಲವನ್ನೆಲ್ಲಾ ವಿನಿಯೋಗಿಸುತ್ತಿದ್ದುದನ್ನು ಬಿಟ್ಟು ಸ್ವಂತ ವಿಚಾರಗಳಿಗೆ ಗಮನಕೊಟ್ಟರು. ಪರಿಷ್ಕರಣದ ವಿಚಾರವು ಮತ್ತೊಮ್ಮೆ ತಲೆಯೆತ್ತಿತು.

ಅಮೆರಿಕದ ಯುದ್ಧವಾದ ಮೇಲೆ (American War of Independence) ಪಾರ್ಲಿಮೆಂಟಿನಲ್ಲಿ ಲಂಚವನ್ನು ತೆಗೆದುಕೊಳ್ಳುವುದು ನಿಂತುಹೋಗಿತ್ತು. ಆದರೂ, ಹೊರಗೆ ಪ್ರತಿನಿಧಿತ್ವದ ಮಾರಾಟವು ಬೇರೆ ನಿಂತಿರಲಿಲ್ಲ. ಯಾರು ಹೆಚ್ಚಾಗಿ ಧನವನ್ನು ಕೊಟ್ಟರೆ ಅವರು ಪ್ರತಿನಿಧಿಗಳಾಗಬಹುದಾಗಿತ್ತು.

ವಾಟರ್‌ಲೂ ಕದನವು ಪೂರೈಸಿದ ಮೇಲೆ, ವರ್ತಕರು, ಬೇಸಾಯಗಾರರು, ಕೂಲಿಯವರು ಮುಂತಾಗಿ ಎಲ್ಲರಿಗೂ, ಪರಿಷ್ಕರಣಗಳು ಆಗುವುದು ಅವಶ್ಯವೆಂದು ಗೊತ್ತಾಯಿತು. ಮೊದಲು ಪಾರ್ಲಿಮೆಂಟ್ ಸಭೆಯನ್ನು ಪರಿಷ್ಕರಿಸಲು ಹೋರಾಡಬೇಕೆಂದು ಎಲ್ಲರೂ ನಿರ್ಧರಿಸಿದರು. ಇದಕ್ಕೆ ಬೆಂಬಲವಾಗಿ ಎರಡು ಪಂಗಡಗಳು ಹುಟ್ಟಿದುವು. ಹಿಂದಿನ ಹ್ವಿಗ್ ಪಂಗಡದವರು ಈಗ ಲಾರ್ಡ್ ಪದವಿಗೆ ಬಂದಿದ್ದ ಗ್ರೇ ಎಂಬಾತನನ್ನು ಮುಂದಿಟ್ಟುಕೊಂಡು ಸವಿಾಚೀನವಾದ ಪರಿಷ್ಕರಣಕ್ರಮವನ್ನು ಪರ್ಯಾಲೋಚಿಸಿ, ತನ್ಮೂಲಕ ಕೆಲಸಕ್ಕೆ ಬಾರದ ಬರೋಗಳಿಗೆ ಪ್ರತಿನಿಧಿತ್ವವಿಚಾರದಲ್ಲಿದ್ದ ಹಕ್ಕು ತಪ್ಪುವಂತೆಯೂ ದೊಡ್ಡ ಪಟ್ಟಣಗಳಿಗೂ, ಕೌಂಟಿಗಳಿಗೂ ಆ ಹಕ್ಕು ಬರುವಂತೆಯೂ ಮಾಡಲು

ಯತ್ನಿಸಿದರು. ಇದೊಂದು ಪಂಗಡ. ಇನ್ನೊಂದು ಪಂಗಡದವರಿಗೆ ರ್‍ಯಾಡಿಕಲ್ಸ್ (Radicals) ಎಂದು ಹೆಸರು. ಇವರು ಪರಿಷ್ಕರಣಗಳ ವಿಚಾರದಲ್ಲಿ ತೀರಾ ಮುಂದುವರಿದು ಹೋಗಿದ್ದರು. ಈ ರೀತಿಯಲ್ಲಿ ರ್‍ಯಾಡಿಕಲ್ಸ್ ಎಂದು ಹೆಸರನ್ನು ಪಡೆದಿದ್ದ ಹ್ವಿಗ್ ಪಂಗಡದಿಂದಲೇ ಈಗಿನ ಲಿಬರಲ್ಸ್ ಎಂಬ ಪಂಗಡವೂ, ಹಿಂದಿನ ಟೋರಿ ಪಂಗಡದಿಂದ ಇಗಿನ ಕನ್‌ಸರ್‌ವೆಟಿವ್ಸ್ ಪಂಗಡವೂ ಹುಟ್ಟಿರುತ್ತವೆ. ಬರ್ಡೆಟ್ (Burdett), ಕಾಬೆಟ್ (Cobbett) ಮತ್ತು ಹಂಟ್ (Hunt) ಎಂಬವರು ರ್‍ಯಾಡಿಕಲರಿಗೆ ಮುಂದಾಳುಗಳಾಗಿ ನಿಂತು ವರುಷಕ್ಕೊಮ್ಮೆ ಪಾರ್ಲಿಮೆಂಟ್ ಸಭೆಯು ಸೇರುವ ವಿಚಾರದಲ್ಲಿಯೂ, ಪ್ರತಿನಿಧಿತ್ವದ ವಿಚಾರದಲ್ಲಿಯೂ, ಅನೇಕಾನೇಕ ಪರಿಷ್ಕರಣಗಳಾಗಬೇಕೆಂದು ಸೂಚಿಸಿದರು. ಎರಡು ಪೌಂಡುಗಳಿಗೆ ಮೇಲೆ ಕಂದಾಯವನ್ನು ಕಟ್ಟುವವರು ಮಾತ್ರವೇ ಪ್ರತಿನಿಧಿಗಳ ಚುನಾವಣೆಯಲ್ಲಿ ಓಟುಗಳನ್ನು ಕೊಡಬೇಕೆಂಬ ನಿರ್ಬಂಧವು ತಪ್ಪಿ, ಸಮಸ್ತರೂ ಓಟುಗಳನ್ನು ಕೊಡುವಂತಾಗಬೇಕೆಂಬುದೇ ಅವರ ಅಭಿಮತವಾಗಿತ್ತು. ಪಾರ್ಲಿಮೆಂಟಿನಲ್ಲಿ ಈ ಪಕ್ಷದವರು ಅನೇಕ ಮಂದಿಗಳಿಲ್ಲದೇ ಇದ್ದುದರಿಂದಲೂ, ಇವರು ಪರಿಷ್ಕರಣವಿಚಾರದಲ್ಲಿ ಬಹಳ ಮುಂದುವರಿದು ಹೋಗಿದ್ದುದರಿಂದಲೂ ಪಾರ್ಲಿಮೆಂಟಿನವರು ಇವರನ್ನು ಪರಿಹಾಸಮಾಡತೊಡಗಿದರು. ೧೮೧೯ರಲ್ಲಿ ಲಾರ್ಡ್‌ಜಾನ್ ರಸೆಲ್ (Lord John Russel) ಎಂಬಾತನು ಈ ಪರಿಷ್ಕರಣದ ಹೋರಾಟದಲ್ಲಿ ಭಾಗಿಯಾಗಿ ನಿಂತ ಬಳಿಕ ಇದಕ್ಕೆ ಜೀವ ಕಳೆಯು ಬಂತು. ಆದರೂ ಪರಿಷ್ಕರಣದ ವಿಚಾರದಲ್ಲಿ ಅನೇಕ ಸಲಹೆಗಳು ನಿರಾಕೃತವಾದುವು. ಬಳಿಕ ೧೮೨೦ರಲ್ಲಿ ಲಾರ್ಡ್ ಜಾನ್ ರಸೆಲನು, ಕೆಲಸಕ್ಕೆ ಬಾರದ ಬರೋಗಳ ಪ್ರತಿನಿಧಿತ್ವದ ಹಕ್ಕನ್ನು ತಪ್ಪಿಸಿ, ಅದನ್ನು ದೊಡ್ಡ ಪಟ್ಟಣಗಳಿಗೆ ಕೊಡಬೇಕೆಂದು ಸೂಚಿಸಿದನು. ಅಷ್ಟರಲ್ಲಿ ದೊರೆಯು ಮೃತನಾದುದರಿಂದ ಈ ಚರ್ಚೆಯನ್ನು ಒಂದು ವರುಷ ಕಾಲ ನಿಲ್ಲಿಸಬೇಕಾಯಿತು. ಬಳಿಕ ಚರ್ಚೆಯು ಮತ್ತೆ ತಲೆದೋರಿ ಗ್ರ್ಯಾಂಪೌಂಡ್ (Grampound) ಎಂಬ ಕೆಲಸಕ್ಕೆಬಾರದ ಬರೋವಿನಿಂದ ಪ್ರತಿನಿಧಿಗಳು ಬರುವುದು ತಪ್ಪಿ, ಅದಕ್ಕೆ ಬದುಲಾಗಿ ಲೀಡ್ಸಿನಿಂದ ಪ್ರತಿನಿಧಿಗಳು ಬರಬೇಕೆಂದು ಪ್ರತಿನಿಧಿಸಭೆಯಲ್ಲಿ ಬಿಲ್ಲು ವಿಧಿತವಾಗಿ ಶ್ರೀಮಂತಸಭೆಗೆ ಒಪ್ಪಿಗೆಗಾಗಿ ಹೋಯಿತು.

ಶ್ರೀಮಂತಸಭೆಯವರಾದರೋ ಲೀಡ್ಸಿನಲ್ಲಿ ತಮಗೆ ಬೇಕಾದವರು ಇಲ್ಲದೇ ಇದ್ದುದರಿಂದ ಅಲ್ಲಿಂದ ಪ್ರತಿನಿಧಿಗಳನ್ನು ಬರಮಾಡಿಕೊಳ್ಳುವುದು ಪ್ರಯೋಜನವಿಲ್ಲವೆಂದೂ, ಯಾವುದಾದರೂ ಒಂದು ಕೌಂಟಿಗೆ ಈ ಹಕ್ಕನ್ನು ಕೊಟ್ಟು ತಮಗೆ ಸ್ವಾಧೀನರಾದವರು ಅಲ್ಲಿಂದ ಪ್ರತಿನಿಧಿಗಳಾಗಿ ಬರುವಂತೆ ಮಾಡಿ

ಕೊಳ್ಳುವುದು ಲೇಸೆಂದೂ, ಬಗೆದು ಲೀಡ್ಸಿನಿಂದ ಪ್ರತಿನಿಧಿಗಳನ್ನು ಬರಮಾಡಿ ಕೊಳ್ಳುವುದಕ್ಕೆ ಸಮ್ಮತಿಸದೆ, ಯಾರ್ಕ್ ಕೌಂಟಿಯಿಂದ ಪ್ರತಿನಿಧಿಗಳು ಬರ ತಕ್ಕುದೆಂದು ಗೊತ್ತುಮಾಡಿದರು. ಅಂದಿನಿಂದ ಶ್ರೀಮಂತಸಭೆಯವರು ದೊಡ್ಡ ಪಟ್ಟಣಗಳ ನಿವಾಸಿಗಳ ಶತ್ರುಗಳೆಂದು ಭಾವನೆಯುಂಟಾಯಿತು. ಆಗಲಾ ದರೋ, ಜನರಲ್ಲಿ ಅಸಂತುಷ್ಟತೆಯು ನೆಲೆಗೊಂಡಿತ್ತು; ಮಂತ್ರಿಗಳು ಜನರ ಅನುರಾಗಕ್ಕೆ ಪಾತ್ರರಾಗಿರಲಿಲ್ಲ; ಅವರನ್ನು ಕಂಡರೆ ಯಾರಿಗೂ ಆಗದು; ಫ್ರಾನ್ಸ್ ದೇಶದಂತೆಯೇ ಇಂಗ್ಲೆಂಡಿನಲ್ಲಿಯೂ ರಾಜ್ಯವಿಪ್ಲವವಾಗುವಂತಿತ್ತು. ಇಂತಹ ಸಂಧಿಗ್ಧಸಮಯದಲ್ಲಿ ತಾವು ಲೇಶಮಾತ್ರ ಪರಿಷ್ಕರಣಕ್ಕೆ ಅವಕಾಶ ಕೊಟ್ಟರೆ ರಾಜ್ಯವಿಪ್ಲವವು ಉಕ್ಕಿ ಹರಿಯುವಂತಾಗುವುದೆಂಬ ಭಯದಿಂದ ಶ್ರೀಮಂತಸಭೆಯವರು ಹೀಗೆ ಮಾಡಬೇಕಾಯಿತು. ಈ ಎರಡುಕಾರಣಗ ಳಿಂದ, ಅವರು ಪ್ರತಿನಿಧಿಸಭೆಯವರು ಕಳುಹಿಸಿದ ಬಿಲ್ಲಿಗೆ ಸಮ್ಮತಿಸಲಿಲ್ಲ.

೧೮–೨೮ನೆಯ ಇಸವಿಯಲ್ಲಿ, ಪೆನ್ರಿನ್ ಎಂಬುದಕ್ಕೆ ಬದಲಾಗಿ ಮ್ಯಾಂಚೆಸ್ಟರಿಗೆ ಪ್ರತಿನಿಧಿತ್ವವನ್ನು ಕೊಡಬೇಕೆಂದು ಪ್ರತಿನಿಧಿಸಭೆಯಿಂದ ಬಂದ ಬಿಲ್ಲನ್ನೂ ಶ್ರೀಮಂತಸಭೆಯವರು ಹೀಗೆಯೇ ಹೊಡೆದುಹಾಕಿದರು. ಹೀಗೆ ಯೇ ವೆಲಿಂಗ್ಟನ್ ಡ್ಯೂಕನ ಪ್ರಧಾನಮಂತ್ರಿತ್ವದಲ್ಲಿ ಆತನ ಪಕ್ಷದವರು ಲಾರ್ಡ್ ಪಾಮರ್‌ಸ್ಟನ್ ಮುಂತಾದವರು, ರಾಜೀನಾಮೆ ಕೊಟ್ಟುದಕ್ಕೂ ಲಕ್ಷಿಸದೆ, ಈಸ್ಟ್ ರೆಟ್‌ಫರ್ಡ್ (East Retford) ನಿಂದ ಪ್ರತಿನಿಧಿಗಳು ಬರುವುದಕ್ಕೆ ಬದಲಾಗಿ ಬರ್ಮಿಂಘಾಮಿನಿಂದ ಪ್ರತಿನಿಧಿಗಳು ಬರುವಂತಾಗಬೇಕೆಂದು ಪ್ರತಿ ನಿಧಿಸಭೆಯಿಂದ ಬಂದ ಬಿಲ್ಲನ್ನು ಹೊಡೆದುಹಾಕಿದರು. ಅಂತು, ಮ್ಯಾಂಚೆಸ್ಟರ್, ಬರ್ಮಿಂಘಾಂ, ಲೀಡ್ಸ್ ಎಂಬ ಮೂರು ದೊಡ್ಡ ಪಟ್ಟಣಗಳಿಗೂ ಪ್ರತಿನಿಧಿತ್ವ ವಿಲ್ಲದಂತಾಯಿತು.

ಇಷ್ಟರಲ್ಲಿ ಪ್ರಧಾನಸಚಿವನಾದ ವೆಲಿಂಗ್ಟನ್ ಡ್ಯೂಕನು ಶ್ರೀಮಂತಸಭೆ ಯಲ್ಲಿ, ಇಂಗ್ಲೆಂಡಿನಲ್ಲಿದ್ದಷ್ಟು ಉತ್ತಮವಾದ ಮಂತ್ರಾಲೋಚನಾಸಭೆಯು ಮತ್ತಾವ ದೇಶದಲ್ಲಿಯೂ ಇರಲಿಲ್ಲವೆಂದೂ, ತಾನು ಯಾವ ಪರಿಷ್ಕರಣಕ್ಕೂ ಮನಸ್ಸು ಕೊಡತಕ್ಕವನಲ್ಲವೆಂದೂ, ಆ ವಿಷಯದಲ್ಲಿ ಹೋರಾಡುವವರಿಗೆ ಪ್ರತಿ ಹೇಳಬೇಕಾಗಿದ್ದುದು ತನ್ನ ಕರ್ತವ್ಯವೆಂದೂ ಭಾಷಣಮಾಡಿದನು. ಆದ ರೇನು? ಈ ವೇಳೆಗೆ, ಜನರಿಗೆ ಅಚ್ಚುಮೆಚ್ಚಾಗಿದ್ದ ನಾಲ್ಕನೆಯ ವಿಲಿಯಂ ದೊರೆಯು ಪಟ್ಟಕ್ಕೆ ಬಂದುದರಿಂದ, ಪರಿಷ್ಕರಣಕ್ಕಾಗಿ ಹೋರಾಡುತ್ತಿದ್ದ ವರೆಲ್ಲಾ ಐಕಮತ್ಯದಿಂದ ಒಟ್ಟಿಗೆ ಸೇರಿದರು. ಟೋರೀಪಂಗಡದವರೂ,

ಶ್ರೀಮಂತಸಭೆಯುವರೂ, ಅವರಿಗೆ ಪ್ರತಿಕಕ್ಷಿಗಳಾಗಿ ನಿಂತರು. ಹೋರಾಟಕ್ಕೆ ಪುನಃ ಆರಂಭವಾಯಿತು.

೧೮೩೦ರಲ್ಲಿ ನಡೆದ ಪ್ರತಿನಿಧಿಗಳ ಚುನಾವಣೆಯಿಂದ (Election) ಪ್ರತಿನಿಧಿಸಭೆಯಲ್ಲಿ ಪರಿಷ್ಕರಣಕ್ಕಾಗಿ ಹೋರಾಡುತ್ತಿದ್ದವರ ಸಂಖ್ಯೆಯೇ ಬಹಳ ಹೆಚ್ಚಾಗಿತ್ತು. ದೊರೆಯು ಲಾರ್ಡ್ ಗ್ರೇ ಎಂಬಾತನನ್ನು ಪ್ರಧಾನ ಸಚಿವನನ್ನಾಗಿ ಮಾಡಿದನು. ಪರಿಷ್ಕರಣ ವಿಚಾರದಲ್ಲಿ, ಪ್ರತಿನಿಧಿಸಭೆಯಲ್ಲಿ ನಡೆದು ತಮ್ಮಲ್ಲಿಗೆ ಬಂದ ಬಿಲ್ಲುಗಳನ್ನು ಶ್ರೀಮಂತಸಭೆಯುವರು ಅನೇಕವೇಳೆ ತಿರಸ್ಕರಿಸಿದರು. ಮಂತ್ರಿಗಳು ರಾಜೀನಾಮೆ ಕೊಟ್ಟರು. ವೆಲಿಂಗ್ಟನ್ ಡ್ಯೂಕನು ಪ್ರಧಾನಸಚಿವನಾಗಲು ಯತ್ನಿಸಿದನು. ಅವನ ಪ್ರಯತ್ನವು ವಿಫಲವಾಯಿತು. ಕೊನೆಗೆ ನಾಲ್ಕನೆಯ ಸಾರಿ ಪರಿಷ್ಕರಣಕ್ಕಾಗಿ ಶ್ರೀಮಂತರ ಒಪ್ಪಿಗೆಗೆ ಬಿಲ್ಲನ್ನು ಕಳುಹಿಸಿದುದಾಯಿತು. ಈ ಸಾರಿಯೂ ತಾವು ಅದನ್ನು ನಿರಾಕರಿಸುವುದಾದರೆ ಹೊಸದಾಗಿ, ತನ್ನ ಕಡೆಗಿರುವ ಪ್ರಭುಗಳನ್ನು (Peers) ಸೃಷ್ಟಿಸಿ, ದೊರೆಯು ಬಿಲ್ಲನ್ನು ಆಚರಣೆಗೆ ತರುವಂತೆ ಮಾಡಬಹುದೆಂದು ಹೆದರಿ ಶ್ರೀಮಂತಸಭೆಯುವರು ಬಿಲ್ಲಿಗೆ ತಮ್ಮ ಒಪ್ಪಿಗೆಯನ್ನು ಕೊಟ್ಟರು.

೧೮೩೨ರಲ್ಲಿ ವಿಧಿತವಾದ ಈ ಬಿಲ್ಲಿನಿಂದ ಪ್ರತಿನಿಧಿಸಭೆಯಲ್ಲಿ ಎಲ್ಲಾ ಪಂಗಡದವರಿಗೂ ಪ್ರತಿನಿಧಿತ್ವವು ದೊರೆಯುವಂತಾಯಿತು. ಪ್ರತಿನಿಧಿಸಭೆಗೆ ಪ್ರಾಬಲ್ಯವು ಮತ್ತಷ್ಟು ಹೆಚ್ಚಾಯಿತು. ಕೆಲಸಕ್ಕೆಬಾರದ ಐವತ್ತೈದು ಸಣ್ಣ ಸಣ್ಣ ಬರೋಗಳಿಂದ ಪ್ರತಿನಿಧಿಗಳು ಬಾರದಂತಾಯಿತು. ಮೂವತ್ತೆರಡು ಬರೋಗಳಲ್ಲಿ ಒಂದೊಂದಕ್ಕೂ ಒಂದೊಂದರಂತೆ ಪ್ರತಿನಿಧಿಗಳ ಸಂಖ್ಯೆಯು ಕಡಿಮೆಯಾಯಿತು. ಇವುಗಳ ಸ್ಥಾನಕ್ಕೆ ಇತರ ದೊಡ್ಡ ಪಟ್ಟಣಗಳಿಂದಲೂ, ಕೌಂಟಿಗಳಿಂದಲೂ ಪ್ರತಿನಿಧಿಗಳು ಬರುವಂತಾಯಿತು. ಹೀಗೆಯೇ ಇನ್ನೂ ಅನೇಕ ಮಾರ್ಪುಗಳನ್ನು ಮಾಡಿ ಪ್ರತಿನಿಧಿತ್ವದ ವಿಚಾರದಲ್ಲಿ ನ್ಯಾಯವೂ ಸಮತೆಯೂ ನೆಲೆಗೊಳ್ಳುವಂತೆ ಮಾಡಿದುದಾಯಿತು.

೧೮೬೭ರಲ್ಲಿ ರಿಫಾರಂ ಆಕ್ಟ್ ಎಂಬ ಮತ್ತೊಂದು ಪರಿಷ್ಕರಣನಿಬಂಧನೆಯಾಯಿತು. ಇದರಿಂದ ಪುನಃ, ಕೆಲಸಕ್ಕೆಬಾರದ ಹನ್ನೊಂದು ಬರೋಗಳಿಗೆ ಪ್ರತಿನಿಧಿತ್ವವು ಪೂರ್ಣವಾಗಿ ತಪ್ಪಿಹೋಯಿತು; ಮೂವತ್ತೈದು ಬರೋಗಳಿಗೆ ಅರೆವಾಸಿ ತಪ್ಪಿಹೋಯಿತು. ಇವುಗಳಿಂದ ಬರುತ್ತಿದ್ದ ಪ್ರತಿನಿಧಿಗಳಿಗೆ ಬದುಲಾಗಿ ದೊಡ್ಡಪಟ್ಟಣಗಳಿಂದಲೂ, ಕೌಂಟಿಗಳಿಂದಲೂ, ಪ್ರತಿನಿಧಿಗಳು ಬರುವಂತಾಯಿತು. ಪ್ರತಿನಿಧಿಗಳ ಚುನಾವಣೆಯಲ್ಲಿ ಹೆಚ್ಚು ಮಂದಿಗಳು ಓಟುಗಳನ್ನು ಕೊಡುವಂತಾಯಿತು. ಪ್ರತಿನಿಧಿಗಳನ್ನು ಆರಿಸುವುದರಲ್ಲಿ

ಅಧಿಕಾರವು ಅರ್ಹರಾದವರೆಲ್ಲರಿಗೂ ಬರಬೇಕೆಂಬುದೇ ಈ ನಿಬಂಧನೆಗಾಗಿ ಹೋರಾಡಿದವರ ಮುಖ್ಯತಾತ್ಪರ್ಯ. ಉದಾರಭಾವವುಳ್ಳ ಗ್ಲ್ಯಾಡ್‌ಸ್ಟನ್ ಎಂಬಾತನ ಸಹಾಯದಿಂದ ಈ ನಿಬಂಧನೆಯು ವಿಧಿತವಾಯಿತು.

೧೮೮೪ರಲ್ಲಿ ಮತ್ತೊಂದು "ರಿಫಾರಂ ಆಕ್ಟ್" (Reform Act) ವಿಧಿತವಾಯಿತು. ಇದರಿಂದ ಕೂಲಿನಾಲಿಯಿಂದ ಜೀವಿಸುತ್ತಿದ್ದ ಕೆಲಸಗಾರರಿಗೆಕೂಡ (labourers) ಪ್ರತಿನಿಧಿಗಳ ಚುನಾವಣೆಯಲ್ಲಿ ಓಟು ಕೊಡುವ ಅಧಿಕಾರವು ಬಂತು. ಓಟುಗಳನ್ನು ಕೊಡುವವರ ಸಂಖ್ಯೆಯು ಹೆಚ್ಚಿತು. ಮೊದಲಿಗಿಂತಲೂ ಹೆಚ್ಚಾಗಿ ಇಪ್ಪತ್ತು ಲಕ್ಷ ಮಂದಿಗಳಿಗೆ ಈ ಅಧಿಕಾರವು ಬಂತು. ಈ ನಿಬಂಧನೆಯನ್ನು ವಿಧಿಸುವುದರಲ್ಲಿ ಭಿನ್ನಾಭಿಪ್ರಾಯಗಳು ಹುಟ್ಟಿ ಎಷ್ಟೋ ತರ್ಕವಿತರ್ಕಗಳಾದುವು. ವಿಕ್ಟೋರಿಯಾ ರಾಣಿಯವರು ಎಲ್ಲವನ್ನೂ ಸರಿಮಾಡಿ ನಿಬಂಧನೆಯು ಆಚರಣೆಗೆ ಬರುವುದಕ್ಕೆ ಅವಕಾಶವನ್ನು ಕಲ್ಪಿಸಿದರು. ಪ್ರತಿನಿಧಿಗಳನ್ನು ಆರಿಸುವುದರಲ್ಲಿ ಇನ್ನೂ ಹೆಚ್ಚು ಮಂದಿಯೂ ಓಟುಗಳನ್ನು ಕೊಡುವಂತೆ ಮಾಡುವುದು ಈಚೆಗೆ ಆಚರಣೆಗೆ ಬಂದಿದೆ.

೧೮೨೯ರಲ್ಲಿ ನಡೆದ ನಿಬಂಧನೆಯಿಂದ, ಕ್ಯಾಥೊಲಿಕರು ಪಾರ್ಲಿಮೆಂಟಿಗೂ ಅಧಿಕಾರಗಳಿಗೂ ಬರಬಹುದೆಂದು ಗೊತ್ತಾಯಿತು. ೧೮೫೮ರಲ್ಲಿ ಯಹೋದ್ಯರು (Jews) ಕೂಡ, ಕ್ರೈಸ್ತರಂತೆ ಪ್ರಮಾಣ ಮಾಡದೆ ಸಾಮಾನ್ಯ ರೀತಿಯಲ್ಲಿ ವಾಗ್ದಾನಮಾಡಿ ಕೆಲಸಗಳಿಗೆ ಬರಬಹುದೆಂದು ಗೊತ್ತಾಯಿತು. ಕ್ಯಾಥೊಲಿಕರ ಮತ್ತು ಯೆಹೋದ್ಯರ ಸಂಬಂಧವಾದ ಕಷ್ಟಗಳು ಇಲ್ಲಿಗೆ ಕೊನೆಗಂಡುವು. ೧೮೩೩ರಲ್ಲಿ ಉಂಟಾದ ನಿಬಂಧನೆಯಿಂದ, ಕ್ವೇಕರ್ ಸಂಗಡದವರಿಗೂ ಈ ಸೌಲಭ್ಯವು ದೊರೆಯಿತು. ೧೮೮೦ರಲ್ಲಿ ನಡೆದ ನಿಬಂಧನೆಯಿಂದ ಮತವಿಷಯಕವಾದ ತೊಂದರೆಗಳು ಸಂಪೂರ್ಣವಾಗಿ ತಪ್ಪಿ, ಎಲ್ಲಾ ಮತದವರಿಗೂ ಸಮಾನವಾದ ಸ್ಥಾನವು ದೊರೆಯುವಂತಾಯಿತು.

ಪ್ರತಿನಿಧಿಗಳ ಚುನಾವಣೆಯ ಕಾಲದಲ್ಲಿ ನಡೆಯುತ್ತಿದ್ದ, ಲಂಚವನ್ನು ತೆಗೆದುಕೊಳ್ಳುವುದೇ ಮುಂತಾದ ಕೆಟ್ಟ ಪದತಿಗಳು ೧೮೮೩ರಲ್ಲಿ ಹುಟ್ಟಿದ "ಕರಪ್ಟ್ ಅಂಡ್ ಇಲ್ಲೀಗಲ್ ಪ್ರ್ಯಾಕ್ಟಿಸಸ್ ಆಕ್ಟ್" (Corrupt and Illegal Practices Act) ಎಂಬ ಒಂದು ನಿಬಂಧನೆಯಿಂದ ನಿಲ್ಲುವುದಕ್ಕೆ ಅವಕಾಶವಾಯಿತು.

೧೯೦೬ನೆಯ ಇಸವಿಯಲ್ಲಿ ಶ್ರೀಮಂತಸಭೆಯವರಿಗೂ ಪ್ರತಿನಿಧಿಸಭೆಯವರಿಗೂ ಮನಸ್ತಾಪವು ಬಂತು. ಶ್ರೀಮಂತಸಭೆಯವರು ೧೯೦೯ನೆಯ ವರುಷದ

'ಬಡ್ಜೆಟ' ಎಂಬ ಆದಾಯವ್ಯಯದ ಅಂದಾಜು ಪಟ್ಟಿಯನ್ನು ಅನುಮೋದಿಸದೇ ಹೋದಾಗ ಇದು ಮತ್ತಷ್ಟು ಹೆಚ್ಚಿತು. ಶ್ರೀಮಂತಸಭೆಯುವರು ಹೀಗೆ ಬಿಲ್ಲುಗಳನ್ನು ನಿಷೇಧಿಸುತ್ತಿದ್ದುದನ್ನು ತಪ್ಪಿಸಲು ಪ್ರತಿನಿಧಿಸಭೆಯಲ್ಲಿ ಪ್ರಯತ್ನವು ನಡೆಯಲಾರಂಭವಾಯಿತು. ಪ್ರತಿನಿಧಿಸಭೆಯಿಂದ ಹೋದ ಬಿಲ್ಲನ್ನು ಶ್ರೀಮಂತಸಭೆಯುವರು ಅನುಮೋದಿಸಿದಲ್ಲದೆ ಅದು ನಿಬಂಧನೆಯಾಗಿ ಪರಿಣಮಿಸುವುದು ಅಸಾಧ್ಯವಾಗಿತ್ತು; ಶ್ರೀಮಂತಸಭೆಯುವರು ಸುಲಭವಾಗಿ ಬಿಲ್ಲನ್ನು ಅನುಮೋದಿಸುವುದು ಅಪೂರ್ವ. ಇದರಿಂದ ಬಹಳ ತೊಂದರೆಯಾಗುತ್ತಿತ್ತು. ಇದನ್ನು ಪರಿಹರಿಸುವ ಆಲೋಚನೆಯೂ ನಡೆಯುತ್ತಿತ್ತು. ಅಷ್ಟರಲ್ಲಿ ಎಡ್ವರ್ಡ್ ದೊರೆಗಳು ಕಾಲವಾದುದರಿಂದ (೧೯೧೦), ಯಾವುದಾದರೂ ಒಂದು ರೀತಿಯಲ್ಲಿ ಎರಡು ಸಭೆಯುವರಿಗೂ ಇದ್ದ ಮನಸ್ತಾಪವನ್ನು ಬೇಗನೆ ಹೋಗಲಾಡಿಸಬೇಕೆಂಬ ಸಂಕಲ್ಪವುಂಟಾಯಿತು. ಇದಕ್ಕಾಗಿ, ಎರಡು ಸಭೆಗಳವರು ಆರಿಸಿದ ಕೆಲವು ಮಂದಿ ಸದಸ್ಯರಿಂದ ಕೂಡಿದ ಉಪಸಭೆಯೊಂದು ಏರ್ಪಾಡಾಯಿತು. ಆದರೂ, ವಿಷಯವು ವ್ಯವಸ್ಥೆಯಾಗಲಿಲ್ಲ. ಮತ್ತೊಮ್ಮೆ ಪ್ರತಿನಿಧಿಗಳ ಚುನಾವಣೆ (General Election) ಆಯಿತು. ಬಳಿಕ ಶ್ರೀಮಂತಸಭೆಯುವರು ಬಿಲ್ಲುಗಳನ್ನು ನಿಷೇಧಿಸುತ್ತಿದ್ದುದನ್ನು ತಪ್ಪಿಸುವುದಕ್ಕಾಗಿ ಪ್ರತಿನಿಧಿಸಭೆಯುವರು ಒಂದು ಬಿಲ್ಲನ್ನು ರಚಿಸಿ ಅದನ್ನು ಶ್ರೀಮಂತಸಭೆಗೆ ಕಳುಹಿಸಿದರು. ಅವರು ಅದನ್ನು ತಮಗೆ ಬೇಕಾದಂತೆ ತಿದ್ದುಪಾಟುಮಾಡಲು ಯತ್ನಿಸಿದರು. ಸರಕಾರದವರು ಇದಕ್ಕೆ ಒಪ್ಪಲಿಲ್ಲ. ಪ್ರಧಾನಸಚಿವರಾದ 'ಆಸ್ಕ್ವಿತ್' (Mr. Asquith) ಎಂಬವರು ಶ್ರೀಮಂತಸಭೆಯುವರು ಬಿಲ್ಲನ್ನು ಅನುಮೋದಿಸದೆ ಇರುವುದಾದರೆ, ಹಿಂದೆ ನಡೆದಿದ್ದ ಪೀರೇಜ್ ಬಿಲ್ಲನ್ನು ರದ್ದುಮಾಡಿ ಕೆಲವು ಮಂದಿ ಪೀರ್‌ಗಳನ್ನು (ಶ್ರೀಮಂತರನ್ನು) ಹೊಸದಾಗಿ ಕಲ್ಪಿಸಿ, ತನ್ಮೂಲಕವಾಗಿ ಪ್ರತಿನಿಧಿಸಭೆಯುವರ ಕೋರಿಕೆಯನ್ನು ನೆರವೇರಿಸಬೇಕೆಂದು ತಾವು ಜಾರ್ಜ್ ಪ್ರಭುಗಳವರಿಗೆ ವಿಜ್ಞಾಪಿಸುವುದಾಗಿಯೂ, ತಾವು ಹಾಗೆ ಮಾಡುವುದಾದರೆ ಪ್ರಭುಗಳು ಅವಶ್ಯವಾಗಿ ತಮ್ಮ ಪ್ರಾರ್ಥನೆಯನ್ನು ನಡೆಯಿಸುವರೆಂದೂ ತಿಳಿಸಿದರು. ಬಳಿಕ ಶ್ರೀಮಂತಸಭೆಯುವರು ೧೯೧೧ರಲ್ಲಿ "ಪಾರ್ಲಿಮೆಂಟ್ ಆಕ್ಟ್" (Parliament Act) ಎಂಬ ಹೆಸರಿನಿಂದ ಬಿಲ್ಲನ್ನು ಆಚರಣೆಗೆ ತಂದರು. ಇದರಿಂದ, ಪ್ರತಿನಿಧಿಸಭೆಯುವರು ಶ್ರೀಮಂತಸಭೆಗೆ ಎರಡುವೇಳೆ ಬಿಲ್ಲನ್ನು ಕಳುಹಿಸುವುದೆಂದೂ, ಅಲ್ಲಿಗೂ ಶ್ರೀಮಂತಸಭೆಯುವರು ಅದನ್ನು ನಿರಾಕರಿಸುವುದಾದರೆ ಅದೇಬಿಲ್ಲನ್ನು ಪ್ರತಿನಿಧಿಸಭೆಯುವರು ಪುನಃ ಅನುಮೋದಿಸಿದ ಪಕ್ಷದಲ್ಲಿ ಶ್ರೀಮಂತರ ಒಪ್ಪಿಗೆಯೇ ಇಲ್ಲದೆ ಅದು ನಿಬಂಧನೆಯಾಗಿ ಪರಿಣಮಿಸತಕ್ಕುದೆಂದೂ ಗೊತ್ತಾಯಿತು.

ಸಿವಿಲ್ ವಿಚಾರಗಳಲ್ಲಿ ಶ್ರೀಮಂತಸಭೆಯು ಈಗಲೂ ಕೊನೆಯ ಅಪೀಲ್ ಸ್ಥಾನವಾಗಿರುತ್ತದೆ.

ಈಚೆಗೆ ಪಾರ್ಲಿಮೆಂಟ್ ಸಭೆಯ ಕೆಲಸಗಳು ಬಹಳ ಹೆಚ್ಚಾಗಿವೆ. ಇದರಿಂದ, ಪಾರ್ಲಿಮೆಂಟಿನವರು ವಿರಾಮವಿಲ್ಲದೆ ಕೆಲಸಮಾಡಬೇಕಾಗಿರುತ್ತದೆ; ಪಾರ್ಲಿಮೆಂಟ್ ಸಭೆಯಲ್ಲಿರಬೇಕಾಗುವುದರಿಂದ ಪ್ರಧಾನಸಚಿವನ ಇತರ ಕೆಲಸಗಳೆಲ್ಲಾ ಪೂರ್ತಿಯಾಗದೆ ಉಳಿದುಬಿಡುತ್ತವೆ. ಈ ಕುಂದುಗಳನ್ನು ಪರಿಹರಿಸುವ ಬಗೆಯನ್ನು ರಾಜತಂತ್ರವಿಶಾರದರೆಲ್ಲಾ ಪರ್ಯಾಲೋಚಿಸುತ್ತಿದಾರೆ. ಈಗ ಪ್ರತಿನಿಧಿಸಭೆಯು ಕೆಲವು ವಿಧಗಳಲ್ಲಿ ಪರಿವರ್ತಿತವಾಗುವುದರಲ್ಲಿದೆ. ಆದರೆ ಈ ಪರಿವರ್ತನೆಯು ಪೂರೈಸಿದಬಳಿಕ ಅದು ಎಂತಹ ಬದಲಾವಣೆಗಳನ್ನು ಹೊಂದುವುದೆಂಬುದನ್ನು ಈಗಲೇ ಹೇಳುವುದು ಕಷ್ಟ.

ಈಚೆಗೆ, ಪ್ರತಿನಿಧಿಗಳ ಚುನಾವಣೆಯಲ್ಲಿ ತಾವೂ ಓಟುಗಳನ್ನು ಕೊಡುವಂತಾಗಬೇಕೆಂದು ಹೆಂಗಸರು ಹೋರಾಡತೊಡಗಿ ಈ ಬಗೆಯ ಹಕ್ಕನ್ನು ಹೆಂಗಸರೂ ಪಡೆದುಕೊಂಡಿರುವರು.

---

## ಇಪ್ಪತ್ತೊಂದನೆಯ ಪ್ರಕರಣ.

### ರಾಜ್ಯದ ಆಡಳಿತ.

ಆಡಳಿತ ವಿಚಾರಗಳಿಗೆಲ್ಲಾ ಪ್ರಧಾನಸಚಿವನೇ ಅಧ್ಯಕ್ಷನಾಗಿರುತ್ತಾನೆ. ತನಗೆ ಸಹಾಯ ಮಾಡುವುದಕ್ಕಾಗಿ ಆತನು ಕೆಲವು ಮುಖ್ಯಾಧಿಕಾರಿಗಳನ್ನು ಆರಿಸಿಕೊಳ್ಳುವನು; ಇವರೆಲ್ಲರೂ ಮಂತ್ರಿಗಳು. ಅವರಸಭೆಗೆ ಕ್ಯಾಬಿನೆಟ್ ಸಭೆಯೆಂದು ಹೆಸರು. ಕ್ಯಾಬಿನೆಟ್ಟಿನಲ್ಲಿರುವ ಪ್ರತಿಯೊಬ್ಬ ಮಂತ್ರಿಯೂ ನ್ಯಾಯಕ್ಕೆ ವಿರೋಧವಾಗಿ ತಾನು ನಡೆಯಿಸಿದ ಕಾರ್ಯಗಳಿಗೆ ತಾನೇ ಉತ್ತರವಾದಿಯಾಗಿರತಕ್ಕದು. ಆದರೆ ರಾಷ್ಟ್ರೀಯ ವಿಚಾರಗಳಲ್ಲಿ ಕ್ಯಾಬಿನೆಟ್ಟಿನ ಯಾವನೊಬ್ಬ ಮಂತ್ರಿಯು ನಡೆಯಿಸಿದ ಕಾರ್ಯಕ್ಕೂ ಒಟ್ಟು ಕ್ಯಾಬಿನೆಟ್ಟಿನವರೇ ಉತ್ತರವಾದಿಗಳಾಗಿರಬೇಕು. ಇದಕ್ಕೋಸ್ಕರವೇ ಕ್ಯಾಬಿನೆಟ್ಟಿನಲ್ಲಿ ಏನು ನಡೆಯುತ್ತಿರುವುದೆಂಬುದನ್ನು ಪ್ರಭುಗಳ ಅಪ್ಪಣೆಯು ಇಲ್ಲದಿರುವಾಗ ಯಾವ ಮಂತ್ರಿಯೂ ಹೊರಕ್ಕೆ ಬಿಟ್ಟುಕೊಡದೆ ಗೋಪ್ಯವಾಗಿಡುವ ಪದ್ಧತಿಯು ಇರುತ್ತದೆ.

ಪ್ರಧಾನಸಚಿವನಿಗೆ ಸಂಬಳವಿಲ್ಲ. ಸಾಮಾನ್ಯವಾಗಿ ಈ ಪದವಿಯಲ್ಲಿರುವವರಿಗೆ ಬಹಳ ಕೆಲಸದ ಗಲಭೆಯಿಲ್ಲದ ಯಾವುದಾದರೂ ಒಂದು ದೊಡ್ಡ ಹುದ್ದೆಯು ಇದ್ದು, ಅದರಿಂದ ಸಂಬಳವು ಬರುತ್ತದೆ. ಸಾಧಾರಣವಾಗಿ "ಫರ್ಸ್ಟ್ ಲಾರ್ಡ್ ಆಫ್ ದಿ ಟ್ರೆಷರಿ" ಎಂಬ ಕೋಶಾಧ್ಯಕ್ಷಪದವಿಯಲ್ಲಿರುವವರೇ ಪ್ರಧಾನಸಚಿವರಾಗಿರುವುದು ವಾಡಿಕೆಯಲ್ಲಿದೆ. ಪ್ರತಿನಿಧಿಸಭೆಯಲ್ಲಿ ಯಾವ ಪಂಗಡದವರು ಹೆಚ್ಚು ಮಂದಿಗಳಿದ್ದು ಪ್ರಾಬಲ್ಯವನ್ನು ಹೊಂದಿರುವರೋ, ಆ ಪಂಗಡದವರಿಗೆ ಪ್ರಧಾನಸಚಿವನು ಅಧಿನಾಯಕನಾಗಿ ನಿಂತು ಆಡಳಿತಗಳನ್ನು ನಡೆಯಿಸಬೇಕಾಗಿರುತ್ತದೆ. ಸಾಮಾನ್ಯವಾಗಿ ಪ್ರಧಾನಸಚಿವನು ಪ್ರತಿನಿಧಿಸಭೆಯಲ್ಲಿ ಸದಸ್ಯನಾಗಿರುವ ಪದ್ಧತಿಯಿರುತ್ತದೆ.

ಮೂರನೆಯ ಸಾರಿ "ರಿಫಾರಂ ಆಕ್ಟ್" ಎಂಬ ನಿಬಂಧನೆಯು ನಡೆದ ಬಳಿಕ, ಪ್ರತಿನಿಧಿಸಭೆಯವರು ತಮ್ಮ ಹತೋಟಿಗೆ ಒಳಪಟ್ಟು ಕೆಲಸಮಾಡುವಂತೆ ಕ್ಯಾಬಿನೆಟ್ಟಿನವರು ಯತ್ನಿಸುತ್ತಾ ಬರುತ್ತಿದಾರೆ. ಪ್ರತಿನಿಧಿಸಭೆಯಲ್ಲಿ ಯಾವಾಗ ಏನು ನಡೆಯಬೇಕೆಂಬುದನ್ನು ನಿರ್ಧರಿಸಿ "ಟೈಂ ಟೇಬಲ್" (Time-table) ಎಂದರೆ ವೇಳಾಪತ್ರಿಕೆಯನ್ನು ಗೊತ್ತುಮಾಡುವುದು ಸರಕಾರದವರ ಕೈಯಲ್ಲಿಯೇ ಇರುತ್ತದೆ. ಆದುದರಿಂದ, ಸರಕಾರದವರು ಒತ್ತಾಸೆ ಕೊಡದೆ ಇದ್ದರೆ ಎಂತಹ ಅವಶ್ಯವಾದ ನಿಬಂಧನೆಯನ್ನು ಆಚರಣೆಗೆ ತರುವುದೂ ಕಷ್ಟವಾಗುತ್ತದೆ.

ದೊರೆಯು ಕೈಕೆಳಗೆ ಅನೇಕಮಂದಿ ಕಾರ್ಯದರ್ಶಿಗಳಿರುತ್ತಾರೆ. ಈ ಕಾರ್ಯದರ್ಶಿ (ಸೆಕ್ರೆಟರಿ)ಗಳಲ್ಲೆಲ್ಲಾ "ಹೋಂ ಸೆಕ್ರೆಟರಿ" ಎಂಬಾತನದೇ ಹೆಚ್ಚಿನ ಪದವಿ. ಈತನು ದೊರೆಗೂ, ಪ್ರಜೆಗಳಿಗೂ ಮಧ್ಯದಲ್ಲಿ ನಿಂತು ಕಾರ್ಯಗಳನ್ನು ನಡೆಯಿಸುತ್ತಾನೆ. ಸೆಕ್ರೆಟರಿಗಳದೇ ಒಂದು ಇಲಾಖೆಯಾಗಿರುವುದರಿಂದ, ಅವರಲ್ಲಿ ಯಾರು ಬೇಕಾದರೂ ಮತ್ತೊಬ್ಬರ ಕೆಲಸವನ್ನು ನೋಡಿಕೊಳ್ಳಬಹುದು. ಈ ಸೆಕ್ರೆಟರಿಗಳಲ್ಲಿ ಒಬ್ಬೊಬ್ಬನೂ ಒಂದೊಂದು ಬಾಬನ್ನು ನೋಡಿಕೊಳ್ಳುತ್ತಾನೆ.

ರಾಜ್ಯದ ಆಡಳಿತವನ್ನು ನಡೆಯಿಸುವುದರಲ್ಲಿ ಸಹಕಾರಿಯಾಗುವಂತೆ ವ್ಯಾಪಾರದ ಬೋರ್ಡ್ (Board of Trade), ವಿದ್ಯಾಭ್ಯಾಸದ ಬೋರ್ಡ್ (Board of Education), ಸ್ಥಳೀಯಾಡಳಿತದ ಬೋರ್ಡ್ (Local Government Board), ಮರಾಮತ್ ಬೋರ್ಡ್ (The Board of Works) ಮತ್ತು ವ್ಯವಸಾಯದ ಬೋರ್ಡ್ (The Board of Agriculture), ಎಂಬ ಐದು ಸಭೆಗಳಿವೆ. ಈ ಸಭೆಗಳು ಪ್ರಿವಿ ಕೌನ್ಸಿಲಿನ ಉಪಸಭೆಗಳಾಗಿರುತ್ತವೆ.

ಈ ಸಭೆಗಳೇನೋ ಆಗಾಗ ಸೇರುವುದೇ ಇಲ್ಲವಾದಕಾರಣ, ಈ ಐವರು ಮಂತ್ರಿಗಳಲ್ಲಿ ಒಬ್ಬೊಬ್ಬನೂ ತನ್ನ ಇಲಾಖೆಯಲ್ಲಿ ತಾನೇ ಪೂರ್ಣಾಧಿಕಾರವನ್ನು ನಡೆಯಿಸಬಹುದಾಗಿರುತ್ತದೆ. ಇವರಲ್ಲಿ, ವಿದ್ಯಾಭ್ಯಾಸದ ಬೋರ್ಡಿಗೆ ಮುಖಂಡನಾದ ಮಂತ್ರಿಯು ಉಳಿದ ಮುಖ್ಯಸ್ಥರಷ್ಟು ಗಣ್ಯನಲ್ಲವೆಂದು ಭಾವನೆಯಿರುವುದು ಶೋಚನೀಯವಾಗಿರುತ್ತದೆ. ಈ ಮಂತ್ರಿಗಳೂ ಕ್ಯಾಬಿನೆಟ್ಟಿಗೆ ಸೇರಿದವರು.

ಒಂದೊಂದು ಇಲಾಖೆಯಲ್ಲಿಯೂ ಅನೇಕ ಅಧಿಕಾರಿಗಳಿರುತ್ತಾರೆ. ಅವರಿಂದಲೇ ಕೆಲಸವು ನಡೆಯಬೇಕಾಗಿರುತ್ತದೆ. ಇಲಾಖೆಗಳಿಗೆ ಮುಖ್ಯಸ್ಥರಾಗಿರುವ ಮಂತ್ರಿಗಳೇನೋ ಪ್ರತಿನಿಧಿಸಭೆಯಲ್ಲಿ ಯಾವ ಪಂಗಡದವರಿಗೆ ಪ್ರಾಬಲ್ಯವಿರುವುದೆಂಬುದನ್ನನುಸರಿಸಿ ಬದಲಾಯಿಸುತ್ತಿರುತ್ತಾರೆ. ಆದರೆ, ಇಲಾಖೆಗಳ ಇತರ ಅಧಿಕಾರಿಗಳುಮಾತ್ರ ಹೀಗೆ ಮಾರ್ಪಡಬೇಕಾಗಿಲ್ಲ. ಇಲಾಖೆಯಲ್ಲಿ ನಡೆಯುವ ಕೆಲಸಗಳಿಗೆಲ್ಲಾ ಅದಕ್ಕೆ ಮುಖ್ಯಸ್ಥನಾಗಿರುವ ಮಂತ್ರಿಯೇ ಉತ್ತರವಾದಿಯಾಗಿರುತ್ತಾನೆ. ಆದುದರಿಂದ, ಆತನು ಕಾರ್ಯಗಳನ್ನೆಲ್ಲಾ ಸಮಗ್ರವಾಗಿ ಪರಿಶೀಲಿಸುತ್ತಾ ಅಚಾತುರ್ಯಗಳು ನಡೆಯದಂತೆ ಜಾಗರೂಕನಾಗಿರಬೇಕಾಗಿರುತ್ತದೆ. ನ್ಯಾಯವಿಮರ್ಶೆಯ ವಿಚಾರಕ್ಕೂ ಕೂಲಿಯೇ ಮುಂತಾದ ಕೆಲಸ (Labour) ದ ವಿಚಾರಕ್ಕೂ, ಪ್ರಮುಖರಾಗಿ ಮಂತ್ರಿಗಳು ಏರ್ಪಟ್ಟಿಲ್ಲ. ಇವುಗಳಲ್ಲಿ ಮೊದಲನೆಯದನ್ನು ಛಾನ್ಸಲರ್ ಮುಂತಾದವರೂ, ಎರಡನೆಯದನ್ನು ಬೋರ್ಡ್ ಆಫ್ ಟ್ರೇಡ್ (ವ್ಯಾಪಾರದಬೋರ್ಡ)ನವರೂ, ನೋಡಿಕೊಳ್ಳುತ್ತಿದ್ದಾರೆ.

"ದಿ ಕಂಟ್ರೋಲರ್ ಅಂಡ್ ಆಡಿಟರ್ ಜನರಲ್" (The Comptroller and Auditor General) ಎಂಬಾತನು ಒಬ್ಬ ದೊಡ್ಡ ಅಧಿಕಾರಿ. ೧೮೬೬ರಲ್ಲಿ "ದಿ ಕಂಟ್ರೋಲರ್ ಅಂಡ್ ಆಡಿಟ್ ಆಕ್ಟ್" ಎಂಬ ನಿಬಂಧನೆಯು ನಡೆದಾಗಿನಿಂದ, ಈ ಅಧಿಕಾರಿಯು ನಿಯಮಿತನಾಗಿರುತ್ತಾನೆ. ಈ ಅಧಿಕಾರಿಯು ಪಾರ್ಲಿಮೆಂಟಿನಿಂದ ನಿಯಮಿತನಾಗತಕ್ಕವನು. ಪಾರ್ಲಿಮೆಂಟಿನವರು ಕೊಟ್ಟ ಹಣವು ಅವರ ಕೋರಿಕೆಯಂತೆ ವೆಚ್ಚವಾಯಿತೇ ಇಲ್ಲವೇ ಎಂಬುದನ್ನು ನೋಡಿಕೊಳ್ಳುವುದು ಈತನ ಕೆಲಸ. ಇಂಗ್ಲೆಂಡ್ ಬ್ಯಾಂಕಿನ ಕನ್ಸಾಲಿಡೇಟೆಡ್ ಫಂಡಿ (Consolidated Fund) ನಿಂದ ಈತನರುಜುವಿಲ್ಲದೆ ಹಣವನ್ನು ಕೊಡುವುದಿಲ್ಲ.

ನಾಲ್ಕನೆಯ ವಿಲಿಯಂ ದೊರೆಯ ಕಾಲದಲ್ಲಿ ಸ್ಥಾಪಿತವಾದ 'ಎಕ್ಲೀಸಿಯಾಸ್ಟಿಕಲ್ ಕಮಿಷನ್' (Ecclesiastical Commission) ಎಂಬ ಸಭೆಯು ಮತ

ವಿಚಾರಗಳನ್ನೂ, ಅದೇ ದೊರೆಯ ಕಾಲದಲ್ಲಿ ೧೮೩೩ರಲ್ಲಿ ಸ್ಥಾಪಿತವಾದ 'ಚಾರಿಟಿ ಕಮಿಷನ್' (Charity Commission) ಎಂಬ ಸಭೆಯು ಧರ್ಮ ಕಾರ್ಯಗಳಿಗಾಗಿ ಪುದುವಟ್ಟು ಹಾಕಿದ ಸ್ವತ್ತುಗಳ ವಿಚಾರವನ್ನೂ ಮೇಲ್ವಿಚಾರಣೆಮಾಡಿ ನೋಡಿಕೊಳ್ಳುವಂತೆ ಏರ್ಪಾಡಾಗಿರುತ್ತದೆ.

ಇನ್ನು, ರಾಷ್ಟ್ರೀಯಸಂಬಂಧವಾದ ಆದಾಯ ವೆಚ್ಚಗಳು ಹೇಗೆ ನಡೆಯುವುವೆಂದು ತಿಳಿದುಕೊಳ್ಳಬೇಕಾಗಿದೆ. ಮುಂದಿನ ವರುಷದ ಬಡ್ಜೆಟ್ಟನ್ನು ಎಂದರೆ (ಆದಾಯವೆಚ್ಚದ ಅಂದಾಜ್ ಪಟ್ಟಿಯನ್ನು) ಮೊದಲು ಕೋಶಾಧ್ಯಕ್ಷನಿಗೂ, ಬಳಿಕ ಕ್ಯಾಬಿನೆಟ್ಟಿಗೂ ಕಳುಹಿಸುತ್ತಾರೆ. ಅಲ್ಲಿಂದ ಅದು ಪ್ರತಿನಿಧಿಸಭೆಗೆ ಹೋಗುತ್ತದೆ. ಈ ಸಭೆಯವರು ಹಿಂದಿನವರುಷದಲ್ಲಿ ಹಣವನ್ನು ಹೇಗೆ ವಿನಿಯೋಗಿಸಲಾಗಿದೆಯೆಂದು ಪರ್ಯಾಲೋಚಿಸುತ್ತಾರೆ. ಆಡಳಿತಗಳಲ್ಲಿ ನ್ಯೂನತೆಯು ಕಂಡುಬರುವುದಾದರೆ ಕ್ಯಾಬಿನೆಟ್ಟಿನವರನ್ನು ಆಕ್ಷೇಪಿಸಲು ಇದೇ ತಕ್ಕಸಮಯ. ಪ್ರತಿನಿಧಿಸಭೆಯಿಂದ ಅಂದಾಜಾಪಟ್ಟಿಯು ಶ್ರೀಮಂತಸಭೆಗೆ ಹೋಗುತ್ತದೆ. ಅದನ್ನು ತಿದ್ದುಪಾಟು ಮಾಡುವುದೇಆಗಲೀ, ಅದನ್ನು ನಿರಾಕರಿಸಿ, ಬೇರೆ ಬಡ್ಜೆಟ್ಟು ಏರ್ಪಾಡಾಗಬೇಕೆಂದು ಹೇಳುವುದೇ ಆಗಲೀ, ಇಲ್ಲವೇ ಅನುಮೋದಿಸುವುದೇ ಆಗಲೀ ಶ್ರೀಮಂತಸಭೆಗೆ ಸೇರಿದವಿಷಯ. ಶ್ರೀಮಂತರ ಒಪ್ಪಿಗೆಯು ಆಗುವುದಾದರೆ ಬಡ್ಜೆಟ್ಟು ಆಚರಣೆಗೆ ಬರುವುದು. ವೆಚ್ಚವು ಕಳೆದು ಉಳಿದ ಹಣವನ್ನು ಸಾಮಾನ್ಯವಾಗಿ ರಾಷ್ಟ್ರೀಯ ಋಣವನ್ನು (National Debt) ತೀರಿಸುವುದಕ್ಕಾಗಿ ವಿನಿಯೋಗಿಸುವ ವಾಡಿಕೆಯು ಇರುತ್ತದೆ. ಆದರೆ, ಪ್ರತಿನಿಧಿಸಭೆಯವರು ಆ ಹಣವು ಮತ್ತಾವ ವೆಚ್ಚಕ್ಕಾದರೂ ವಿನಿಯೋಗವಾಗಬೇಕೆಂದು ಹೇಳುವುದಾದರೆ ಯತ್ನವಿಲ್ಲ.

---

## ಇಪ್ಪತ್ತೆರಡನೆಯ ಪ್ರಕರಣ.

### ಪ್ರಭುಗಳ ಅಧಿಕಾರವಿಚಾರ.

ಹತ್ತೊಂಬತ್ತನೆಯ ಶತಮಾನದಲ್ಲಿ, ರಾಜ್ಯಭಾರಕ್ರಮದಲ್ಲಿ ರಾಷ್ಟ್ರೀಯ ವಿಚಾರಗಳೆಂಬ ಯುದ್ಧಾಂಗಣಕ್ಕೆ ದೊರೆಯವರು ಸೇರದಂತಾದುದೊಂದು ದೊಡ್ಡ ಬದಲಾವಣೆ. ದೊರೆಗಳು ರಾಷ್ಟ್ರೀಯವಿಚಾರಗಳಿಗೆ ಸಂಬಂಧಪಟ್ಟ ಚರ್ಚೆಗೆ ಸೇರಕೂಡದೆಂದೂ, ಅವರು ಯಾವುದೊಂದು ಪಂಗಡಕ್ಕೂ ಸೇರದೆ ತಟಸ್ಥರಾಗಿರತಕ್ಕುದೆಂದೂ, ಈಗ ಗೊತ್ತಾಗಿರುತ್ತದೆ.

ವಿಕ್ಟೋರಿಯಾರಾಣಿಯವರ ಕಾಲದಿಂದೀಚೆಗೆ ಪ್ರಭುಗಳ ಹಿತಕ್ಕಾಗಿ ಕನ್‌ಸರ್ವೆಟಿವ್ ಮತ್ತು ಲಿಬರಲ್ ಎಂಬ ಎರಡು ಪಂಗಡದವರೂ ಕೆಲಸಮಾಡತಕ್ಕುದೆಂದು ನಿರ್ಧರವಾಗಿದೆ. ಇದಕ್ಕೆ ಮುಂಚೆ ಹೀಗಿರಲಿಲ್ಲ.

ಹದಿನೇಳನೆಯ ಶತಮಾನದಲ್ಲಿ ರಾಜ್ಯದ ಆಡಳಿತಗಳ ಉತ್ತರವಾದಿತ್ವವೆಲ್ಲಾ ದೊರೆಯ ತಲೆಯ ಮೇಲೆ ಬೀಳುತ್ತಿತ್ತು. ಕೇವಲ ಮಂತ್ರಾಲೋಚನೆಗಾಗಿ ಮಾತ್ರವೇ ಮಂತ್ರಿಗಳು ನಿಯಮಿತರಾಗುತ್ತಿದ್ದರು. ಈಗಲಾದರೋ, ಆಡಳಿತಗಳ ಉತ್ತರವಾದಿತ್ವವು ಮಂತ್ರಿಗಳಿಗೆ ಸೇರಿರುತ್ತದೆ. ಮಂತ್ರಿಗಳು ದೊರೆಯ ಬುದ್ಧಿವಾದವನ್ನು ಪರಿಗ್ರಹಿಸಿ ಕಾರ್ಯಗಳನ್ನು ನಡೆಯಿಸಬೇಕು. ಆಡಳಿತಗಳನ್ನು ನಡೆಯಿಸುವುದರಲ್ಲಿ ಮಂತ್ರಿಗಳಿಗೆ ಸ್ವಾತಂತ್ರ್ಯವಿರುವುದಾದರೂ, ಅವರು ತಾವು ನೆರವೇರಿಸಬೇಕೆಂದಿರುವ ಕಾರ್ಯಗಳನ್ನು ಪ್ರಭುಗಳಿಗೆ ಶ್ರುತಪಡಿಸುವುದು ಆವಶ್ಯವಾಗಿರುತ್ತದೆ. ವಿಕ್ಟೋರಿಯ ರಾಣಿಯವರ ಕಾಲದಲ್ಲಿ ಲಾರ್ಡ್ ಪಾಮರ್ಸ್ಟನ್ (Lord Palmerston) ಎಂಬ ಮಂತ್ರಿಯು, ರಾಣಿಯವರಿಗೂ, ಪ್ರಧಾನಸಚಿವನಿಗೂ ತಿಳಿಸದೆಯೇ ಆಡಳಿತಗಳನ್ನು ನಡೆಯಿಸುತ್ತಿದ್ದನು. ಇನ್ನು ಮುಂದೆ ಆತನು ಹಾಗೆ ಮಾಡಕೂಡದೆಂದು ೧೮೫೦ರಲ್ಲಿ ರಾಣಿಯವರು, ಆತನಿಗೆ ತಿಳಿಯಪಡಿಸಿದರು. ಆತನೂ ಅದಕ್ಕೊಪ್ಪಿದನು. ಆದರೂ, ಮತ್ತೆ ಕೆಲವು ತಿಂಗಳುಗಳೊಳಗಾಗಿಯೇ ಪ್ರಧಾನಸಚಿವನಿಗೂ ರಾಣಿಯವರಿಗೂ, ತಿಳಿಸದೆ ಆತನು ಲೂಯಿ ನೆಪೋಲಿಯನನೊಡನೆ, ವ್ಯವಹಾರವನ್ನು ಬಳಯಿಸಿದುದಕ್ಕಾಗಿ ಕೆಲಸವನ್ನು ಕಳದುಕೊಳ್ಳಬೇಕಾಯಿತು. ದೊರೆಗೆ ಮಂತ್ರಿಗಳನ್ನು ಕೆಲಸದಿಂದ ತೆಗೆದು ಹಾಕುವ ಅಧಿಕಾರವೇನೋ ತಪ್ಪಿಲ್ಲ. ಆದರೂ, ಮೂರನೆಯ ಜಾರ್ಜ್ ದೊರೆಯ ಕಾಲದಿಂದೀಚೆಗೆ ಇಂಗ್ಲಂಡಿನ ದೊರೆಗಳಲ್ಲಿ ಯಾರೂ ಆ ಅಧಿಕಾರವನ್ನು ಆಚರಣೆಗೆ ತಂದಿಲ್ಲ. ಮಂತ್ರಿಗಳ ಮನೋಗತವನ್ನು ಪಾರ್ಲಿಮೆಂಟಿನವರು ಹಾಯಗೊಡಿಸದೇ ಇದ್ದರೆ ಮಂತ್ರಿಗಳು ಅಧಿಕಾರವನ್ನು ಬಿಟ್ಟುಬಿಡಬೇಕು.

ಮೂರನೆಯ ಜಾರ್ಜ್ ದೊರೆಯು ಪಂಗಡಗಳ ಪಕ್ಷವನ್ನು ವಹಿಸುತ್ತಿದ್ದನು. ಆತನ ಬಳಿಕ ಪಟ್ಟಕ್ಕೆ ಬಂದ ನಾಲ್ಕನೆಯ ಜಾರ್ಜ್ ದೊರೆಯು ಎಲ್ಲರಿಗೂ ಗೊತ್ತಾಗುವಂತೆ ಟೋರಿ ಪಂಗಡವನ್ನು ವಹಿಸಿ ಪಾರ್ಲಿಮೆಂಟಿನ ಪರಿಷ್ಕರಣಕ್ಕೆ ಅಡ್ಡಿಮಾಡಿದನು. ಆತನು ಇನ್ನು ಸ್ವಲ್ಪ ಕಾಲ ಬದುಕಿದ್ದು ಹೀಗೆಯೇ ಮಾಡಿದ್ದರೆ ಬಹಳ ಕಷ್ಟಕ್ಕೆ ಬರುತ್ತಿತ್ತು. ಆದರೆ, ಹೀಗೆ ತೊಂದರೆಯುಂಟಾಗುವುದಕ್ಕೆ ಮೊದಲೇ ಅವನು ಮೃತನಾದನು. ಬಳಿಕ ನಾಲ್ಕನೆಯ ವಿಲಿಯಂ ದೊರೆಯು ಪಟ್ಟಕ್ಕೆ ಬಂದನು. ಜನರ ಪ್ರೀತಿವಿಶ್ವಾಸಗಳಿಗೆ

ಪಾತ್ರನಾಗಿ ಉದಾರಹೃದಯನಾಗಿದ್ದ ಆತನ ಕಾಲದಲ್ಲಿ 'ರಿಫಾರಂ ಆಕ್ಟ್' ಎಂಬ ಪರಿಷ್ಕರಣನಿಬಂಧನೆಯು ನಡೆಯಿತು.

ಈತನ ತರುವಾಯ ವಿಕ್ಟೋರಿಯಾ ರಾಣಿಯವರು ಪಟ್ಟಕ್ಕೆ ಬಂದು ಅರುವತ್ತುನಾಲ್ಕು ವರುಷ ಕಾಲ (೧೮೩೭ ರಿಂದ ೧೯೦೧ ರ ವರೆಗೆ) ರಾಜ್ಯ ವಾಳಿದರು. ಈಕೆಯ ಕಾಲದಲ್ಲಿ ಹಿಂದಿನಿಂದಲೂ ಸ್ವಲ್ಪ ಮಟ್ಟಿಗೆ ಶಿಥಿಲವಾಗಿದ್ದ ಪ್ರಭುತ್ವಮಾಡುವವರ ಅಧಿಕಾರವು ಕ್ರಮಕ್ಕೆ ಬಂತು. ಹಿಂದಿನ ಕಾಲದಿಂದ ಲೂ, ರಾಜ್ಯವಾಳುವವರಿಗೆ ಪರಂಪರೆಯಾಗಿ ಬಂದಿದ್ದ ಸ್ವತ್ತುಗಳಿಂದ ಆದಾಯವನ್ನು ಪಡೆದುಕೊಳ್ಳುವುದು ಮೂರನೆಯ ಜಾರ್ಜ್ ದೊರೆಯ ಕಾಲ ದಲ್ಲಿಯೇ ನಿಂತುಹೋಗಿ ದೊರೆಯ ವೆಚ್ಚಕ್ಕಾಗಿ ಪಾರ್ಲಿಮೆಂಟಿನವರು "ಸಿವಿಲ್ ಲಿಸ್ಟ್" (Civil List) ಎಂಬ ಹೆಸರಿನಿಂದ ವರುಷವರುಷವೂ ಇಷ್ಟು ಹಣವನ್ನು ಕೊಡತಕ್ಕುದೆಂದು ಗೊತ್ತಾಗಿತ್ತು. ವಿಲಿಯಂ ದೊರೆಯು ಮತ್ತೆ ಕೆಲವು ರೀತಿಗಳಲ್ಲಿ ತನಗೆ ಬರುತ್ತಿದ್ದ ಆದಾಯಗಳನ್ನು ಬಿಟ್ಟುಕೊಟ್ಟು ಸಿವಿಲ್ ಲಿಸ್ಟಿನ ಹಣವನ್ನು ಹೆಚ್ಚುಮಾಡಿಕೊಂಡನು. ವಿಕ್ಟೋರಿಯಾ ರಾಣಿ ಯವರ ಕಾಲದಲ್ಲಿ ಪಾರ್ಲಿಮೆಂಟಿನವರೇ ರಾಷ್ಟ್ರೀಯವ್ಯಯವನ್ನೆಲ್ಲಾ ವಹಿಸಿಕೊಂಡರು. ಇದರಿಂದ ರಾಣಿಯವರಿಗೆ ರಾಷ್ಟ್ರೀಯವ್ಯಯಕ್ಕೆ ಆಗುತ್ತಿದ್ದ ವೆಚ್ಚವು ಉಳಿದುದರಿಂದ ಆಕೆಯ ಇತರ ವೆಚ್ಚಗಳಿಗಾಗಿ ವರುಷ ಬಂದಕ್ಕೆ ಮೂರು ಲಕ್ಷದ ಎಂಬತ್ತೈದು ಸಾವಿರ ಪೌಂಡುಗಳು ಸಲ್ಲತಕ್ಕು ದೆಂದು ಗೊತ್ತಾಯಿತು. ಮುಂದೆ, ರಾಣಿಯವರ ವೆಚ್ಚಕ್ಕೆ ಈ ಹಣವು ಸಾಲದೇ ಹೋದುದರಿಂದ, ಆಕೆಗೆ ಕೊಡತಕ್ಕ ಹಣವು ಮತ್ತಷ್ಟು ಹೆಚ್ಚಿತು.

ವಿಕ್ಟೋರಿಯಾ ರಾಣಿಯವರು ಪಟ್ಟಕ್ಕೆ ಬಂದಾಗ ಹ್ವಿಗ್ ಪಂಗಡದ ಮಂತ್ರಿತ್ವವಿತ್ತು. ಮೆಲ್‌ಬರ್ನ್ (Melbourne) ಎಂಬಾತನು ಪ್ರಧಾನಸಚಿವ ನಾಗಿದ್ದನು. ಈತನೊಡನೆ ರಾಣಿಯವರು ವಿಶ್ವಾಸದಿಂದ ವರ್ತಿಸಿದರು. ಆತನು ಕೆಲಸಕ್ಕೆ ರಾಜೀನಾಮೆಕೊಡುವಂತಾದ ಮೇಲೆ ಸರ್ ರಾಬರ್ಟ್ ಪೀಲ್ (Sir Robert Peel) ಎಂಬಾತನ ಕೈಕೆಳಗೆ ಟೋರಿ ಪಂಗಡದವರು ಮಂತ್ರಿ ತ್ವಮಾಡತೊಡಗಿದರು. ಪೀಲ್ ಎಂಬ ಈ ಪ್ರಧಾನಸಚಿವನೂ ಕೂಡ ರಾಣಿ ಯವರ ದಯೆಗೂ, ಮೆಚ್ಚಿಕೆಗೂ, ಪಾತ್ರನಾದನು. "ಕಾರನ್ ಲಾಸ್" (Corn Laws) ಎಂಬ ನಿಬಂಧನೆಗಳನ್ನು ತೆಗೆದು ಹಾಕಿ, ಧಾನ್ಯಗಳ ತೆರಿಗೆಯ ವಿಚಾರ ವಾಗಿ ರೈತರ ಕಷ್ಟವನ್ನು ತಪ್ಪಿಸುವ ವಿಷಯದಲ್ಲಿ ಪೀಲನ ಅಭಿಮತವನ್ನು ರಾಣಿಯವರು ಬಹುವಾಗಿ ಅಭಿನಂದಿಸಿದರು.

ರಾಣಿಯವರು ರಾಜ್ಯಭಾರದ ಉತ್ತರವಾದಿತ್ವವನ್ನು ವಹಿಸಬೇಕಾಗಿರಲಿಲ್ಲವೆಂಬುದೇನೋ ದಿಟ. ಆದರೂ (ಪ್ರಧಾನಸಚಿವನಾದ ಗ್ಲ್ಯಾಡ್‌ಸ್ಟನ್ನನು ಹೇಳಿರುವಂತೆ) ಅನೇಕ ವಿಚಾರಗಳಲ್ಲಿ ಅವರಿಗೆ ಪ್ರಾಬಲ್ಯವಿದ್ದೇ ಇತ್ತು. ಈಗಿನ ಜಾರ್ಜ್ ಪ್ರಭುಗಳಿಗೂ ಕೂಡ ಅಂತಹ ಪ್ರಾಬಲ್ಯವು ಇರುತ್ತದೆ.

ಕೆಲವು ಮತಾಧಿಕಾರಗಳನ್ನು ಕೊಡುವುದರಲ್ಲಿಯೂ ಸೈನ್ಯದಲ್ಲಿ ಮತ್ತು ನೌಕಾದಳದಲ್ಲಿ ಅಧಿಕಾರಗಳನ್ನು ನಿರ್ಮಿಸುವುದರಲ್ಲಿಯೂ, ಹೊರಗಿನ ದೇಶಗಳೊಡನೆ ವ್ಯವಹಾರವನ್ನು ನಿರ್ಣಯಿಸುವುದರಲ್ಲಿಯೂ, ರಾಣಿಯವರೇ ಸ್ವತಃ ವರ್ತಿಸಿದರು. ವಿದೇಶಗಳೊಡನೆ ಹೇಗೆ ವರ್ತಿಸಬೇಕೆಂಬುದನ್ನು ನಿರ್ಧರಿಸುವುದು (Foreign Policy) ಹ್ವಿಗ್ ಮತ್ತು ಟೋರಿ ಪಂಗಡಗಳಿಗೆ ಸೇರಿದುದಲ್ಲ. ದೊರೆಯೇ ಈ ವಿಚಾರದಲ್ಲಿ ವರ್ತಿಸಬಹುದು. ಆದರೂ ಆತನು ತಾನು ನೆರವೇರಿಸುವ ಕಾರ್ಯಗಳನ್ನು ಮಂತ್ರಿಗಾಗಲೀ ಫಾರಿನ್ ಸೆಕ್ರೆಟರಿಗಾಗಲೀ (Foreign Secretary) ತಿಳಿಸಬೇಕಾದುದು ಆವಶ್ಯಕ. ವಿಕ್ಟೋರಿಯಾ ರಾಣಿಯವರು ಕೇವಲ ತಮ್ಮ ಬಂಧುಗಳು ಹೊರತು ಉಳಿದ ವಿದೇಶೀಯ ದೊರೆಗಳಿಗೆ ಬರೆಯುತ್ತಿದ್ದ ಕಾಗದ ಪತ್ರಗಳನ್ನೆಲ್ಲಾ ಪ್ರಧಾನ ಸಚಿವನಿಗೋ, ಇಲ್ಲವೇ ಫಾರಿನ್ ಸೆಕ್ರೆಟರಿಗೋ ತೋರಿಸುತ್ತಿದ್ದರು. ದೊರೆಯು ವಿದೇಶೀಯ ರಾಯಭಾರಿಗಳೊಡನೆ ಮಾತನಾಡುವಾಗಕೂಡ, ಮಂತ್ರಿಯು ಇದಿರಿಗೆ ಇರತಕ್ಕುದು ವಾಡಿಕೆ; ದೊರೆಯು ಹೊರಗಿನ ದೇಶಗಳಿಗೆ ಹೋದಾಗಲೂ ಇದೇ ಪದ್ಧತಿಯು ಇರುತ್ತದೆ. ದೊರೆಯು, ವಿದೇಶೀಯವಿಚಾರಗಳಲ್ಲಿ ಹೇಗೆ ನಡೆಯಬೇಕೆಂಬ ವಿಷಯದಲ್ಲಿ ಮಂತ್ರಿಗಳಿಗೆ ಬುದ್ಧಿವಾದ ಹೇಳಬಹುದು. ಈ ವಿಚಾರದಲ್ಲಿ ಆತನು ಅವರ ಪಕ್ಷವನ್ನು ವಹಿಸಿ ಸಹಾಯ ಮಾಡಬಹುದು. ಗತಿಸಿದ ಏಳನೆಯ ಎಡ್ವರ್ಡರವರು ಇಂಗ್ಲೆಂಡಿಗೂ ಫ್ರಾನ್ಸಿಗೂ ಮೈತ್ರಿಯುಂಟಾಗುವಂತೆ ಮಾಡುವ ವಿಚಾರದಲ್ಲಿ ಮಂತ್ರಿಗಳಿಗೆ ಬಹಳ ಸಹಾಯಮಾಡಿದುದೇ ಇದಕ್ಕೆ ನಿದರ್ಶನ.

ಅಂತು ಬಟ್ಟನಲ್ಲಿ ಹೇಳಬಹುದೇನೆಂದರೆ–ಪ್ರಭುಗಳು ಯುದ್ಧಮಾಡುವುದರಲ್ಲಿಯೋ, ಇಲ್ಲವೇ ಕೇವಲ ವಿನೋದಗಳಲ್ಲಿಯೋ, ಕಾಲವನ್ನು ಕಳೆಯುವುದು ಈಗ ಅಸಾಧ್ಯ. ಅವರು ಜನಾಂಗಕ್ಕೆ ಒಳ್ಳೆಯದನ್ನು ಮಾಡಿ, ಜನರ ಪ್ರೀತಿಗೂ ರಾಜಭಕ್ತಿಗೂ ಪಾತ್ರರಾಗಬೇಕಾದುದೇ ಅವರ ಕರ್ತವ್ಯವಾಗಿ ಪರಿಣಮಿಸಿರುತ್ತದೆ. ಆದುದರಿಂದ ಮೊದಲು ಇದಕ್ಕೆ ಗಮನ ಕೊಟ್ಟು, ಬಳಿಕ ಇತರ ವಿಚಾರಗಳನ್ನು ಪರ್ಯಾಲೋಚಿಸಬೇಕಾಗಿರುತ್ತದೆ.

---

## ಇಪ್ಪತ್ತುಮೂರನೆಯ ಪ್ರಕರಣ.

### ಸ್ಥಳೀಯ ಆಡಳಿತಗಳ ವಿಚಾರ.

ಸ್ಥಳೀಯವಾದ ಆಡಳಿತಗಳು ಹೇಗೆ ನಡೆಯುತ್ತಿದ್ದುವೆಂಬುದನ್ನೂ, ಷೈರುಗಳ ಮತ್ತು ಬರೋಗಳ ವಿಚಾರವನ್ನೂ, ಷೈರ್‌ಮೂಟ್ ಟೌನ್‌ಮೂಟ್ ಸಭೆಗಳ ವಿಷಯವನ್ನೂ, ಷೆರೀಫ್ ಮುಂತಾದ ಅಧಿಕಾರಿಗಳ ವಿಚಾರವನ್ನೂ, ನಾವು ಮೊದಲೇ ತಿಳಿದುಕೊಂಡಿರುತ್ತೇವೆ.

೧೩೬೦ನೆಯ ಇಸವಿಯಲ್ಲಿ "ಜಸ್ಟಿಸ್ ಆಫ್ ದಿ ಪೀಸ್" (Justice of the Peace) ಎಂಬ ಅಧಿಕಾರಿಯು ನಿಯಮಿತನಾದ ಮೇಲೆ ಷೆರೀಫನ ಅಧಿಕಾರವು ಮೂಲೆಗೆ ಬಿತ್ತು. ಹಿಂದಿನಿಂದಲೂ ಇದ್ದ ಷೈರ್ ಕೋರ್ಟುಗಳು ಕೊನೆಗಂಡವು. ಇಲ್ಲಿ ನಡೆಯುತ್ತಿದ್ದ ನ್ಯಾಯವಿಚಾರಣೆಯು ಈ ಹೊಸಅಧಿಕಾರಿಗಳ ಕೈಸೇರಿತು. ಟ್ಯೂಡರ್ ಸಂತತಿಯ ಅರಸರ ಕಾಲದಲ್ಲಿ 'ಜಸ್ಟಿಸ್ ಆಫ್ ದಿ ಪೀಸ್' ಅಧಿಕಾರಕ್ಕೆ ಬಹಳ ಪ್ರಾಮುಖ್ಯತೆಯು ಬಂತು. ೧೮೪೬ನೆಯ ಇಸವಿಯಲ್ಲಿ ಸಣ್ಣ ಸಣ್ಣ ಸಾಲದ ಮೊಕದ್ದಮೆಗಳನ್ನು ವಿಚಾರಣೆ ಮಾಡಲು ಕೌಂಟಿ ಕೋರ್ಟುಗಳು (County Courts) ಎಂಬ ನ್ಯಾಯಸ್ಥಾನಗಳು ಏರ್ಪಾಡಾದುವು. ಈ ನ್ಯಾಯಸ್ಥಾನಗಳಿಗೂ ಹಿಂದಿದ್ದ ಷೈರ್ ಕೋರ್ಟುಗಳಿಗೂ ಯಾವ ಸಂಬಂಧವೂ ಇಲ್ಲ.

ಸ್ಥಳೀಯವಾದ ಆಡಳಿತ ಕ್ರಮವನ್ನು ವ್ಯವಸ್ಥೆ ಮಾಡುವುದಕ್ಕಾಗಿ ೧೮೮೮ರಲ್ಲಿ ಒಂದು ನಿಬಂಧನೆಯಾಯಿತು. ಇದರಿಂದ, ಇಂಗ್ಲೆಂಡನ್ನು ಅರುವತ್ತೆರಡು ಕೌಂಟಿಗಳನ್ನಾಗಿಯೂ, ಅರುವತ್ತು ಕೌಂಟಬರೋಗಳನ್ನಾಗಿಯೂ, ವಿಭಾಗಿಸಲಾಯಿತು. ಒಂದೊಂದು ಕೌಂಟಿಯಲ್ಲಿಯೂ ಒಂದೊಂದು ಕೌಂಟಿ ಕೌನ್ಸಿಲ್ ಎಂಬ ಆಡಳಿತದಸಭೆಯನ್ನು ನಿಯಮಿಸಿ, ನ್ಯಾಯವಿಚಾರಣೆಯೊಂದು ಹೊರತು, ಉಳಿದ ಎಲ್ಲಾ ಆಡಳಿತಗಳನ್ನೂ ಸಭೆಗೆ ವಹಿಸಿದರು. ಈ ಸಭೆಯವರು, ಕಟ್ಟಡಗಳನ್ನು ಕಟ್ಟಿಸುವುದು, ಅನಾಥರಿಗೆ ಸಹಾಯ ಮಾಡುವುದು, ಆರೋಗ್ಯವನ್ನು ಕಾಪಾಡಿಕೊಳ್ಳುವುದು, ಮುಂತಾದ ವಿಚಾರಗಳಲ್ಲಿ ಮೇಲ್ವಿಚಾರಣೆಗಾಗಿ ಒಂದೊಂದಕ್ಕೂ ಒಂದೊಂದು ಕಮಿಟಿಯನ್ನೇರ್ಪಡಿ

ಸಿಕೊಂಡು, ಆಡಳಿತಗಳನ್ನು ನಡೆಯಿಸಲಾರಂಭಿಸಿದರು. ಈ ಕೌಂಟಿಕೌನ್ಸಿಲಿಗೆ ಕೌಂಟಿಯಲ್ಲಿ ಭೂಸ್ಥಿತಿಯನ್ನಿಟ್ಟುಕೊಂಡು ಅದಕ್ಕಾಗಿ ಕಂದಾಯವನ್ನು ಕೊಡುತ್ತಿರುವವರಲ್ಲಿ ಕೆಲವರನ್ನು ಆರಿಸಿ ಮೂರುವರುಷದವರೆಗೆ ಸದಸ್ಯರಾಗಿರತಕ್ಕದೆಂದು ನಿಯಾಮಕವಾಯಿತು. ೧೮೯೯ರಲ್ಲಿಯೂ, ೧೯೦೨ರಲ್ಲಿಯೂ ನಡೆದ ನಿಬಂಧನೆಗಳಿಂದ, ಕೌಂಟಿಯ ವಿದ್ಯಾಭ್ಯಾಸವಿಚಾರವೂ ಈ ಸಭೆಗೇ ಸೇರಿತು.

ಈ ಕೌನ್ಸಿಲುಗಳು ಏರ್ಪಟ್ಟುದರಿಂದ ಸ್ಥಳೀಯಆಡಳಿತಗಳನ್ನು ಪ್ರಜೆಗಳೇ ನಡೆಯಿಸುವಂತಾದುದು ಮಾತ್ರವಲ್ಲದೆ ಮತ್ತೊಂದು ಫಲವೂ ಉಂಟಾಯಿತು. ಕೌಂಟಿಕೌನ್ಸಿಲಿನ ಅಧ್ಯಕ್ಷನು (Chairman) ಹೆಚ್ಚು ಕಾರ್ಯದಕ್ಷತೆಯನ್ನು ಪ್ರದರ್ಶಿಸುವುದಾದರೆ ಆತನು ಇಂಗ್ಲೆಂಡಿನ ಪ್ರಧಾನಸಚಿವಪದವಿಯವರೆಗೂ ಹತ್ತುವ ಸಂಭವವುಂಟು. ಸ್ವರಾಜ್ಯವನ್ನನುಭವಿಸುವುದರಲ್ಲಿ ಇಂಗ್ಲಿಷರು ಅಸಮಾನರಾಗಿರುತ್ತಾರೆ.

೧೮೩೫ನೆಯ ಇಸವಿಯಲ್ಲಿ ನಡೆದ "ಮ್ಯುನಿಸಿಪಲ್ ಕಾರ್ಪೊರೇಷನ್ ಆಕ್ಟ್" ಎಂಬ ನಿಬಂಧನೆಯಿಂದ ಪೌರಕಾರ್ಯಗಳನ್ನೆಲ್ಲಾ ಜನರೇ ವಹಿಸುವಂತಾಯಿತು. ಬರೋಕೌನ್ಸಿಲುಗಳ ಮೂಲಕ ಬರೋಗಳ ಆಡಳಿತಗಳನ್ನೆಲ್ಲಾ ಜನರೇ ನಡೆಯಿಸುವಂತಾಯಿತು. ಬರೋಗಳಲ್ಲಿ ವಾಸವಾಗಿದ್ದು ಕಂದಾಯವನ್ನು ಕೊಡುತ್ತಿದ್ದವರೆಲ್ಲರಿಗೂ ಅನೇಕ ಹಕ್ಕುಬಾಧ್ಯತೆಗಳು ದೊರೆತುವು. "ಆಲ್ಡರ್‌ಮೆನ್" ಎಂಬವರು ಮ್ಯಾಜಿಸ್ಟ್ರೇಟರಾಗಿರುವುದುತಪ್ಪಿ, ನ್ಯಾಯವಿಚಾರಣೆಗೆ ಸರಕಾರದವರೇ ಬರೋಗಳಲ್ಲಿ ನ್ಯಾಯಾಧಿಪತಿಗಳನ್ನು ನಿಯಮಿಸುವಂತಾಯಿತು. ಐವತ್ತುಸಾವಿರ ಮಂದಿಗಳಿಗೆ ಕಡಿಮೆಯಿಲ್ಲದ ನಿವಾಸಿಗಳುಳ್ಳ ಪಟ್ಟಣಗಳಿಗೆ ಕೌಂಟಿಬರೋಗಳೆಂದು ಹೆಸರು ಬಂತು.

ಬರೋಕೌನ್ಸಿಲುಗಳ ಪ್ರಾಬಲ್ಯವು ಬಹಳ ಹೆಚ್ಚಾಗಿರುತ್ತದೆ; ಅಲ್ಲದೆ ಹೆಚ್ಚುತ್ತಲೂ ಇದೆ. ೧೯೦೨ರಲ್ಲಿ ನಡೆದ "ಎಜುಕೇಷನ್ ಆಕ್ಟ್" ಎಂಬ ನಿಬಂಧನೆಯಿಂದ ಬರೋಕೌನ್ಸಿಲುಗಳಿಗೆ ವಿದ್ಯಾಭ್ಯಾಸವಿಚಾರವನ್ನೂ ವಹಿಸಲಾಗಿದೆ. ಬರೋಗಳಲ್ಲಿ ಪೌರಕಾರ್ಯಸಮಾಜದವರೇ ನೀರನ್ನೂ, ಬೆಳಕನ್ನೂ, ಸುಖವಸತಿಗೆ ಬೇಕಾದ ಇತರ ಸಾಧನಗಳನ್ನೂ, ಒದಗಿಸುವಂತಾಗಿದೆ.

———— ——

## ಇಪ್ಪತ್ತುನಾಲ್ಕನೆಯ ಪ್ರಕರಣ.

### ಸ್ವಾಸ್ಥ್ಯಗಳ ವಿಚಾರ.

ಹತ್ತೊಂಬತ್ತನೆಯ ಶತಮಾನದಲ್ಲಿ ಕಾಲೊನಿಗಳೆಂಬ ವಸತಿಗಳ ಪ್ರಭುತ್ವಕ್ರಮವು ಬಹುಲಾವಣೆಯನ್ನು ಹೊಂದಿದುದೊಂದು ವಿಶೇಷಸಂಗತಿ. ಅಮೆರಿಕದಲ್ಲಿ ನಡೆದ ಯುದ್ಧಕ್ಕೆ (American War of Independence) ಕಾರಣಗಳನ್ನೂ, ಅದು ಸಾಂಗವಾಗಿ ನಡೆದು ಮುಗಿದ ಬಗೆಯನ್ನೂ ವಿಸ್ತಾರವಾಗಿ ವರ್ಣಿಸುವುದು ಅನಾವಶ್ಯಕ. ಅಮೆರಿಕದ ಸಂಯುಕ್ತಸಂಸ್ಥಾನದ ಪ್ರತಿನಿಧಿಗಳು ಇಲ್ಲದೇಇದ್ದರೂ ಕೂಡ ಬ್ರಿಟಿಷ್‌ಪಾರ್ಲಿಮೆಂಟಿನವರು ಅಲ್ಲಿಯವರಿಗೆ ತೆರಿಗೆಗಳನ್ನು ಹಾಕಲು ಯತ್ನಿಸಿದುದೇ ಈ ಯುದ್ಧಕ್ಕೆ ಮೂಲಕಾರಣ. ಆ ಸ್ವಾಸ್ಥ್ಯಗಳವರು ಈ ವಿಧವಾದ ತೆರಿಗೆಯನ್ನು ಕೊಡುವುದಕ್ಕೆ ಒಪ್ಪಲಿಲ್ಲ. ಬಳಿಕ ಈ ಯುದ್ಧವು ನಡೆಯಿತು. ಸ್ವಾಸ್ಥ್ಯಗಳವರ ಮನೋರಥವು ಈಡೇರಿತು. ಬ್ರಿಟಿಷ್ ಪಾರ್ಲಿಮೆಂಟಿನವರು ತಮ್ಮ ಅನುಕೂಲ್ಯಕ್ಕೋಸ್ಕರವಾಗಿ ಸ್ವಾಸ್ಥ್ಯಗಳವರಮೇಲೆ ತೆರಿಗೆಯನ್ನು ಹಾಕಲು ಪ್ರಯತ್ನಿಸಕೂಡದೆಂಬುದು ಸ್ಪಷ್ಟವಾಯಿತು. ಅಮೆರಿಕದ ಸಂಯುಕ್ತಸಂಸ್ಥಾನವು ಬ್ರಿಟಿಷ್ ರಾಜ್ಯದ ಸ್ವಾಸ್ಥ್ಯವಾಗಿರುವುದು ತಪ್ಪಿ ಅದು ಸ್ವತಂತ್ರವಾಯಿತು.

ಹತ್ತೊಂಬತ್ತನೆಯ ಶತಮಾನದ ಆರಂಭದಲ್ಲಿ ಸಾಮಾನ್ಯವಾಗಿ ಸ್ವಾಸ್ಥ್ಯಗಳ ಪ್ರಭುತ್ವವು ಹೇಗಿತ್ತೆಂಬುದನ್ನು ತಿಳಿದುಕೊಳ್ಳುವ. ಒಂದೊಂದು ಸ್ವಾಸ್ಥ್ಯಕ್ಕೂ ಬ್ರಿಟಿಷ್ ಸರ್ಕಾರದವರೇ ಒಬ್ಬೊಬ್ಬ ಗವರ್ನರನ್ನು ನಿಯಮಿಸುತ್ತಿದ್ದರು. ಆತನು ತಾನೇ ಆರಿಸಿದ ಸದಸ್ಯರುಳ್ಳ "ಎಕ್ಸಿಕ್ಯುಟಿವ್" ಎಂಬ ಆಡಳಿತದ ಸಭೆಯು ಮತ್ತು "ಲೆಜಿಸ್ಲೆಟಿವ್ ಕೌನ್ಸಿಲ್" ಎಂಬ ಮಂತ್ರಾಲೋಚನಾಸಭೆಯ ಸಹಾಯದಿಂದಲೂ, ಸ್ವಾಸ್ಥ್ಯಗಳವರು ಆರಿಸಿದ ಸದಸ್ಯರುಳ್ಳ ನಿಯಮನಿರ್ಮಾಣಸಭೆ "ಲೆಜಿಸ್ಲೇಟಿವ್ ಅಸೆಂಬ್ಲಿ" (Legislative Assembly) ಎಂಬ ಸಭೆಯ ಸಹಾಯದಿಂದಲೂ, ಆಡಳಿತಗಳನ್ನು ನೋಡುತ್ತಿದ್ದನು. ಹೀಗೆ ಸ್ವಲ್ಪಕಾಲವು ಕಳೆದತರುವಾಯ ತಮ್ಮ ಪ್ರಭುತ್ವಕ್ರಮವನ್ನು ಅಭಿವೃದ್ಧಿಪಡಿಸಿಕೊಳ್ಳಬೇಕೆಂದು ಸ್ವಾಸ್ಥ್ಯಗಳವರಿಗೆ ಬುದ್ಧಿಹುಟ್ಟಿತು; ಇದಕ್ಕಾಗಿ ಅವರೆಲ್ಲರೂ ಹೋರಾಡತೊಡಗಿದರು.

ಮೊತ್ತಮೊದಲು, ಕೆನಡ (Canada) ಪ್ರಾಂತದಲ್ಲಿ ಈ ಪ್ರಯತ್ನವು ನಡೆಯಿತು. ಕೆನಡಪ್ರಾಂತವು ಬ್ರಿಟಿಷರಿಗೆ ಸೇರಿದಮೇಲೆ ಸ್ವಲ್ಪ ಕಾಲ "ಮಿಲಿಟೆರಿ ರೂಲಿಗೆ" ಎಂದರೆ ಶುದ್ಧನಿರಂಕುಶಪ್ರಭುತ್ವಕ್ಕೆ ಒಳಪಟ್ಟಿದ್ದು, ತರುವಾಯ ಗವರ್ನರರ ಆಧಿಪತ್ಯಕ್ಕೆ ಸೇರಿತು. ಅಮೆರಿಕದ ಯುದ್ಧವು ನಡೆಯುತ್ತಿದ್ದಾಗ ಇಲ್ಲಿಯವರು ರಾಜಭಕ್ತಿಯುಳ್ಳವರಾಗಿದ್ದರು. ಯುದ್ಧವು ಮುಗಿದಮೇಲೆ ಬ್ರಿಟಿಷರ ಪ್ರಜೆಗಳಾಗಬೇಕೆಂಬ ಉದ್ದೇಶದಿಂದ ಸಂಯುಕ್ತಸಂಸ್ಥಾನ (United States of America) ದಿಂದ ಹಲವು ಮಂದಿ ಕೆನಡಪ್ರಾಂತಕ್ಕೆ ಹೋಗಿನಿಂತು, ಸ್ವಲ್ಪಕಾಲದ ಮೇಲೆ ಸ್ವರಾಜ್ಯಕ್ಕಾಗಿ ಹೋರಾಡಲುಪಕ್ರಮಿಸಿದರು. ಒಂದು ದಂಗೆಯೂ ಆಯಿತು. ಇದನ್ನೇನೋ ಅಡಗಿಸಿದರು. ಬಳಿಕ ಇಂಗ್ಲಿಷ್ ಸರಕಾರದವರು ಲಾರ್ಡ್ ಡರ್‌ಹಾಂ (Lord Durham) ಅವರನ್ನು ಅಲ್ಲಿಗೆ ಕಳುಹಿಸಿ, ಅಲ್ಲಿಯ ವಿದ್ಯಮಾನಗಳನ್ನೂ, ಡರ್‌ಹಾಮರವರ ಅಭಿಪ್ರಾಯವನ್ನೂ, ತಿಳಿದುಕೊಂಡರು. ಬಳಿಕ ಕ್ರಮಕ್ರಮವಾಗಿ ಕೆನಡಪ್ರಾಂತದವರಿಗೆ ಸೌಲಭ್ಯಗಳನ್ನು ತೋರಿಸಲಾರಂಭಿಸಿ, ಕೊನೆಗೆ ಅವರಿಗೆ ಸ್ವರಾಜ್ಯವನ್ನು ಕೊಟ್ಟರು. ಇದಾದ ಇಪ್ಪತ್ತುವರುಷಗಳಮೇಲೆ (ಎಂದರೆ ೧೮೬೭ರಲ್ಲಿ) ನಡೆದ "ನಾರ್ತ್ ಅಮೆರಿಕಾ ಆಕ್ಟ್" ಎಂಬ ನಿಬಂಧನೆಯಿಂದ ಕೆನಡಪ್ರಾಂತದಲ್ಲಿ "ಫೆಡರಲ್" ಪದ್ಧತಿಯು ಆಚರಣೆಗೆ ಬಂತು. ಇದರಿಂದ ಸ್ವರಾಜ್ಯವುಳ್ಳ ಅನೇಕಪ್ರಾಂತಗಳು ಕೆನಡದೊಂದಿಗೆ ಸಂಯೋಗವಾಗಿ, ಅದಕ್ಕೆ ಅಧೀನವಾಗಿ ನಿಂತುವು. ಮ್ಯಾನಿಟೋಬ, ನ್ಯೂಬ್ರನ್ಸ್ವಿಕ್, ಮತ್ತು ನೋವಸ್ಕೋಷಿಯ (Novascotia) ಎಂಬ ಪ್ರಾಂತಗಳು ೧೮೭೦ ರಲ್ಲೂ ಬ್ರಿಟಿಷ್ ಕೊಲಂಬಿಯ ಎಂಬುದು ೧೮೭೧ರಲ್ಲೂ, ಪ್ರಿನ್ಸ್‌ಎಡ್ವರ್ಡ್‌ದ್ವೀಪವು, ೧೮೭೩ರಲ್ಲೂ ಇದಕ್ಕೆ ಸೇರಿದುವು. ಈಗ, ನ್ಯೂಫೌಂಡ್ಲೆಂಡ್ ಎಂಬುದು ಮಾತ್ರ ಹೀಗೆ ಸಂಯೋಗವಾಗದೆ ಬೇರೆ ಇರುತ್ತದೆ. ಕೆನಡಪ್ರಾಂತದ ಈ ಸಂಯುಕ್ತ ಸರಕಾರ (Federal Government) ದಲ್ಲಿ ಇಂಗ್ಲೆಂಡಿನ ದೊರೆಗಳ ಪ್ರತಿನಿಧಿಯಾದ ಗವರ್ನರ್ ಜನರಲನೊಬ್ಬನು ಇರುತ್ತಾನೆ. ಸೆನೆಟ್ ಎಂಬ ಸಭೆಯೂ, ಪ್ರತಿನಿಧಿಸಭೆಯೂ ಇರುತ್ತವೆ. ಈ ಸೆನೆಟ್ಟಿನ ಸದಸ್ಯರನ್ನು ದೊರೆಗಳೇ ಆರಿಸುವರು. ಒಂದೊಂದು ಪ್ರಾಂತದಿಂದ ಒಬ್ಬೊಬ್ಬ ಸದಸ್ಯನನ್ನು ಆರಿಸಬೇಕಾಗುತ್ತದೆ. ಈಪದವಿಯು ಆಜನ್ಮಾವಧಿ ಇರತಕ್ಕದು. ಪ್ರತಿನಿಧಿಸಭೆಯಲ್ಲಿಯ ಸದಸ್ಯರನ್ನು ಪ್ರಜೆಗಳೇ ಆರಿಸುತ್ತಾರೆ. ಈ ಸಭೆಗಳಿಂದಲೂ, ಗವರ್ನರ್‌ಜನರಲನಿಂದಲೂ, ಪ್ರಭುತ್ವವು ನಡೆಯುತ್ತದೆ.

ಹೀಗೆಯೇ, ಆಸ್ಟ್ರೇಲಿಯಾದಲ್ಲಿಯೂ ಮೊದಲು ಗವರ್ನರಿನ ಆಧಿಪತ್ಯವು ಇದ್ದು, ಬಂಗಾರದಗಣಿಗಳು ಸಿಕ್ಕಿದಮೇಲೆ ಜನಸಂಖ್ಯೆಯೂ, ಸಂಪತ್ತೂ ಹೆಚ್ಚಿ, ಆಸ್ಟ್ರೇಲಿಯಾದವರು ಕೂಡ ಸ್ವರಾಜ್ಯಕ್ಕಾಗಿ ಹೋರಾಡಿ ಅದನ್ನು ಪಡೆದುಕೊಂಡರು. ಬಳಿಕ, ಅಲ್ಲಿಯೂ ಕೂಡ, ಫೆಡರಲ್ ಪದ್ಧತಿಯು ನೆಲೆಸಿತು. ಇದಕ್ಕೆ ಇಂಗ್ಲಿಷ್ ಪಾರ್ಲಿಮೆಂಟಿನವರು ೧೯೦೦ನೆಯ ಇಸವಿಯಲ್ಲಿ ಅನುಮತಿಯನ್ನು ಕೊಟ್ಟರು. ಫೆಡರಲ್ ಸರಕಾರವನ್ನು ಅಭಿವೃದ್ಧಿಗೆ ತರುವುದಕ್ಕಿಂತಲೂ ಅದಕ್ಕೆ ಸೇರಿರುವ ದೇಶಗಳ ಹಕ್ಕುಗಳನ್ನು ಕಾಪಾಡುವುದಕ್ಕೆ ಹೆಚ್ಚು ಗಮನಕೊಡಬೇಕೆಂಬುದೇ ಪ್ರಜೆಗಳ ಸಂಕಲ್ಪ. ಆದುದರಿಂದ, ಆಸ್ಟ್ರೇಲಿಯಾದ ಫೆಡರಲ್‌ಸರಕಾರವು ಕೆನಡ ಪ್ರಾಂತದ ಸರಕಾರವನ್ನು ಹೋಲುವುದಕ್ಕಿಂತಲೂ ಹೆಚ್ಚಾಗಿ ಸಂಯುಕ್ತಸಂಸ್ಥಾನದ ಫೆಡರಲ್ ಸರಕಾರವನ್ನು ಹೋಲುತ್ತದೆ.

ಇನ್ನು ದಕ್ಷಿಣ ಆಫ್ರಿಕದ ವಿಚಾರ. ಲಾರ್ಡ್ ಕಾರ್ನಾರ್ವನ್ ಎಂಬಾತನು ಇಲ್ಲಿಗೂ ಫೆಡರಲ್ ಸರಕಾರವು ಬರುವಂತೆ ಪ್ರಯತ್ನಮಾಡಿದನು. ಅವನ ಯತ್ನವು ಸಾಗಲಿಲ್ಲ. ಆದರೆ ೧೮೭೭ನೆಯ ಇಸವಿಯಲ್ಲಿ ಬ್ರಿಟಿಷ್ ಪಾರ್ಲಿಮೆಂಟಿನವರು "ಫೆಡರೇಷನ್ ಆಕ್ಟ್" ಎಂಬ ನಿಬಂಧನೆಯಿಂದ ಅದಕ್ಕೆ ಅನುಮತಿಯನ್ನು ಕೊಟ್ಟರು. ಆದರೂ, ಟ್ರಾನ್ಸ್‌ವಾಲಿನಲ್ಲಿಯ ತೊಂದರೆಗಳಿಂದ ಇದಕ್ಕೆ ವಿಘ್ನವುಂಟಾಯಿತು. ೧೮೯೯ರಲ್ಲಿ ಬಂದೊದಗಿದ ಬೋವರ್ (Boer) ಯುದ್ಧದದೆಸೆಯಿಂದ ಈ ತೊಂದರೆಗಳು ಉತ್ಕಟಾವಸ್ಥೆಗೆ ಬಂದುವು. ಈ ಯುದ್ಧವು ೧೯೦೨ರಲ್ಲಿ ಕೊನೆಗಂಡಿತು. ಬಳಿಕ, ದಕ್ಷಿಣ ಆಫ್ರಿಕಾದಲ್ಲಿ ಸ್ವರಾಜ್ಯವು ಏರ್ಪಡಲು ಇಂಗ್ಲಿಷ್ ಪಾರ್ಲಿಮೆಂಟಿನವರು ಅನುಮತಿಯನ್ನು ಕೊಟ್ಟರು. ೧೯೦೬ರಲ್ಲಿ ಟ್ರಾನ್ಸ್‌ವಾಲಿಗೂ, ೧೯೦೭ರಲ್ಲಿ "ಆರೆಂಜ್ ರಿವರ್ ಕಾಲೊನಿ" (Orange River Colony) ಗೂ, ಸ್ವರಾಜ್ಯವು ಬಂತು. ಕೇಪ್ ಕಾಲೊನಿಯಲ್ಲಿ ಮೊದಲಿನಿಂದಲೂ ಸ್ವರಾಜ್ಯವಿತ್ತು. ನೇಟಾಲಿಗೆ ೧೮೯೩ರಲ್ಲಿಯೇ ಈ ಅನುಕೂಲ್ಯವು ಉಂಟಾಗಿತ್ತು. ಈ ನಾಲ್ಕು ಪ್ರಾಂತಗಳನ್ನೂ ಒಟ್ಟುಗೂಡಿಸಿ ಫೆಡರಲ್ ಸರಕಾರವನ್ನೇರ್ಪಡಿಸುವ ಪ್ರಯತ್ನವು ನಡೆದು, ೧೯೦೯ರಲ್ಲಿ ಬ್ರಿಟಿಷ್ ಪಾರ್ಲಿಮೆಂಟಿನವರು ಇದಕ್ಕೆ ಅಪ್ಪಣೆಯನ್ನು ಕೊಟ್ಟರು. ಪರಸ್ಪರ ವೈಷಮ್ಯಭಾವದಿಂದಕೂಡಿ ಮೊನ್ನೆ ಮೊನ್ನೆ ಯುದ್ಧವನ್ನು ಮುಗಿಸಿದ ಬ್ರಿಟಿಷ್ ಮತ್ತು ಬೋವರ್ ಜನರಿಂದಕೂಡಿದ ಈ ನಾಲ್ಕುದೇಶಗಳನ್ನೂ ಒಟ್ಟುಗೂಡಿಸಿದುದು ಸಾಮಾನ್ಯವಿಷಯವಲ್ಲ. ಈಗಿನ ಫೆಡರಲ್ ಸರಕಾರದಲ್ಲಿ ಬ್ರಿಟಿಷ್ ಜನರೂ ಬೋವರ್ ಜನರೂ, ಮೈತ್ರಿಯಿಂದಲೂ, ಸಮಾನಭಾವದಿಂದಲೂ ಇದ್ದಾರೆ.

ಇನ್ನು ಉಳಿದುದು ನಮ್ಮ ಭರತಖಂಡದ ವಿಷಯ. ಇಂಡಿಯಾದೇಶವು ಮೊದಲು ಕಂಪೆನಿಯವರ ಆಡಳಿತಕ್ಕೆ ಒಳಪಟ್ಟಿದ್ದುದನ್ನೂ, ಕಂಪೆನಿಯವರ ಆಧಿಪತ್ಯಕ್ರಮದಲ್ಲಿದ್ದ ನ್ಯೂನತೆಗಳನ್ನು ಪರಿಹರಿಸುವ ನೆವದಿಂದ ತನ್ನ ಉದ್ದೇಶವನ್ನು ಪೂರ್ತಿಮಾಡಿಕೊಳ್ಳುವುದಕ್ಕಾಗಿ ಫಾಕ್ಸನು ೧೭೮೩ರಲ್ಲಿ ಇಂಡಿಯಾ ಬಿಲ್ಲನ್ನು ತಂದುದನ್ನೂ, ಅದು ನಿರಾಕೃತವಾದುದನ್ನೂ, ನಾವು ಹಿಂದೆ ತಿಳಿದುಕೊಂಡಿರುತ್ತೇವೆ. ಮಾರನೆಯ ವರುಷ, ಪಿಟ್ಟನು ಬಂದು ಇಂಡಿಯಾ ಬಿಲ್ಲನ್ನು ತಂದನು. ಅದು ಆಚರಣೆಗೆ ಬಂತು. ಅದರಿಂದ "ಬೋರ್ಡ್ ಆಫ್ ಕಂಟ್ರೋಲ್" ಎಂಬ ಸಭೆಯೊಂದು ನಿಯಮಿತವಾಗಿ ಇಂಡಿಯಾದೇಶದಲ್ಲಿ ಕಂಪೆನಿಯವರು ಮಾಡುತ್ತಿದ್ದ ಆಧಿಪತ್ಯದ ವಿಷಯದಲ್ಲಿ ಈ ಸಭೆಯವರು ಮೇಲ್ವಿಚಾರಣೆ ಮಾಡಬೇಕೆಂದೂ, ಆದರೆ ಕಂಪೆನಿಯವರು ನಡೆಯಿಸುತ್ತಿದ್ದ ವ್ಯಾಪಾರದ ವಿಷಯಕ್ಕೆ ಮಾತ್ರ ಸಭೆಯವರು ಕೈಹಾಕಕೂಡದೆಂದೂ ಗೊತ್ತಾಯಿತು. ಎರಡುಮುಖದಿಂದ ಕೂಡಿದ್ದ ಈ ಆಧಿಪತ್ಯಕ್ರಮವೇ ಆಗಿಂದಾಗ ತಿದ್ದುಪಾಟಾಗಿ, ೧೮೫೭ರಲ್ಲಿ ನಡೆದ ಇಂಡಿಯದ ದಂಗೆಯು ಮುಗಿಯುವವರೆಗೂ ನೆಲೆಗೊಂಡಿತ್ತು. ಈ ಮಧ್ಯೆ ೧೮೩೩ರಲ್ಲಿ ಕಂಪೆನಿಯವರು ತಾವು ಮಾತ್ರವೇ ಇಂಡಿಯಾದೇಶದಲ್ಲಿ ವ್ಯಾಪಾರ ಮಾಡಬೇಕೆಂದು ಪಡೆದುಕೊಂಡಿದ್ದ ಸರ್ವಾಧಿಕಾರವನ್ನು ಕಳೆದುಕೊಳ್ಳಬೇಕಾಯಿತು. ದಂಗೆಯನ್ನಡಗಿಸಿದ ಮೇಲೆ ೧೮೫೮ರಲ್ಲಿ ಬ್ರಿಟಿಷ್ ಸರಕಾರದವರೇ ಸ್ವಂತವಾಗಿ ಇಂಡಿಯಾದೇಶದ ಆಡಳಿತವನ್ನು ವಹಿಸಿಕೊಂಡರು.

ಇಂಡಿಯಾದೇಶದ ಆಡಳಿತಗಳನ್ನು ನೋಡಿಕೊಳ್ಳಲು ಬ್ರಿಟಿಷ್ ಸರಕಾರದವರು ಒಬ್ಬ ಸೆಕ್ರೆಟರಿಯನ್ನು ನಿಯಮಿಸಿರುತ್ತಾರೆ. ಈತನ ಸಹಾಯಕ್ಕಾಗಿ ಒಂದು ಸಭೆಯು ಇರುತ್ತದೆ. ಇದರಲ್ಲಿ ನಾಲ್ಕು ವರುಷ ಅಧಿಕಾರದಲ್ಲಿರುವವರಾದ ಹತ್ತು ಅಥವಾ ಹೆಚ್ಚು ಮಂದಿ ಸದಸ್ಯರಿರುವರು. ಇವರಲ್ಲಿ ಒಂಬತ್ತು ಮಂದಿ ಕನಿಷ್ಠಪಕ್ಷ ಹತ್ತುವರುಷವಾದರೂ ಇಂಡಿಯಾದೇಶದಲ್ಲಿ ಕೆಲಸ ಮಾಡಿದವರಾಗಿರಬೇಕು. ಸೆಕ್ರೆಟರಿಯು ಸದಸ್ಯರ ಅನುಮತಿಯಿಂದ ಕೆಲಸ ಮಾಡಬೇಕು ಆದರೆ ಅವಶ್ಯಬಿದ್ದಾಗ ಹಾಗೆಮಾಡದೆ ತನ್ನ ಇಷ್ಟಾನುಸಾರವಾಗಿ ನಡೆಯಬಹುದು. ಆತನು ಕ್ಯಾಬಿನೆಟ್ ಸಭೆಗೂ ಸೇರಿರುತ್ತಾನೆ; ಅಲ್ಲದೆ, ಕ್ಯಾಬಿನೆಟ್ಟಿನ ಹೇಳಿಕೆಯನ್ನನುಸರಿಸಿ ಕಾರ್ಯಗಳನ್ನು ನಡೆಯಿಸುತ್ತಾನೆ. ಇಂಡಿಯಾದೇಶದ ಬಡ್ಜೆಟ್ಟನ್ನು ವರುಷವರುಷವೂ ಪಾರ್ಲಿಮೆಂಟಿನವರ ಸಮ್ಮತಿಗೆ ಕಳುಹಿಸಬೇಕಾದುದು ಆವಶ್ಯಕ. ಇಂಡಿಯಾದೇಶಕ್ಕೆ ಇಂಗ್ಲೆಂಡಿನ ದೊರೆಯವರು ಚಕ್ರವರ್ತಿಯವರಾಗಿರುತ್ತಾರೆ. ಇಂಡಿಯಾ ಚಕ್ರವರ್ತಿಗಳ ಪ್ರತಿನಿಧಿಯಾಗಿ ಅವರಿಂದ ನಿಯಮಿತರಾದ ವೈಸ್ರಾಯಿಯೊಬ್ಬರು ಇರುತ್ತಾರೆ.

ಈ ಅಧಿಕಾರವನ್ನು ವಹಿಸುವವರನ್ನು ಐದುವರುಷಗಳಿಗೊಮ್ಮೆ ಬದುಲಾಯಿಸುವ ಪದ್ಧತಿ ಇದೆ. ಇವರಿಗೆ ಸಹಾಯಮಾಡಲು ಒಂದು ಆಡಳಿತದಸಭೆಯೂ ಒಂದು ನ್ಯಾಯವಿಧಾಯಕಸಭೆಯೂ ಇರುವುವು. ಈ ಸಭೆಯವರು ವಿಧಿಸಿದ ನಿಯಮಗಳನ್ನು ಬ್ರಿಟಿಷ್ ಸರಕಾರದವರು ಅನುಮೋದಿಸಿದಮೇಲೆ ಆಚರಣೆಗೆ ತರಬೇಕು. ಸ್ಥಳೀಯಆಧಿಪತ್ಯಕ್ಕಾಗಿ ಇಂಡಿಯಾ ದೇಶವನ್ನು ಏಳು ಭಾಗವಾಗಿ ವಿಂಗಡಿಸಿರುತ್ತಾರೆ. ಇವುಗಳಲ್ಲಿ ಮದ್ರಾಸ್, ಬೊಂಬಾಯಿ ಮತ್ತು ಬಂಗಾಳವೆಂಬ ಮೂರು ದೊಡ್ಡ ಆಧಿಪತ್ಯಗಳಿಗೆ ಬಹಳಕಾಲದಿಂದಲೂ ಬ್ರಿಟಿಷ್ ಸರಕಾರದಿಂದ ನಿಯಮಿತರಾದ ಗವರ್ನರುಗಳಿರುತ್ತಾರೆ. ಈಚೆಗೆ ಸಂಯುಕ್ತ ಸಂಸ್ಥಾನ (ಆಗ್ರಾ ಮತ್ತು ಅಯೋಧ್ಯೆ), ಪಂಜಾಬ್, ಅಸ್ಸಾಮ್ ಬಿಹಾರ್ ಮತ್ತು ಒರಿಸ್ಸಾಗಳಿಗೂ ಗೌರ್ನರುಗಳನ್ನು ನಿಯಮಿಸಬೇಕೆಂದು ನಿರ್ಣಯವಾಗಿದೆ. ಬರ್ಮಾ ಮಧ್ಯಪ್ರಾಂತಗಳಲ್ಲಿ ವೈಸ್ರಾಯರು ನಿಯಮಿಸುವ ಲೆಫ್ಟಿನೆಂಟ್ ಗವರ್ನರುಗಳು ಆಡಳಿತಗಳನ್ನು ನಡೆಯಿಸುತ್ತಾರೆ. ಗವರ್ನರುಗಳಿಗೂ, ಲೆಫ್ಟಿನೆಂಟ್ ಗವರ್ನರುಗಳಿಗೂ ಸಹಾಯ ಮಾಡಲು ಸಭೆಗಳಿವೆ.

ಈಚೆಗೆ ಭರತಖಂಡಕ್ಕೆ ಸ್ವರಾಜ್ಯವನ್ನು ಕೊಡುವ ವಿಷಯದಲ್ಲಿ ಹೋರಾಟವು ಹತ್ತಿದೆ. ಇಂಡಿಯಾದೇಶದ ರಾಜ್ಯಭಾರಕ್ರಮದಲ್ಲಿ ಕೆಲವು ಪರಿಷ್ಕರಣಗಳನ್ನು ಮಾಡುವುದು ಅವಶ್ಯವೆಂದು ಬ್ರಿಟಿಷ್ ಸರಕಾರದವರು ಪರ್ಯಾಲೋಚನೆಗೆ ತಂದುಕೊಂಡು ಆ ಅಭಿಪ್ರಾಯವನ್ನು ೧೯೧೭ನೆ ಇಸವಿ ಆಗಸ್ಟ್ ಇಪ್ಪತ್ತನೆಯ ತಾರೀಖಿನ ದಿವಸ ಪಾರ್ಲಿಮೆಂಟ್ ಸಭೆಯಲ್ಲಿ ಸೂಚಿಸಿದರು. ಸಾರ್ವಭೌಮ ಸರಕಾರದವರು ಇಲ್ಲಿಯ ವಿದ್ಯಮಾನಗಳನ್ನೆಲ್ಲಾ ತಿಳದುಕೊಂಡುಬರಲು ಸ್ಟೇಟ್ ಸೆಕ್ರೆಟರಿಯವರಾದ ಮಿ॥ ಮಾಂಟೆಗ್ಯುಯವರನ್ನು ಇಲ್ಲಿಗೆ ಕಳುಹಿಸಿದರು. ಪ್ರಜೆಗಳಲ್ಲಿ ಪ್ರಮುಖರಾದವರ ಬಿನ್ನಹವನ್ನೂ, ಸ್ಥಳೀಯ ಅಧಿಕಾರಿಗಳ ಸಲಹೆಯನ್ನೂ, ಲಾಲಿಸುವುದಕ್ಕಾಗಿ ಅವರೂ ವೈಸ್ರಾಯರೂ ಬೊಂಬಾಯಿ, ಕಲಕತ್ತ ಮುಂತಾದ ಪಟ್ಟಣಗಳನ್ನು ಸುತ್ತಿಕೊಂಡು, ದೆಹಲಿಗೆ ಹೋಗಿ ಯಾವವಿಧವಾದ ಪರಿಷ್ಕರಣಗಳಾಗಬೇಕೆಂಬ ವಿಷಯದಲ್ಲಿ ಮಸೂದೆಯೊಂದನ್ನು ಸಿದ್ಧಪಡಿಸಿದರು. ಇಂಡಿಯಾ ಸರಕಾರದವರು ಕಳುಹಿಸಿಕೊಟ್ಟ ಆ ಮಸೂದೆಯನ್ನು ಇಂಗ್ಲೆಂಡಿನ ಪಾರ್ಲಿಮೆಂಟಿನವರು ಪರಿಶೀಲಿಸಿ ಕೆಲವು ಬದಲಾವಣೆಗಳನ್ನು ಮಾಡಿ ಭಾರತೀಯರಿಗೆ ಮೊದಲಿಗಿಂತಲೂ ಹೆಚ್ಚು ಸ್ವಾತಂತ್ರ್ಯವನ್ನು ಕಲ್ಪಿಸಿಕೊಟ್ಟಿರುವರು.

---

# ಇಪ್ಪತ್ತೈದನೆಯ ಪ್ರಕರಣ.

## ಬ್ರಿಟಿಷ್ ಸರಕಾರಕ್ಕೂ ಮತ್ತು ಸ್ವಾಸ್ಥ್ಯಗಳಿಗೂ ಇರುವ ಸಂಬಂಧ.

ಎರಡನೆಯ ಛಾರಲ್ಸ್ ದೊರೆಯ ಕಾಲದಲ್ಲಿ ವಸತಿಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವುದಕ್ಕಾಗಿ ಪ್ರಿವಿಕೌನ್ಸಿಲಿನಲ್ಲಿ ಒಂದು ಕಮಿಟಿಯು ಏರ್ಪಾಡಾಗಿತ್ತು. ಮುಂದೆ ಅನೇಕ ಬದಲಾವಣೆಗಳು ನಡೆದು ೧೬೯೫ರಲ್ಲಿ ವಸತಿಗಳ ವಿಷಯವಾಗಿ ಸಲಹೆಗಳನ್ನು ಕೊಡುವುದಕ್ಕಾಗಿ "ಬೋರ್ಡ್ಆಫ್ ಟ್ರೇಡ್ ಅಂಡ್ ಪ್ಲ್ಯಾಂಟೇಷನ್ಸ್" (Board of Trade and Plantations) ಎಂಬ ಸಭೆಯು ನಿಯಮಿತವಾಯಿತು. ಹದಿನೆಂಟನೆಯ ಶತಮಾನದಲ್ಲಿ ಅನೇಕ ಮಾರ್ಪುಗಳುಂಟಾದುವು. ೧೭೬೮ರಲ್ಲಿ "ಕಲೋನ್ಯಿಯಲ್ ಸೆಕ್ರೆಟರಿ" (Colonial Secretary) ಎಂಬ ಅಧಿಕಾರಿಯು ನಿಯಮಿತನಾದನು. ೧೭೮೨ರಲ್ಲಿ ಈ ಅಧಿಕಾರವನ್ನು ತೆಗೆದುಹಾಕಿ, ಕಾಲೊನಿಗಳ ವಿಚಾರವನ್ನು 'ಹೋಂ ಆಫೀಸಿಗೆ' (Home Office) ವಹಿಸಲಾಯಿತು. ೧೭೮೬ರಲ್ಲಿ ವಾಣಿಜ್ಯದ ಮತ್ತು ಸ್ವಾಸ್ಥ್ಯಗಳ ವಿಚಾರವನ್ನು ನೋಡಿಕೊಳ್ಳಲು ಒಂದು ಕಮಿಟಿ (Committee for Trade and Plantations) ಯು ಹೊಸದಾಗಿ ಸ್ಥಾಪಿತವಾಯಿತು. ಈ ಕಮಿಟಿಯೇ ಇಂದಿನ "ಬೋರ್ಡ್ ಆಫ್ ಟ್ರೇಡ್" ಎಂಬ ಸಭೆಯಾಗಿ ಪರಿಣಮಿಸಿರುತ್ತದೆ. ೧೭೯೪ರಲ್ಲಿ ಯುದ್ಧವಿಚಾರಕ್ಕಾಗಿ ಒಬ್ಬ ಸ್ಟೇಟ್ ಸೆಕ್ರೆಟರಿಯನ್ನು ನಿಯಮಿಸಿ, ಕಾಲೊನಿಗಳ ವಿಚಾರವನ್ನೂ ಆತನಿಗೆ ವಹಿಸಿದರು. ಇದರಿಂದ ಕೆಲಸಗಳು ಸಮರ್ಪಕವಾಗಿ ನಡೆಯಲಿಲ್ಲ. ಆದಕಾರಣ, ೧೮೫೪ರಲ್ಲಿ ಈ ಏರ್ಪಾಡನ್ನು ತೆಗೆದುಹಾಕಿ ಕಾಲೊನಿಗಳ ವಿಚಾರವನ್ನು ನೋಡಿಕೊಳ್ಳಲು ಪ್ರತ್ಯೇಕವಾಗಿ ಒಬ್ಬ ಸ್ಟೇಟ್ ಸೆಕ್ರೆಟರಿಯನ್ನು ನಿಯಮಿಸಲಾಯಿತು.

ಸ್ವಾಸ್ಥ್ಯಗಳ ವಿದ್ಯಮಾನಗಳನ್ನು ತಿಳಿದುಕೊಳ್ಳಲು ಬ್ರಿಟಿಷ್ ಸರಕಾರದವರು ಲಾರ್ಡ್ ಡರ್ಹಾಂ ಅವರನ್ನು ಕಳುಹಿಸಿದ್ದುದು ಸರಿಯಷ್ಟೆ. ಸ್ವಾಸ್ಥ್ಯಗಳಲ್ಲಿ ಆಡಳಿತವು ಸರಿಯಾಗಿ ನಡೆಯದೇ ಇದ್ದುದಕ್ಕೆ ಅವರು ಎರಡುಕಾರಣಗಳನ್ನು ಹೇಳಿದರು: (೧) ಸ್ವಾಸ್ಥ್ಯಗಳ ವಿಚಾರವನ್ನು ನೋಡಿಕೊಳ್ಳುವುದಕ್ಕೆ ಮೇಲೆಹೇಳಿದಂತೆ ಇಂದು ಒಬ್ಬರನ್ನೂ, ನಾಳೆ ಮತ್ತೊಬ್ಬರನ್ನೂ ನಿಯಮಿಸುತ್ತಿದ್ದುದು. (೨) ಸ್ವಾಸ್ಥ್ಯಗಳ ವಿಚಾರವನ್ನು ಹ್ವಿಗ್, ಟೋರಿ ಮುಂತಾದ ಪಂಗಡಗಳ ಹೋರಾಟಕ್ಕೆ ಸಂಬಂಧಿಸುವುದು.

ಈಗ, ಸ್ವಾಸ್ಥ್ಯಗಳ ವಿಚಾರವನ್ನು ನೋಡಿಕೊಳ್ಳುವುದಕ್ಕಾಗಿ ಪ್ರತ್ಯೇಕವಾಗಿ ಒಬ್ಬ ಸ್ಟೇಟ್ ಸೆಕ್ರೆಟರಿಯು ಇರುವುದರಿಂದಲೂ, ಸ್ವಾಸ್ಥ್ಯಗಳ ವಿಚಾರಕ್ಕೂ, ಲಿಬರಲ್ ಮತ್ತು ಕನ್‌ಸರ್ವೆಟಿವ್ ಪಂಗಡಗಳ ಹೋರಾಟಕ್ಕೂ ಸಂಬಂಧವಿಲ್ಲದೇ ಇರುವುದರಿಂದಲೂ, ಈ ನ್ಯೂನತೆಗಳು ಸರಿಹೋಗಿರುತ್ತವೆ ಅಂತು, ಸ್ವಲ್ಪಕಾಲದವರೆಗೆ ಸ್ವಾಸ್ಥ್ಯಗಳ ವಿಷಯದಲ್ಲಿ ಸರಿಯಾದ ಏರ್ಪಾಡುಗಳಾಗದೇ ಇದ್ದುದರಿಂದ ಅವರಲ್ಲಿ ಸ್ವಪ್ರಯತ್ನವು ಹೆಚ್ಚಾಗಲು ಅನುಕೂಲವಾಯಿತು.

ಸ್ವಾಸ್ಥ್ಯಗಳಮೇಲೆ ಬ್ರಿಟಿಷ್ ಸರಕಾರದವರು ವಹಿಸಿರುವ ಅಧಿಕಾರವು ಮುಖ್ಯವಾಗಿ ನ್ಯಾಯವಿಧಾಯಕವಾದುದೆಂದೂ, ಆಡಳಿತವಿಚಾರವಾದುದೆಂದೂ, (Legislative and Executive) ಎರಡು ವಿಧವಾಗಿರುತ್ತದೆ. ಸ್ವಾಸ್ಥ್ಯಗಳಿಗೆ ತೆರಿಗೆಗಳನ್ನು ವಿಧಿಸಲು ಬ್ರಿಟಿಷ್ ಸರಕಾರಕ್ಕೆ ಅಧಿಕಾರವಿದ್ದರೂ ಕೂಡ, ಅವರು ಸಾಮಾನ್ಯವಾಗಿ ಆ ಅಧಿಕಾರವನ್ನು ನಡೆಯಿಸುವುದಿಲ್ಲ. ಸ್ವಾಸ್ಥ್ಯಗಳಿಗೆ ಸಂಬಂಧಪಡುವ ನಿಬಂಧನೆಗಳನ್ನು ಮಾಡುವಾಗ ಅವರ ಅನುಮತಿಯನ್ನು ಕೇಳಿ ಬಳಿಕ ನಿಬಂಧನೆಗಳನ್ನು ವಿಧಿಸುವ ಪದ್ಧತಿಯುಂಟಾಯಿತು. ಆದರೂ, ಬ್ರಿಟಿಷ್ ಸರಕಾರದವರಿಗೆ ತಾವೇ ಸ್ವಂತವಾಗಿ ಇಂತಹ ನಿಬಂಧನೆಗಳನ್ನು ವಿಧಿಸಲು ಅಧಿಕಾರವಿಲ್ಲವೆಂದೇನೂ ಅರ್ಥವಲ್ಲ. ಇಂಗ್ಲೆಂಡಿನ ದೊರೆಗಳು ಮಂತ್ರಿಗಳು ಅಪೇಕ್ಷಿಸಿದವರನ್ನು ಸ್ವಾಸ್ಥ್ಯಗಳ ಗವರ್ನರ್ ಕೆಲಸಕ್ಕೆ ನಿಯಮಿಸುವ ವಾಡಿಕೆಯು ಇರುತ್ತದೆ. ಹೀಗೆ ನಿಯಮಿತರಾದವರು ಆರುವರುಷ ಕೆಲಸದಲ್ಲಿರತಕ್ಕದ್ದು. ಇವರು ಕೆಲಸಕ್ಕೆ ಹೊರಡುವಾಗ ಇವರ ಕರ್ತವ್ಯವನ್ನು ಕುರಿತು ಬುದ್ಧಿವಾದವನ್ನು ಹೇಳಲಾಗುತ್ತದೆ. ಅಲ್ಲದೆ, ಇವರು ಕೆಲಸದಲ್ಲಿರುವಾಗಲೂ ಇವರು ಹೇಗೆ ನಡೆಯಬೇಕೆಂಬ ವಿಚಾರದಲ್ಲಿ ಬ್ರಿಟಿಷ್ ಸರಕಾರದವರು ಆಗಾಗ ಬುದ್ಧಿವಾದವನ್ನು ಹೇಳುವುದುಂಟು. ಇಂಗ್ಲೆಂಡಿಗೆ ಪ್ರಭುಗಳು ಹೇಗೋ, ಸ್ವಾಸ್ಥ್ಯಗಳಿಗೆ ಗವರ್ನರುಗಳೂ ಹಾಗೇ. ಯುದ್ಧಕಾಲಗಳಲ್ಲಿ ಸ್ವಾಸ್ಥ್ಯಗಳಿಂದ ಬ್ರಿಟಿಷ್ ಸರಕಾರಕ್ಕೆ ಎಷ್ಟೋ ಸಹಾಯವು ದೊರೆಯುತ್ತದೆ. ಇದಕ್ಕೆ ಈಚೆಗೆ ನಿಂತ ಘೋರವಾದ ಯುದ್ಧದಲ್ಲಿ ಸ್ವಾಸ್ಥ್ಯಗಳು ಮಾಡಿರುವ ಅಪಾರವಾದ ಸಹಾಯವೇ ನಿದರ್ಶನವಾಗಿರುತ್ತದೆ. ಯುದ್ಧಕಾಲದಲ್ಲಿ ಸ್ವಾಸ್ಥ್ಯಗಳವರು ತಾವು ಯಾವ ಪಕ್ಷಕ್ಕೂ ಸೇರಿದವರಲ್ಲವೆಂದು ಹೇಳಿ ತಟಸ್ಥ (Neutrals) ರಾಗಿರಲೇಕೂಡದು ; ಇಂತಹ ವೇಳೆಯಲ್ಲಿ ಅವರು ಬ್ರಿಟಿಷ್ ಸರಕಾರದವರ ಪಕ್ಷವನ್ನೇ ವಹಿಸಬೇಕು. ಈಚೆಗೆ ನಡೆದ ಯುದ್ಧದಲ್ಲಿ ಎಲ್ಲಾ ಸ್ವಾಸ್ಥ್ಯಗಳವರೂ ಬ್ರಿಟಿಷರ ಪಕ್ಷಕ್ಕೆ ಸೇರಿದ್ದುದನ್ನು ಜ್ಞಾಪಿಸಿಕೊಂಡರೆ ಈ ವಿಷಯವು ಚೆನ್ನಾಗಿ ವ್ಯಕ್ತವಾಗುತ್ತದೆ.

---

# ಇಪ್ಪತ್ತಾರನೆಯ ಪ್ರಕರಣ.

## ಸ್ಕಾಟ್ಲೆಂಡ್ ಮತ್ತು ಐರ್ಲೆಂಡ್ ದೇಶಗಳ ವಿಚಾರ.

ಹದಿನೆಂಟನೆಯ ಶತಮಾನದ ಆದಿಭಾಗದಲ್ಲಿ ಇಂಗ್ಲೆಂಡ್ ಮತ್ತು ಸ್ಕಾಟ್ಲೆಂಡ್ ದೇಶಗಳು ಒಟ್ಟುಗೂಡಿದುವು. ಅಂತ್ಯಭಾಗದಲ್ಲಿ ಎಂದರೆ ೧೮೦೦ ನೆಯ ಇಸವಿಯಲ್ಲಿ ಐರ್ಲೆಂಡ್ ದೇಶವು ಇವೆರಡರ ಜೊತೆಗೂ ಸೇರಿತು.

ಸ್ಕಾಟ್ಲೆಂಡ್ ದೇಶದಲ್ಲಿಯೂ ಒಂದು ಪಾರ್ಲಿಮೆಂಟ್ ಸಭೆಯು ಹದಿನೇಳನೆಯ ಶತಮಾನದ ಕೊನೆಯವರೆಗೂ ಇತ್ತು. ಎರಡನೆಯ ಜೇಮ್ಸ್ ದೊರೆಯ ಆಳಿಕೆಯಿಂದ ಸ್ಕಾಟ್ಲೆಂಡಿನವರುಕೂಡ ಬೇಸತ್ತು, ಆತನು ಫ್ರಾನ್ಸಿಗೆ ಓಡಿಹೋದುದರಿಂದ ಸಿಂಹಾಸನವನ್ನು ಬಿಟ್ಟು ಹೋದಂತಾಯಿತೆಂದು ಹೇಳಿ, ತೆರವಾಗಿದ್ದ ಆ ಸಿಂಹಾಸನವನ್ನು ವಿಲಿಯಂದೊರೆಯೂ, ಮೇರಿ ರಾಣಿಯೂ ಏರಬೇಕೆಂದು ಪ್ರಾರ್ಥಿಸಿದರು. ವಿಲಿಯಂದೊರೆಯು, ಇಂಗ್ಲೆಂಡನ್ನೂ ಸ್ಕಾಟ್ಲೆಂಡನ್ನೂ ಒಟ್ಟುಗೂಡಿಸಿ, ಎರಡು ದೇಶಗಳಿಗೂ ಇಂಗ್ಲೆಂಡಿನ ಪಾರ್ಲಿಮೆಂಟ್ ಸಭೆಯೊಂದೇ ಇರುವಂತೆ ಮಾಡಲು ಯತ್ನಿಸಿದನು. ಅದು ಸಾಗಲಿಲ್ಲ. ತಾವು ಇಂಗ್ಲೆಂಡಿನೊಡನೆ ಸೇರುವುದಾದರೆ ತಮ್ಮ ಪ್ರೆಸ್‌ಬಿಟೇರಿಯನ್ ಮತವನ್ನು ಅನುಸರಿಸುವ ವಿಷಯದಲ್ಲಿ ಏಲ್ಲಿ ಅಡಚಣೆಯುಂಟಾಗುವುದೋ ಎಂದು ಸ್ಕಾಟ್ಲೆಂಡಿನವರು ಶಂಕಿಸಿದುದೇ ಇದಕ್ಕೆ ಕಾರಣ. ಕೊನೆಗೆ ೧೭೦೭ ನೆಯ ಇಸವಿಯಲ್ಲಿ ಅನ್‌ರಾಣಿಯ ಕಾಲದಲ್ಲಿ ಎರಡು ದೇಶದ ಪಾರ್ಲಿಮೆಂಟಿನವರೂ ಈ ವಿಧದ ಐಕಮತ್ಯಕ್ಕೆ ಒಪ್ಪಿ ಒಂದು ನಿಬಂಧನೆಯನ್ನು ಮಾಡಿದರು. ಸ್ಕಾಟ್ಲೆಂಡಿನವರು ತಮ್ಮ ನ್ಯಾಯ ನಿಬಂಧನೆಗಳಿಗೂ, ಪ್ರೆಸ್‌ಬಿಟೇರಿಯನ್ ಮತಕ್ಕೂ, ಅನುಸಾರವಾಗಿ ನಡೆಯಬಹುದೆಂದು ಗೊತ್ತಾಯಿತು; ಎರಡು ದೇಶದ ರಾಷ್ಟ್ರೀಯ ಸಾಲಗಳಲ್ಲಿಯೂ (National Debts) ಸಮತೆಯುಂಟಾಗುವಂತೆ ಮಾಡಲು ಇಂಗ್ಲೆಂಡಿನವರು ಸ್ಕಾಟ್ಲೆಂಡಿನವರಿಗೆ ನಾಲ್ಕುಲಕ್ಷ ಪೌಂಡುಗಳನ್ನು ಕೊಟ್ಟರು; ಸ್ಕಾಟ್ಲೆಂಡಿನವರಿಗೆ ವಾಣಿಜ್ಯದಲ್ಲಿ ಎಲ್ಲಾ ಅನುಕೂಲ್ಯಗಳೂ ಕಲ್ಪಿತವಾದುವು; ಈ ಎರಡು ರಾಜ್ಯಗಳಿಗೂ ಗ್ರೇಟ್ ಬ್ರಿಟನ್ ಎಂಬ ಹೆಸರಿರತಕ್ಕದೆಂದೂ, ಸ್ಕಾಟ್ಲೆಂಡಿನಲ್ಲಿ ಪಾರ್ಲಿಮೆಂಟ್ ಸಭೆಯು ಇರುವುದು ತಪ್ಪಿ, ಸ್ಕಾಟ್ಲೆಂಡಿನಿಂದ ಇಂಗ್ಲೆಂಡಿನ ಪ್ರತಿನಿಧಿಸಭೆಗೆ ನಾಲ್ವತ್ತೈದುಮಂದಿ ಪ್ರತಿನಿಧಿಗಳೂ, ಶ್ರೀಮಂತಸಭೆಗೆ ಹದಿನಾರುಮಂದಿ ಪ್ರಭುಗಳೂ (Peers) ಬರತಕ್ಕದೆಂದೂ, ನಿರ್ಣಯವಾಯಿತು.

ಈ ಎರಡು ದೇಶಗಳೂ ಹೀಗೆ ಒಟ್ಟುಗೂಡಿದಮೇಲೆ ಸ್ಕಾಟ್ಲೆಂಡಿನವರಿಗೆ ಸ್ವಲ್ಪಕಾಲ ಅಸಂತುಷ್ಟತೆಯು ಉಂಟಾಗಿದ್ದು, ಬಳಿಕ ಸರಿಹೋಯಿತು. ಕಳೆದ ಇನ್ನೂರು ವರುಷಗಳಿಂದ ಒಟ್ಟು ಜನಾಂಗದ ಅಭಿವೃದ್ಧಿಗೂ, ಚಕ್ರಾಧಿಪತ್ಯದ ಏಳಿಗೆಗೂ, ಅವರು ಎಷ್ಟೋ ಸಹಾಯಮಾಡಿರುತ್ತಾರೆ. ಈಚೆಗೆ ಸ್ಥಳೀಯವಾದ ಆಡಳಿತಗಳನ್ನು ತಾವೇ ನೆರವೇರಿಸಿಕೊಳ್ಳುವ (Local Self-Government) ವಿಚಾರದಲ್ಲಿ ತಮ್ಮ ಅಧಿಕಾರವು ಹೆಚ್ಚಬೇಕೆಂದು ಸ್ಕಾಟ್ಲೆಂಡಿನವರು ಅಪೇಕ್ಷಿಸುತ್ತಿದಾರೆ. ಆದರೂ, ಇಂಗ್ಲೆಂಡಿನವರಿಗೂ, ಅವರಿಗೂ, ಯಾವ ವಿಧವಾದ ದೇಶ ವೈಷಮ್ಯ ಭಾವವೂ ಇಲ್ಲ.

ಐರ್ಲೆಂಡ್ ದೇಶವು ಬಹುಕಾಲದಿಂದಲೂ ಇಂಗ್ಲೆಂಡಿನ ಅಧೀನವಲ್ಲಿಯೇ ಇತ್ತು. ಆದರೂ, ಇಂಗ್ಲೆಂಡಿನಿಂದ ಬಂದು ಅಲ್ಲಿ ನೆಲೆಸಿದ್ದವರು ಕಲ್ಪಿಸಿದ ಪಾರ್ಲಿಮೆಂಟ್ ಸಭೆಯೊಂದು ಆ ದೇಶದಲ್ಲಿತ್ತು. ಈ ಪಾರ್ಲಿಮೆಂಟನವರು ಇಂಗ್ಲೆಂಡಿನಲ್ಲಿ ಅದುವರೆಗೆ ಆಚರಣೆಯಲ್ಲಿದ್ದ ನ್ಯಾಯನಿಬಂಧನೆಗಳು ಐರ್ಲೆಂಡಿನಲ್ಲಿಯೂ ಆಚರಣೆಗೆ ಬರತಕ್ಕುದೆಂದೂ, ಆ ದೇಶದ ಪಾರ್ಲಿಮೆಂಟಿಗೆ ಇಂಗ್ಲೆಂಡಿನ ಕೌನ್ಸಿಲ್ ಸಭೆಯವರ ಅನುಮತಿ ಇಲ್ಲದೆ ಯಾವ ಬಿಲ್ಲನ್ನೂ ತರಲಾಗದೆಂದೂ ವಿಧಿಸುವುದಕ್ಕಾಗಿ ೧೪೯೪ ರಲ್ಲಿ 'ಪಾಯ್ನಿಂಗ್ಸ್ ಲಾ' (Poyning's Law) ಎಂಬ ನಿಬಂಧನೆಯನ್ನು ಮಾಡಿದರು. ಆದುದರಿಂದ, ಐರ್ಲೆಂಡಿನ ಜನರು ತಮ್ಮ ಸಮ್ಮತಿ ಇಲ್ಲದೆ ಇಂಗ್ಲೆಂಡಿನ ಕೌನ್ಸಿಲ್ಲಿಗೆ ಅಧೀನರಾಗಲೇಬೇಕಾಯಿತು. ('ರೆಫರ್ಮೇಷನ್' ಎಂಬ ಪರಿಷ್ಕರಣವಾಗಿ), ಇಂಗ್ಲೆಂಡಿಗೆ ಪ್ರಾಟೆಸ್ಟೆಂಟ್ ಮತವು ಬಂದಮೇಲೆ, ಐರ್ಲೆಂಡಿನಲ್ಲಿ ಕ್ಯಾಥೊಲಿಕರು ದೊಡ್ಡ ಕೆಲಸಗಳಿಗೆ ಬರಕೂಡದೆಂದು ಅಪ್ಪಣೆಯಾಯಿತು. ಐರ್ಲೆಂಡಿನ ಪ್ರಜೆಗಳು ಕ್ಯಾಥೊಲಿಕರಾದಕಾರಣ ಈ ನಿಬಂಧನೆಯಿಂದ ಅವರಿಗೆ ಅಸಮಾಧಾನವಾಯಿತು. ೧೬೮೮ ರಲ್ಲಿ ರಾಜ್ಯವಿಪ್ಲವವು ನಡೆದ ಬಳಿಕ, ಕ್ಯಾಥೊಲಿಕರು ಪ್ರತಿನಿಧಿಗಳ ಚುನಾವಣೆಯಲ್ಲಿ ಓಟುಗಳನ್ನು ಕೊಡಕೂಡದೆಂದೂ, ಅವರು ಪಾರ್ಲಿಮೆಂಟ್ ಸಭೆಗೆ ಹೋಗಕೂಡದೆಂದೂ, ವಿಧಾಯಕವಾಯಿತು. ಐರ್ಲೆಂಡಿನವರು ಪ್ರಾಟೆಸ್ಟೆಂಟ್ ಮತವನ್ನನುಸರಿಸುವಂತೆ ಮಾಡುವುದು ಅಸಾಧ್ಯವಾಯಿತು. ಮೊದಲನೆಯ ಜಾರ್ಜ್ ದೊರೆಯ ಕಾಲದಲ್ಲಿ ಐರ್ಲೆಂಡಿಗೆ ನ್ಯಾಯನಿಬಂಧನೆಗಳನ್ನು ವಿಧಿಸುವುದಕ್ಕೆ ತನಗೆ ಪೂರ್ಣಾಧಿಕಾರವುಂಟೆಂದು ಇಂಗ್ಲಿಷ್ ಪಾರ್ಲಿಮೆಂಟಿನವರು ಕಾಯಿದೆಯನ್ನು ಮಾಡಿದರು. ಆದರೆ, ರಾಕಿಂಘಾಮನ ಮಂತ್ರಿತ್ವದಲ್ಲಿ ಈ ಕಾಯಿದೆಯೂ, ಪಾಯ್ನಿಂಗ್ಸ್ ಆಕ್ಟೂ, ೧೭೮೨ರಲ್ಲಿ ರದ್ದಾಗಲು, ಬಳಿಕ ಐರ್ಲೆಂಡಿನ ಪಾರ್ಲಿಮೆಂಟನವರಿಗೆ ತಮ್ಮ

ದೇಶಕ್ಕೆ ಬೇಕಾದ ನ್ಯಾಯನಿಬಂಧನೆಗಳನ್ನು ತಾವೇ ಕಲ್ಪಿಸಿಕೊಳ್ಳುವ ಅಧಿಕಾರವು ಬಂತು.

೧೭೯೩ನೆಯ ಇಸವಿಯಲ್ಲಿ ಪಿಟ್ಟನು, ಪ್ರತಿನಿಧಿತ್ವವೇ ಮೊದಲಾದ ವಿಚಾರಗಳಲ್ಲಿ ಕ್ಯಾಥೊಲಿಕರಿಗೆ ವಿರೋಧವಾಗಿದ್ದ ನಿಬಂಧನೆಗಳನ್ನು ತೆಗೆದು ಹಾಕುವುದಕ್ಕೆ ಐರ್ಲೆಂಡಿನ ಪಾರ್ಲಿಮೆಂಟಿನವರು ಮನಸ್ಸು ಕೊಡುವಂತೆ ಮಾಡಿದನು. ಆದರೂ, ಕ್ಯಾಥೊಲಿಕರಿಗೆ ಪಾರ್ಲಿಮೆಂಟಿನಲ್ಲಿ ಕುಳ್ಳಿರುವ ಅಧಿಕಾರವು ಬೇರೆ ಬರಲಿಲ್ಲ. ಅಲ್ಲಿಯ ಪಾರ್ಲಿಮೆಂಟಿನಲ್ಲಿ ಐರ್ಲೆಂಡಿನವರಿಗೆ ಸರಿಯಾದ ಪ್ರತಿನಿಧಿತ್ವವಿಲ್ಲದೆ ಇದ್ದುದರಿಂದ, ಆ ಸಭೆಯಿಂದ ಜನರ ಕಷ್ಟಗಳು ಪರಿಹಾರವಾಗುವುದಕ್ಕೆ ಅವಕಾಶವಿಲ್ಲದೆ ಹೋಯಿತು. ಆದುದರಿಂದ ಫ್ರಾನ್ಸ್ ದೇಶದ 'ಫ್ರೆಂಚ್ ರೆವೆಲ್ಯೂಷನ್' ಎಂಬ ವಿಪ್ಲವದ ಉದಾಹರಣೆಯಿಂದ ಉತ್ತೇಜನವನ್ನು ಪಡೆದಿದ್ದ ಐರ್ಲೆಂಡಿನ ಪ್ರಜೆಗಳು ೧೭೯೮ರಲ್ಲಿ ದಂಗೆ ಎದ್ದರು. ದಂಗೆಯನ್ನೇನೊ ಅಡಗಿಸಿದುದಾಯಿತು. ಐರ್ಲೆಂಡನ್ನು ಗ್ರೇಟ್ ಬ್ರಿಟನ್ನಿಗೆ ಸೇರಿಸಿಕೊಂಡುಬಿಡುವುದಾದರೆ, ಬ್ರಿಟಿಷ್ ಪಾರ್ಲಿಮೆಂಟಿನ ಮೂಲಕವಾಗಿ ಐರ್ಲೆಂಡಿನವರ ಕಷ್ಟಗಳನ್ನು ನಿವಾರಣೆಮಾಡಿ ಅಲ್ಲಿಯ ಕ್ಯಾಥೊಲಿಕರಿಗೆ ಸ್ವಾತಂತ್ರ್ಯವನ್ನು ಕೊಡಲು ಸುಲಭವಾಗುವುದೆಂದು ಪಿಟ್ಟನು ಯೋಚಿಸಿದನು.

೧೮೦೦ನೆಯ ಇಸವಿಯಲ್ಲಿ ನಡೆದ "ಯೂನಿಯನ ಆಕ್ಟ್" ಎಂಬ ನಿಬಂಧನೆಯಿಂದ, ಐರ್ಲೆಂಡನ್ನು ಗ್ರೇಟ್ ಬ್ರಿಟನ್ನಿಗೆ ಸೇರಿಸಿಕೊಂಡರು. ಐರ್ಲೆಂಡಿನಿಂದ ಬ್ರಿಟಿಷ್ ಪ್ರತಿನಿಧಿಸಭೆಗೆ ನೂರುಮಂದಿ ಪ್ರತಿನಿಧಿಗಳೂ, ಶ್ರೀಮಂತ ಸಭೆಗೆ ಇಪ್ಪತ್ತೆಂಟು ಮಂದಿ ಪ್ರಭುಗಳೂ (Peers) ಬರುವಂತಾಯಿತು. ಐರ್ಲೆಂಡಿನಲ್ಲಿದ್ದ ಪಾರ್ಲಿಮೆಂಟನ್ನು ತೆಗೆದುಹಾಕಿದರು; 'ಎಪಿಸ್ಕೊಪೇಲಿಯರ್ನ' (Protestant Episcopalian) ಮತವೇ ಐರ್ಲೆಂಡಿನ ಮುಖ್ಯ ಮತವಾಗಿರಬೇಕೆಂದೂ, ಅಲ್ಲಿಯ ಇಬ್ಬರು ಬಿಷಪ್ಪರೂ, ಇಬ್ಬರು ಆರ್ಚ್ ಬಿಷಪ್ಪರೂ, ಬ್ರಿಟಿಷ್ ಶ್ರೀಮಂತಸಭೆಯಲ್ಲಿ ಇಂಗ್ಲಿಷ್ ಬಿಷಪ್ ಮತ್ತು ಆರ್ಚ್‌ಬಿಷಪ್ಪುಗಳೊಡನೆ ಕುಳಿತುಕೊಳ್ಳಬಹುದೆಂದೂ ಏರ್ಪಾಡಾಯಿತು. ಆದರೂ, ತಮ್ಮ ದೇಶದ ಆಡಳಿತದ ವಿಚಾರದಲ್ಲಿ ಐರ್ಲೆಂಡಿನವರಿಗೆ ಹಿಂದೆಯೂ ಹೆಚ್ಚು ಸ್ವಾತಂತ್ರ್ಯವಿರಲಿಲ್ಲ; ಈಗಲೂ ಸ್ವಾತಂತ್ರ್ಯವು ಬರಲಿಲ್ಲ. ಐರ್ಲೆಂಡಿನ ಕ್ಯಾಥೊಲಿಕರಿಗೆ ಸ್ವಾತಂತ್ರ್ಯವನ್ನುಂಟುಮಾಡಿಕೊಡುವ ವಿಷಯದಲ್ಲಿ ಪಿಟ್ಟನ ಅಭಿಪ್ರಾಯವು ನೆರವೇರಲಿಲ್ಲ. ಆತನಿಗೂ ಮೂರನೆಯ ಜಾರ್ಜ್ ದೊರೆಗೂ, ಈ ವಿಷಯದಲ್ಲಿ ಭಿನ್ನಾಭಿಪ್ರಾಯವು ಹುಟ್ಟಿದುದೇ ಇದಕ್ಕೆ ಕಾರಣ. ಹೀಗಾದುದ

ರಿಂದಲೇ ಪಿಟ್ಟನು ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟದು. ಆದರೂ, ೧೮೨೯ ರಲ್ಲಿ ಕ್ಯಾಥೊಲಿಕರು ಪಾರ್ಲಿಮೆಂಟಗೆ ಬರಬಹುದೆಂದು ಗೊತ್ತಾಯಿತು. ಆದರೇನು? ತಮ್ಮ ದೇಶದಲ್ಲಿ ತಮಗೆ ವಿರೋಧವಾದ ಎಪಿಸ್ಕೊಪೇಲಿಯನ್ ಮತವು ಸ್ಥಾಪಿತವಾದುದು, ಐರ್ಲೆಂಡಿನವರ ಮನಸ್ಸಿನಲ್ಲಿ ಕುದಿಯುತ್ತಲೇ ಇತ್ತು. ಕೊನೆಗೆ ೧೮೬೯ ನೆಯ ಇಸವಿಯಲ್ಲಿ ವಿಕ್ಟೋರಿಯಾ ರಾಣಿಯವರ ಕೃಪೆಯಿಂದ ಈ ನ್ಯೂನತೆಯು ಪರಿಹಾರವಾಗಿ ಐರ್ಲೆಂಡಿನವರ ಮನಸ್ಸಿಗೆ ನೆಮ್ಮದಿಯಾಯಿತು.

ಬಳಿಕ ಐರ್ಲೆಂಡಿನವರು ತಮಗೆ 'ಹೋಂ ರೂಲ್' (Home Rule) ಎಂದರೆ ಸ್ವರಾಜ್ಯವು ಬೇಕೆಂದು ಹೋರಾಡತೊಡಗಿದರು. ಪ್ರಧಾನ ಸಚಿವರಾಗಿದ್ದ ಗ್ಲ್ಯಾಡ್ಸ್ಟನ್ ಎಂಬವರು ಈ ವಿಚಾರದಲ್ಲಿ ಎರಡು ಸಾರಿ ಬಿಲ್ಲನ್ನು ತಂದರು. (೧೮೮೬, ೧೮೯೩). ಪಾರ್ಲಿಮೆಂಟನವರು ಆ ಬಿಲ್ಲನ್ನು ಆಚರಣೆಗೆ ತರಲು ಒಪ್ಪಲಿಲ್ಲ. ಐರ್ಲೆಂಡಿನವರು ಹೋಂ ರೂಲಿಗಾಗಿ ಹೋರಾಡುತ್ತಲೇ ಇರುವರು. ಬ್ರಿಟಿಷ್ ಸರಕಾರದವರು ಈ ವಿಷಯವನ್ನು ಈಗ ತಮ್ಮ ಘನವಾದ ಆಲೋಚನೆಗೆ ತಂದುಕೊಂಡಿರುತ್ತಾರೆ. ಐರ್ಲೆಂಡಿಗೆ ಹೋಂರೂಲನ್ನು ಕೊಡುವ ಉದ್ದೇಶದಿಂದ ಒಂದು 'ಬಿಲ್ಲು' (ಮಸೂದೆಯು) ಪಾರ್ಲಿಮೆಂಟನವರ ಪರ್ಯಾಲೋಚನೆಯಲ್ಲಿರುತ್ತದೆ. ಇದರ ಫಲಿತಾಂಶವು ಮುಂದೆ ಗೊತ್ತಾಗಬೇಕು.

ಸಂಪೂರ್ಣ.



## ಆಂಗ್ಲೇಯರಾಜ್ಯಭಾರಚರಿತ್ರೆ.

### ಅನುಕ್ರಮಣಿಕೆ.

---

ಫ



ಬ



ಮ

## ಯ



## ರ



## ಲ



## ವ

# ಶೋಧನಪತ್ರಿಕೆ.

---

| ಪುಟ. | ಪಙ್ಕ್ತಿ. | ಅಶುದ್ಧ | ಶುದ್ಧ |
|---|---|---|---|
| ೩ | ೧೩ | ಉದಾರ | ಉದ್ಧಾರ |
| ೪ | ೧೩-೧೪ | ಷೈರುವಿಳಿಂದ | ಷೈರುಗಳಿಂದ |
| ೧೮ | ೧೯ | ಅಭಿವೃದ್ದಿಗೆ | ಅಭಿವೃದ್ಧಿಗೆ |
| ೨೫ | ೧೦ | ಬರವಮಾಡಿದುಂದು | ಬರವಮಾಡಿದುದೊಂದು |
| ,, | ೨೩ | ಅಸಾದ್ಯವಾಯಿತು | ಅಸಾಧ್ಯವಾಯಿತು |
| ೫೨ | ೫ | ಮಾತನಡಿಸುವಂತೆಯೇ | ಮಾತನಾಡಿಸುವಂತೆಯೇ |
| ೬೧ | ೨೫ | ಆಳಿತದ | ಆಡಳಿತದ |
| ೬೨ | ೨೬ | ವಿದೇಶಿಯನಾದ | ವಿದೇಶೀಯನಾಥ |
| ೬೬ | ೧೫ | ತತ್ಕಾಲಿಕವಾಗಿ | ತಾತ್ಕಾಲಿಕವಾಗಿ |
| ೬೯ | ೬ | ಯುದವು | ಯುದ್ಧವು |
| ,, | ೯ | ಪದತಿಯು | ಪದ್ಧತಿಯು |
| ೩೩ | ೨೪ | ಪರ್ಲಿಮೆಂಟಿನವರು | ಪಾರ್ಲಿಮೆಂಟಿನವರು |
| ೧೦೩ | ೧೩ | ತತ್ಕಾಲಿಕವಾಗಿ | ತಾತ್ಕಾಲಿಕವಾಗಿ |
| ೧೦೩ | ೧೩ | ತತ್ಕಾಲಿಕವಾಗಿ | ತಾತ್ಕಾಲಿಕವಾಗಿ |
| ೧೨೧ | ೨ | ಕ್ರಾಥೊಲಿಕರ | ಕ್ಯಾಥೊಲಿಕರ |
| ೧೪೮ | ೧೬ | ಪ್ರಸ್ತಾಪವೇ | ಪ್ರಸ್ತಾವವೇ |
| ೧೫೦ | ೫ | ಇಗಿನ | ಈಗಿನ |
| ೧೫೩ | ೨೪ | ಪದತಿಗಳು | ಪದ್ಧತಿಗಳು |
| ೧೫೮ | ೨ | ಸಭೆಯ | ಸಭೆಯು |
| ೧೬೨ | ೧೦ | ಗಂಡಪು | ಗಂಡುವು |
| ೧೬೪ | ೧೧ | ೧೮೮೯ | ೧೮೮೬ |

---